# ಕನ್ನಡ ಸಾಹಿತ್ಯದಲ್ಲಿ ಕೊಡಗರ ಸಂಸ್ಕೃತಿಯ ವಿನ್ಯಾಸಗಳು

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್. ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ


ಸಂಶೋಧಕರು

ನಾಗಣ್ಣ ಡಿ. ಎ.





ಮಾರ್ಗದರ್ಶಕರು

ಡಾ. ಬಿ. ಪಿ. ಸಂಪತ್ ಕುಮಾರ
ಮುಖ್ಯಸ್ಥರು, ಕನ್ನಡ ವಿಭಾಗ
ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು
ಉಜಿರೆ, ದಕ್ಷಿಣ ಕನ್ನಡ- ೫೭೪೨೪೦

ಮಾನ್ಯತಾ ಸಂಸ್ಥೆ

ಡಾ. ಹಾಮಾನಾ ಸಂಶೋಧನ ಕೇಂದ್ರ
ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು
ಉಜಿರೆ, ದಕ್ಷಿಣ ಕನ್ನಡ- ೫೭೪೨೪೦





ಭಾಷಾನಿಕಾಯ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩೨೭೬

೨೦೧೮

# ಕನ್ನಡ ಸಾಹಿತ್ಯದಲ್ಲಿ ಕೊಡಗರ ಸಂಸ್ಕೃತಿಯ ವಿನ್ಯಾಸಗಳು

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್. ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ


**ಸಂಶೋಧಕರು**

ನಾಗಣ್ಣ ಡಿ. ಎ.





**ಮಾರ್ಗದರ್ಶಕರು**

ಡಾ. ಬಿ. ಪಿ. ಸಂಪತ್ ಕುಮಾರ
ಮುಖ್ಯಸ್ಥರು, ಕನ್ನಡ ವಿಭಾಗ
ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು
ಉಜಿರೆ, ದಕ್ಷಿಣ ಕನ್ನಡ- ೫೭೪೨೪೦



**ಮಾನ್ಯತಾ ಸಂಸ್ಥೆ**

ಡಾ. ಹಾಮಾನಾ ಸಂಶೋಧನ ಕೇಂದ್ರ
ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು
ಉಜಿರೆ, ದಕ್ಷಿಣ ಕನ್ನಡ- ೫೭೪೨೪೦






ಭಾಷಾನಿಕಾಯ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩೨೭೬

೨೦೧೮

# ಪ್ರಮಾಣ ಪತ್ರ

ಕನ್ನಡ ಸಾಹಿತ್ಯದಲ್ಲಿ ಕೊಡಗರ ಸಂಸ್ಕೃತಿಯ ವಿನ್ಯಾಸಗಳು ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ. ಬಿ. ಪಿ. ಸಂಪತ್ ಕುಮಾರ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾನಿಕಾಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಪಿಎಚ್. ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ: ೦೩-೦೯-೨೦೧೮

ಸ್ಥಳ : ಉಜಿರೆ

ಸಂಶೋಧಕರು

ನಾಗಣ್ಣ ಡಿ. ಎ.
ಕನ್ನಡ ಉಪನ್ಯಾಸಕ
ಎಸ್.ಡಿ.ಎಂ. ವಸತಿ ಪಿ. ಯು. ಕಾಲೇಜು
ಉಜಿರೆ, ದ. ಕ. ಜಿಲ್ಲೆ

# ದೃಢೀಕರಣ ಪತ್ರ

ಕನ್ನಡ ಸಾಹಿತ್ಯದಲ್ಲಿ ಕೊಡಗರ ಸಂಸ್ಕೃತಿಯ ವಿನ್ಯಾಸಗಳು ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ನಾಗಣ್ಣ ಡಿ. ಎ.** ಅವರು ನನ್ನ ಮಾರ್ಗದರ್ಶನದಲ್ಲಿ ಪಿಎಚ್. ಡಿ. ಪದವಿಗಾಗಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ: ೦೩-೦೯-೨೦೧೮

ಸ್ಥಳ : ಉಜಿರೆ

ಮಾರ್ಗದರ್ಶಕರು

(ಡಾ. ಬಿ. ಪಿ. ಸಂಪತ್ ಕುಮಾರ)

ಡಾ. ಬಿ. ಪಿ. ಸಂಪತ್ ಕುಮಾರ
ಮುಖ್ಯಸ್ಥ, ಕನ್ನಡ ವಿಭಾಗ
ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು
ಉಜಿರೆ - ೫೭೪ ೨೪೦

# ಪರಿವಿಡಿ

# ಅಧ್ಯಾಯ – ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

೧.೧. ಪ್ರಸ್ತಾವನೆ

೧.೨. ಅಧ್ಯಯನದ ಉದ್ದೇಶ

೧.೩. ಅಧ್ಯಯನದ ವ್ಯಾಪ್ತಿ

೧.೪. ಅಧ್ಯಯನ ವಿಧಾನ

೧.೫. ಅಧ್ಯಯನದ ಸ್ವರೂಪ

೧.೬. ಇದುವರೆಗಿನ ಅಧ್ಯಯನಗಳ ಸಮೀಕ್ಷೆ

# ಅಧ್ಯಾಯ – ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

## ೧.೧. ಪ್ರಸ್ತಾವನೆ

ಸಂಸ್ಕೃತಿಯನ್ನು ಕುರಿತು ಅಧ್ಯಯನ, ಚರ್ಚೆ, ಸಂಶೋಧನೆಗಳು ವ್ಯಾಪಕವಾಗಿ ನಡೆಯುತ್ತಿರುವುದು ಸಮಕಾಲೀನ ಸಂದರ್ಭದಲ್ಲಿ ಮಹತ್ವಪೂರ್ಣವಾಗಿದೆ. ಈ ರೀತಿಯ ಅಧ್ಯಯನಗಳು ನಡೆಯುತ್ತಿರುವುದು ತೀರಾ ಇತ್ತೀಚೆಗೇನಲ್ಲ. ಇದು ಸುಮಾರು ಒಂದು ಶತಮಾನಗಳಿಂದಲೂ ನಡೆದುಬರುತ್ತಿವೆ. ಆದರೆ ಆಗಿನಿಂದಲೂ ಸಂಸ್ಕೃತಿಯನ್ನು ಒಂದೇ ಅರ್ಥದಲ್ಲಿ ಪರಿಭಾವಿಸಲಾಗಿಲ್ಲವೆಂಬುದು ಗೊತ್ತಾಗುತ್ತದೆ. "ಮನುಷ್ಯನನ್ನು ಪ್ರಾಣಿಗಳಿಂದ ಬೇರ್ಪಡಿಸುವ ಲಕ್ಷಣವೇ ಸಂಸ್ಕೃತಿ ಎನ್ನುವಂತದ್ದು ಈ ಕುರಿತ ಚಿಂತನೆಯ ಮೊದಲ ನಿರ್ವಚನ. ಪ್ರಾಣಿಗಳಿಗೆ ವಾಕ್‌ಶಕ್ತಿಯಿಲ್ಲ, ಸಾಮಾಜಿಕ ಸಂಘಟನೆಯಿಲ್ಲ, ಹಿಂದಿನ ತಿಳಿವಳಿಕೆಯನ್ನು ಗ್ರಹಿಸಿ ತಮ್ಮ ವರ್ತಮಾನವನ್ನು ರೂಪಿಸಿಕೊಳ್ಳಬಹುದೆನ್ನುವ ವಿವೇಚನೆಯಿಲ್ಲ. ಮನುಷ್ಯನಿಗಾದರೋ ಈ ಮೂರೂ ಇವೆ, ಹೀಗೆ ಈ ಮೂರರ ಇರುವಿಕೆಯನ್ನೇ ಸಂಸ್ಕೃತಿ"[೧] ಎಂಬುದನ್ನು ನೋಡಿದಾಗ ಸಾಂದರ್ಭಿಕವಾಗಿ ಈ ಪದವನ್ನು ಅರ್ಥೈಸಿ ಕೇವಲ ಪ್ರಾಣಿಗಳಿಂದ ಮನುಷ್ಯ ಪ್ರತ್ಯೇಕವಾಗಿರುವುದನ್ನು 'ಸಂಸ್ಕೃತಿ' ಎಂದು ಗುರುತಿಸಿರುವುದು ಸ್ಪಷ್ಟವಾಗುತ್ತದೆ. ಮುಂದುವರೆದು "ಮನುಷ್ಯ ಸಮಾಜ ಮತ್ತು ಪ್ರಾಣಿ ಸಮಾಜಗಳ ನಡುವೆ ಕೆಲವು ಸಾಮ್ಯಾಂಶಗಳು ಇವೆಯಾದರೂ ಸಂಸ್ಕೃತಿಯ ವಿಷಯಕ್ಕೆ ಬಂದಾಗ ಎರಡೂ ಪ್ರತ್ಯೇಕವಾಗಿ ನಿಲ್ಲುತ್ತವೆ"[೨] ಎನ್ನುವಲ್ಲಿ ಪ್ರಾಣಿಗಳು ಮತ್ತು ಮನುಷ್ಯ ಎರಡೂ ವರ್ಗಗಳಿಗೂ ಪ್ರತ್ಯೇಕ ಸಂಸ್ಕೃತಿಯಿರುತ್ತದೆ ಎಂದು ತಿಳಿಯಬಹುದು. ಆದರೆ ಮನುಷ್ಯನ ಸಂಸ್ಕೃತಿಯನ್ನು ಮಾತ್ರ ವಿಶೇಷವಾಗಿ ಅಧ್ಯಯನಕ್ಕೊಳಪಡಿಸುತ್ತಿರುವುದನ್ನು ಕಾಣಬಹುದು.

ಸಮಾಜ ಎಂದ ಮೇಲೆ ಅಲ್ಲಿ ಎಲ್ಲಾ ವರ್ಗದ, ಜಾತಿಯ, ಧರ್ಮದ ಜನಸಮುದಾಯದವರು ವಾಸಿಸುತ್ತಿರುತ್ತಾರೆ. ಅವರಲ್ಲಿ ಶ್ರೀಮಂತರಿರಬಹುದು, ಬಡವರಿರಬಹುದು. ಇದಾವುದೂ ಇಲ್ಲಿ ಮುಖ್ಯವಾಗಿರುವುದಿಲ್ಲ. ಮನುಷ್ಯರಿದ್ದ ಕಡೆ ಸಂಸ್ಕೃತಿ ಇದ್ದೇ ಇರುತ್ತದೆ. ಒಂದು ಸಮುದಾಯದ ಸಂಸ್ಕೃತಿ ಅತ್ಯಂತ ಸ್ಥಿರವೂ, ಸ್ಪಷ್ಟವೂ ಆಗಿರುವಂತೆ ಮೇಲ್ನೋಟಕ್ಕೆ ತೋರಿದರೂ ವಾಸ್ತವವಾಗಿ ಪ್ರತಿಯೊಂದು ಸಂಸ್ಕೃತಿಯೂ ನಿರಂತರವಾದ ಬದಲಾವಣೆಯನ್ನು ಹೊಂದುತ್ತಾ ಸಾಗುತ್ತಿರುತ್ತದೆ. ಪ್ರತಿಯೊಂದು ಜನಸಮುದಾಯಕ್ಕೂ ತನ್ನದೇ ಆದ ಸಂಸ್ಕೃತಿ, ಜೀವನ ವಿಧಾನಗಳಿದ್ದರೂ ಇವುಗಳಲ್ಲಿ ಕಾಲಕ್ರಮೇಣ ಹಲವಾರು ಕಾರಣಗಳಿಂದಾಗಿ ಬದಲಾವಣೆಗಳು ಕಂಡುಬರುತ್ತವೆ. ಯಾವ ಬದಲಾವಣೆಗಳಿಗೂ ಒಳಪಡದೆ ತನ್ನ ಮೂಲ ಸ್ವರೂಪದಲ್ಲಿಯೇ ಮುಂದುವರೆದುಕೊಂಡು ಬಂದಿರುವ ಮಾನವ ಸಮಾಜ

ಅಥವಾ ಸಂಸ್ಕೃತಿ ಇಲ್ಲವೆಂದೇ ಹೇಳಬೇಕಾಗುತ್ತದೆ. ಸಾವಿರಾರು ವರ್ಷಗಳ ಮಾನವನ ಬದುಕನ್ನು ಅವಲೋಕಿಸಿದರೆ 'ಸಂಸ್ಕೃತಿ' ವಿಸ್ತಾರವಾಗುತ್ತಾ ಬಂದಿರುವುದನ್ನು ಕಾಣಬಹುದು. ಅದು ಸಾಮಾಜಿಕ, ಧಾರ್ಮಿಕ, ರಾಜಕೀಯ ಮತ್ತು ಆರ್ಥಿಕ ಕಾರಣಗಳಿಂದಾಗಿರಬಹುದು. ಆದರೆ ಯಾವುದೇ ಪ್ರಬಲವಾದ ಒತ್ತಡಕ್ಕೆ ಮಣಿದು ಸಂಸ್ಕೃತಿ ಏಕಾಏಕಿ ಬದಲಾವಣೆಯಾಗುವುದಿಲ್ಲ ಎಂಬುದನ್ನು ಗಮನಿಸಬೇಕು.

ಮಾನವರ ಬದುಕನ್ನು ಗುರುತಿಸಲು ಮಾನದಂಡವನ್ನಾಗಿಸಿಕೊಂಡಿರುವ ಈ 'ಸಂಸ್ಕೃತಿ' ಕುರಿತು ಹಲವಾರು ವಿದ್ವಾಂಸರ ವಿಚಾರಧಾರೆಗಳನ್ನು ಹೀಗೆ ಪಟ್ಟಿ ಮಾಡಬಹುದು. ಸಂಸ್ಕೃತಿ ಕುರಿತು ಆಳವಾದ ಅಧ್ಯಯನ ಮಾಡಿರುವ ಡಿ.ವಿ.ಜಿ. ಅವರು "ಸಂಸ್ಕೃತಿಯೆಂದರೆ ಮನುಷ್ಯರ ಅನ್ಯೋನ್ಯ ಸಂಬಂಧಗಳಲ್ಲಿ ನಯವಿನಯಗಳ ಸೊಬಗು, ಸ್ವಗುಣ, ಪರಗುಣಗಳ ಸಂಮಿಶ್ರಿತ ಕಾಂತಿ"[೩] ಎಂದು ಹೇಳಿದರೆ, ಲಿಂಟನ್ ಎಂಬ ವಿದ್ವಾಂಸ "ಒಂದು ನಿರ್ದಿಷ್ಟ ಸಮಾಜದ ಸದಸ್ಯರು ಹಂಚಿಕೊಳ್ಳುವ ಹಾಗೂ ಪ್ರಸಾರ ಮಾಡುವ ಜ್ಞಾನ, ದೃಷ್ಟಿಕೋನ ಮತ್ತು ಸ್ವಾಭಾವಿಕ ನಡವಳಿಕೆಯ ನಮೂನೆಗಳ ಒಟ್ಟು ಮೊತ್ತವೇ ಸಂಸ್ಕೃತಿ"[೪] ಎಂದೂ ಮತ್ತೊಬ್ಬ ಪಾಶ್ಚಾತ್ಯ ವಿದ್ವಾಂಸ ಟೈಲರ್ "ಸಮಾಜದ ಒಬ್ಬ ಸದಸ್ಯನಾಗಿ ಮನುಷ್ಯನು ಗಳಿಸಿಕೊಂಡ ಜ್ಞಾನ, ನಂಬಿಕೆ, ನೀತಿ ನಿಯಮ, ಆಚರಣೆ, ಸ್ವಭಾವ ಮತ್ತು ಯಾವುದೇ ಶಕ್ತ ಸ್ಥಿತಿಯನ್ನು ಒಳಗೊಳ್ಳುವ ಒಂದು ಸಂಕೀರ್ಣವೇ ಸಂಸ್ಕೃತಿ"[೫] ಎಂದು ಹೇಳಿದ್ದಾರೆ.

ಈ ಮೇಲಿನ ವಿದ್ವಾಂಸರ ಅಭಿಪ್ರಾಯಗಳನ್ನು ಗಮನಿಸಿದರೆ 'ಸಂಸ್ಕೃತಿ' ಎಂಬುದು ಮಾನವನ ಯಾವುದೋ ಒಂದು ಕಾಲದ ನಿರ್ದಿಷ್ಟ ವಿಚಾರಗಳಿಗೆ ಸೀಮಿತವಾಗದೆ ಇಡೀ ಬದುಕಿನ ನಿರಂತರ ಕ್ರಿಯೆಗಳಿಗೆ ಅನ್ವಯವಾಗುತ್ತದೆ ಎಂಬುದು ಸ್ಪಷ್ಟವಾಗುತ್ತದೆ. ಸಂಸ್ಕೃತಿಯ ಪಸರುವಿಕೆ ಯಾವುದೇ ಜಾತಿ, ಧರ್ಮ, ಶ್ರೀಮಂತ, ಬಡವ ಎಂಬ ಅಂತರವಿಲ್ಲದೆ ನಡೆಯತ್ತದೆ. ಕೊಡಗಿನ ಸಂಸ್ಕೃತಿಯ ವಿಚಾರದಲ್ಲಿಯೂ ಈ ಅಂಶಗಳು ಎದ್ದು ಕಾಣುತ್ತವೆ.

"ಸಂಸ್ಕೃತಿ ಎನ್ನುವಂತಹ ಒಂದು ಸಂಗತಿ ವಾಸ್ತವದಲ್ಲಿ ಇಲ್ಲ. ಪರಂಪರೆ, ನಾಗರಿಕತೆ ಮುಂತಾದವುಗಳಂತೆ ಇದೂ ಒಂದು ಬೌದ್ಧಿಕ ರಚನೆ. ನಾವು ತುಂಬಿದ ಅರ್ಥವನ್ನು ಪಡೆದುಕೊಂಡು ಬಳಕೆಯಾಗುವ ಪರಿಭಾಷೆ"[೬] ಎಂಬ ವಿಚಾರ ಮೇಲಿನ ವಿದ್ವಾಂಸರ ವ್ಯಾಖ್ಯಾನಗಳಿಗೆ ಪೂರಕವೆಂಬಂತೆ ಕಾಣುವುದರೊಂದಿಗೆ ಸಮಕಾಲೀನವಾಗಿ ನಡೆಯುತ್ತಿರುವ ಅಧ್ಯಯನಗಳಿಗೂ ಅನ್ವಯವಾಗುತ್ತದೆ. ಈ ಹಿನ್ನೆಲೆಯನ್ನು ಮುಖ್ಯವಾಗಿಟ್ಟುಕೊಂಡು ಪ್ರಸ್ತುತ ಅಧ್ಯಯನವನ್ನು ನಡೆಸಲಾಗಿದೆ.

ಪ್ರತಿಯೊಂದು ಜೀವಸಂಕುಲದಲ್ಲೂ ಸಂಸ್ಕೃತಿ ಏಕರೂಪಿಯಾಗಿಲ್ಲದಿರುವುದನ್ನು ಕಂಡುಕೊಳ್ಳಲಾಗಿದೆ. ಇಲ್ಲದಿದ್ದಲ್ಲಿ ಸಂಸ್ಕೃತಿ ಆಧಾರಿತ ಅಧ್ಯಯನಗಳು, ಸಂಶೋಧನೆಗಳು ನಡೆಯುತ್ತಲೇ ಇರಲಿಲ್ಲವೆನಿಸುತ್ತದೆ. ಮಾನವರಲ್ಲಿ ಮತ್ತು ಪ್ರಾಣಿಗಳಲ್ಲಿ ಈ ಸಂಸ್ಕೃತಿ ಯಾವಾಗಲೂ ಒಂದೇ ತೆರನಾಗಿಯೂ ಇರುವುದಿಲ್ಲ. ಆ ಕಾರಣಕ್ಕಾಗಿಯೇ ಆಗಾಗ್ಗೆ

ಜನಸಮುದಾಯಗಳಲ್ಲಿ ಉಂಟಾಗುತ್ತಿರುವ ಸಾಂಸ್ಕೃತಿಕ ಚಲನಶೀಲತೆಯನ್ನು ಕಂಡುಕೊಳ್ಳುವುದಕ್ಕಾಗಿ ನಿರಂತರ ಅಧ್ಯಯನಗಳು ನಡೆಯುತ್ತಿವೆ.

ಪ್ರಧಾನ ಸಂಸ್ಕೃತಿಯೊಂದು ಅದೇ ಪರಿಸರದಲ್ಲಿ ವಾಸಿಸುವ ಮತ್ತೊಂದು ಸಂಸ್ಕೃತಿಯ ಮೇಲೆ ಗಾಢ ಪ್ರಭಾವ ಬೀರುವುದು ಸಹಜವಾಗಿದೆ. ಅಂತೆಯೇ ಇಲ್ಲಿ ವಾಸಿಸುತ್ತಿರುವ ಅನೇಕ ತಳಸಮುದಾಯಗಳಿಗೂ ಇದು ಅನ್ವಯಿಸುತ್ತದೆ. ಇದನ್ನು 'ಸಾಂಸ್ಕೃತಿಕ ಬಹುತ್ವ'[2] ಎಂದು ಕರೆಯಲಾಗುತ್ತದೆ. ಇಲ್ಲಿನ ಎರವರು, ಕೆಂಬಟ್ಟಿಯರು, ಅರೆಭಾಷೆ ಗೌಡರು ಮೊದಲಾದವರು 'ಕೊಡವ' ಸಂಸ್ಕೃತಿಯ ಭಾಗಗಳಾದ ಉಡುಗೆ-ತೊಡುಗೆ ಆಚಾರ-ವಿಚಾರ ಮೊದಲಾದವುಗಳನ್ನು ಸಂಪೂರ್ಣವಾಗಿಯಲ್ಲದಿದ್ದರೂ ಭಾಗಶ: ಅಳವಡಿಸಿ ಕೊಂಡಿರುವುದನ್ನು ಕಾಣಬಹುದು. ಪ್ರಧಾನ ಜನಾಂಗದ ಸಂಸ್ಕೃತಿಯೊಂದು ತನ್ನ ಸುತ್ತಮುತ್ತ ವಾಸಿಸುತ್ತಿರುವ ಇತರೆ ಜನಾಂಗದ ಸಂಸ್ಕೃತಿಯ ಮೇಲೆ ತೀವ್ರತರವಾದ ಪ್ರಭಾವವನ್ನು ಸಹಜವಾಗಿ ಬೀರುತ್ತದೆ. ಇದರಿಂದಾಗಿ ಇಲ್ಲಿನ ಅಧೀನ ಜನಾಂಗ ತನ್ನ ಸಂಸ್ಕೃತಿಯ ಅನನ್ಯತೆಯ ವಿಚಾರಗಳ ಜೊತೆಗೆ ಪ್ರಧಾನ ಸಂಸ್ಕೃತಿಯ ವಿಶಿಷ್ಟತೆಯನ್ನು ತನ್ನ ಸಂಸ್ಕೃತಿಯೊಡನೆ ಸೇರಿಸಿಕೊಂಡು ಸಮನ್ವಯವನ್ನು ಮೆರೆಯಲು ಸಾಧ್ಯವಾಗುತ್ತದೆ.

ಭೂಮಿ ಮೇಲೆ ಯಾವುದೇ ಜನಾಂಗದ ಸಂಸ್ಕೃತಿಯ ಅಧ್ಯಯನ ಪೂರ್ವಾಗ್ರಹ ರಹಿತವಾಗಿ ನಡೆಯಬೇಕಾದುದು ಅತಿ ಅವಶ್ಯಕ. ಆಯಾ ಜನಾಂಗದ ಸಂಸ್ಕೃತಿಯ ಆಚರಣೆ ಮತ್ತು ವಿಧಾನಗಳು ಅವರವರಿಗೆ ಶ್ರೇಷ್ಠವಾಗಿರುತ್ತವೆ. ಇಲ್ಲಿ ಕನಿಷ್ಠ ಮತ್ತು ಶ್ರೇಷ್ಠತೆಯ ವಿಂಗಡಣೆ ಕ್ರಮಗಳು ಬರಬಾರದು. ಒಂದು ಜನಾಂಗ ಬೆಳೆದುಬಂದಿರುವ ಹಿನ್ನೆಲೆಯನ್ನು ಗಮನಿಸಿ ಅಲ್ಲಿಯ ಸಾಂಸ್ಕೃತಿಕ ವೈವಿಧ್ಯತೆಯನ್ನು ಅರಿಯಬೇಕು. ಒಂದು ಪ್ರದೇಶದಲ್ಲಿ ವಾಸಿಸುತ್ತಿರುವ ಮೇಲ್ವರ್ಗದವರ ಶಿಷ್ಟ ಸಂಸ್ಕೃತಿಯು ಅಲ್ಲೇ ವಾಸಿಸುತ್ತಿರುವ ತಳಸಮುದಾಯದವರ ಸಂಸ್ಕೃತಿಗಿಂತ ಭಿನ್ನವಾಗಿದ್ದರೂ ಅದರ ಆಚರಣೆಯಲ್ಲಿ ಶ್ರೀಮಂತಿಕೆಯನ್ನು ಹೊಂದಿರುತ್ತದೆ. ಯಾವುದೇ ಸಮಾಜದಲ್ಲಿ ಒಂದು ಜನಾಂಗದ ಸಾಂಸ್ಕೃತಿಕ ಬದುಕು ಅನಾವರಣಗೊಳ್ಳುವುದು ಅದರ ಶ್ರೇಷ್ಠತೆಯಿಂದಲ್ಲ ಬದಲಾಗಿ ಅದರ ಆಚರಣೆಯಿಂದ ಎಂಬುದು ಬಹಳ ಮುಖ್ಯವಾಗುತ್ತದೆ. ಕೊಡಗು ಇಂಥ ಹಲವಾರು ವೈವಿಧ್ಯತೆಗಳಿಗೆ ಕಾರಣವಾಗುತ್ತದೆ.

ಕೊಡಗಿನ ಜನಸಮುದಾಯದ ಸಾಂಸ್ಕೃತಿಕ ಬದುಕು ಕೆಲವು ಒಂದೇ ರೀತಿಯಾಗಿದ್ದರೆ ಮತ್ತೆ ಕೆಲವು ಸಂಪೂರ್ಣ ಭಿನ್ನವಾಗಿವೆ. ಜನನ, ಮರಣ, ವಿವಾಹ, ಹಬ್ಬಗಳು, ಆಚರಣೆಗಳು, ಕೃಷಿ, ಬೇಟೆ, ಆಹಾರ ಉಡುಗೆ-ತೊಡುಗೆ ಜೀವನ ವಿಧಾನ, ವಸತಿ ವ್ಯವಸ್ಥೆ ಮೊದಲಾದವುಗಳು ಒಬ್ಬರಿಗೊಬ್ಬರಿಗೆ ಸಮೀಪವಾಗಿಯೂ ಮತ್ತು ದೂರವಾಗಿಯೂ ಇರುವುದನ್ನು ಗಮನಿಸಬಹುದು. ಕೊಡವ ಸಮುದಾಯದಿಂದ ಪ್ರಚಲಿತವಾದ ಕೈಲ್‌ಮುಹೂರ್ತ, ಕಾವೇರಿ ಸಂಕ್ರಮಣ ಮತ್ತು ಹುತ್ತರಿ ಹಬ್ಬಗಳನ್ನು ದಕ್ಷಿಣ ಭಾಗದ ಕೊಡಗಿನಲ್ಲಿ ವಾಸಿಸುವ ಎಲ್ಲಾ ವರ್ಗದ ಜಾತಿಯ ಜನರೂ ಅಲ್ಪ ಸ್ವಲ್ಪ ವ್ಯತ್ಯಾಸಗಳೊಂದಿಗೆ ಆಚರಿಸುವುದು ಕಾಣಬರುತ್ತದೆ.

"ನಾಗರಿಕ ಸಮಾಜದ ಅಂಚಿನಲ್ಲಿರುವ ಹಿಂದುಳಿದ ಅಥವಾ ಬುಡಕಟ್ಟು ಸಮುದಾಯದ ಸಾಮಾಜಿಕ ಆಚರಣೆಗಳ ವಿಶಿಷ್ಟ ಲೋಕವೇ ಸಂಸ್ಕೃತಿ ಎಂಬ ಮಾನಶಾಸ್ತ್ರಿಯ ವ್ಯಾಖ್ಯೆ ಈಗಲೂ ಕನ್ನಡದ ಜಾನಪದ ಬುಡಕಟ್ಟು ಅಧ್ಯಯನಗಳಲ್ಲಿ ಚಾಲ್ತಿಯಲ್ಲಿದೆ"[೮] ಎಂಬ ಅಂಶಗಳನ್ನೂ ಗಮನದಲ್ಲಿಟ್ಟುಕೊಂಡು ಕೊಡಗರ ಸಾಂಸ್ಕೃತಿಕ ಬದುಕನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಇಲ್ಲಿನ ಜನರ ಬದುಕು, ಬವಣೆ, ಸು:ಖ-ದು:ಖ, ಬಡತನ-ಸಿರಿತನ, ಬೌದ್ಧಿಕತೆ-ದಡ್ಡತನ, ಎಲ್ಲವನ್ನು ಸಂಸ್ಕೃತಿಯ ಪರಿಧಿಯೊಳಗೆ ಗುರುತಿಸಿಕೊಳ್ಳಲಾಗಿದೆ. ಮನುಷ್ಯನ ಜನನದಿಂದ ಮರಣದವರೆಗಿನ ಎಲ್ಲಾ ಚಲನಶೀಲ ಚಟುವಟಿಕೆಗಳನ್ನು 'ಸಂಸ್ಕೃತಿ' ಎಂದೇ ಅರ್ಥೈಸಿಕೊಂಡು ಅವುಗಳೆಲ್ಲವನ್ನೂ ಅಧ್ಯಯನದ ದೃಷ್ಟಿಯಿಂದ ಚರ್ಚಿಸಲಾಗಿದೆ.

ಕೊಡಗಿನ ಸಾಂಸ್ಕೃತಿಕ ವಿಚಾರಗಳು ಕನ್ನಡ ಸಾಹಿತ್ಯದ ಒಳಗೆ ಚಿತ್ರಿತಗೊಂಡಿರಬಹುದಾದ ವಿಧಾನಗಳು ಮತ್ತು ಆಚರಿಸಲ್ಪಡುತ್ತಿರುವ ಕ್ರಮಗಳ ಅಧ್ಯಯನ ನಡೆಸಲಾಗಿದೆ. ಕೊಡಗಿನ ಭೌತಿಕ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಕುರಿತು ರಚಿತವಾಗಿರುವ ಅನೇಕ ಕೃತಿಗಳು ನಮಗೆ ದೊರೆಯುತ್ತವೆ. ಮುಖ್ಯವಾಗಿ ಕಾವ್ಯ, ಕಥೆ, ಕಾದಂಬರಿ ಮತ್ತು ನಾಟಕಗಳನ್ನು ಆಕರಗಳನ್ನಾಗಿ ಅಧ್ಯಯನಕ್ಕೊಳಪಡಿಸಿಕೊಂಡು ಸಂಶೋಧನೆ ನಡೆಸಲಾಗಿದೆ. ಭಾರತೀಸುತರ ಅನೇಕ ಕಾದಂಬರಿಗಳು ನೇರವಾಗಿ ಕೊಡಗನ್ನೇ ಕೇಂದ್ರವಾಗಿಟ್ಟುಕೊಂಡು ರಚಿತವಾದವುಗಳೇ ಆಗಿವೆ. ಅದರಲ್ಲೂ ಇವರ ಬೆಳ್ಳಿ ಮೂಡಿತು, ಹುಲಿಯ ಹಾಲಿನ ಮೇವು, ಬಯಲುದಾರಿ ಕಾದಂಬರಿಗಳಲ್ಲಿ ಕೊಡವರ ಜೀವನ ವಿಧಾನ, ಹಬ್ಬ, ಜನನ, ನಾಮಕರಣ, ವಿವಾಹ ಪದ್ಧತಿ, ಹುಲಿ ಬೇಟೆ, ನರಿಮಂಗಲ, ಇಲ್ಲಿನ ಕ್ರೀಡೆಗಳು, ಜನಪದ ನಂಬಿಕೆಗಳು, ನೃತ್ಯಗಳು ಮೊದಲಾದವುಗಳು ಯಥಾವತ್ತಾಗಿ ಚಿತ್ರಿತಗೊಂಡಿರುವುದನ್ನು ಕಾಣಬಹುದಾಗಿದೆ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ 'ಚಿಕವೀರರಾಜೇಂದ್ರ', ಎಸ್ ವಿ ಶ್ರೀನಿವಾಸ ರಾವ್ ಅವರ 'ಪ್ರೌಢ ಪ್ರತಾಪ ವೀರರಾಜೇಂದ್ರ', ನಿರಂಜನರ 'ಕಲ್ಯಾಣ ಸ್ವಾಮಿ' ಮತ್ತು 'ಸ್ವಾಮಿ ಅಪರಂಪಾರ', ಪ್ರಭಾಕರ ಶಿಶಿಲ ಅವರ 'ನದಿ ಎರಡರ ನಡುವೆ' ಮೊದಲಾದ ಕಾದಂಬರಿಗಳು ಕೊಡಗಿನ ಚಾರಿತ್ರಿಕ ಅಂಶಗಳನ್ನು ಕಟ್ಟಿಕೊಡುತ್ತವೆ.

ಕೊಡಗಿನಲ್ಲೇ ಹುಟ್ಟಿ ಬೆಳೆದು ಅಲ್ಲಿನ ಪರಿಸರವನ್ನು ದಿನನಿತ್ಯ ಕಂಡವರಿಗಿಂತ ಸುಂದರವಾಗಿ ಪಂಜೆ ಮಂಗೇಶರಾಯರು ತಮ್ಮ 'ಹುತ್ತರಿ ಹಾಡು' ಕವನವನ್ನು ಬರೆದಿದ್ದಾರೆ. ಇದನ್ನು ಕೊಡವರು ಇಲ್ಲಿನ 'ನಾಡಗೀತೆ' ಎಂದೇ ಕರೆಯಲಾಗಿದೆ. ಕುವೆಂಪು, ಪು.ತಿ.ನ., ಜಿ. ಎಸ್. ಶಿವರುದ್ರಪ್ಪ, ಸಾಲಿ ರಾಮಚಂದ್ರರಾಯ, ಡಿ.ವಿ.ಜಿ., ಜಿ. ಪಿ. ರಾಜರತ್ನಂ ಮೊದಲಾದವರು ತಾವು ಕಂಡ ಕೊಡಗಿನ ಭೌಗೋಳಿಕ ಮತ್ತು ಸಾಂಸ್ಕೃತಿಕ ವೈವಿಧ್ಯತೆಯನ್ನು ಬಿಡಿ ಬಿಡಿ ಪದ್ಯಗಳ ಮೂಲಕ ಚಿತ್ರಿಸಿದ್ದಾರೆ.

ಹೀಗೆ ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಅಭಿವ್ಯಕ್ತಗೊಂಡಿರುವ 'ಕೊಡಗರು' ಎಂದು ಕರೆಸಿಕೊಳ್ಳುತ್ತಿರುವ ಕೊಡವರು, ಕೊಡಗಿನ ಗೌಡರು, ಕೆಂಬಟ್ಟಿ ಜನಾಂಗ, ಎರವರು,

ಜೇನುಕುರುಬರು ಮೊದಲಾದವರ ಸಾಂಸ್ಕೃತಿಕ ಬದುಕನ್ನು ಗುರುತಿಸುತ್ತಾ ಅದು ಸಮಕಾಲೀನವಾಗಿ ಪಡೆದುಕೊಳ್ಳುತ್ತಿರುವ ಸ್ವರೂಪವನ್ನು ವಿಶ್ಲೇಷಣೆಗೊಳಪಡಿಸುವ ಪ್ರಯತ್ನ ಮಾಡಲಾಗಿದೆ.

## ೧.೨. ಅಧ್ಯಯನದ ಉದ್ದೇಶ

ಕೊಡಗು ಪ್ರಾಕೃತಿಕವಾಗಿ ಹಾಗೂ ಭೌಗೋಳಿಕವಾಗಿ ಹೊರಜಗತ್ತಿಗೆ ಗುರುತಿಸಿ ಕೊಳ್ಳುವುದರೊಂದಿಗೆ ಸಾಂಸ್ಕೃತಿಕವಾಗಿಯೂ ಪ್ರಾಮುಖ್ಯತೆಯನ್ನು ಉಳಿಸಿಕೊಂಡಿದೆ. ಇದಕ್ಕೆ ಕಾರಣ ಇಲ್ಲಿನ ಪ್ರಬಲ ಜನಾಂಗವಾದ 'ಕೊಡವರು' ಪ್ರಮುಖರೆನಿಸಿದ್ದಾರೆಂದು ಒಂದು ಸಮುದಾಯವನ್ನು ಮೇಲ್ಮಟ್ಟಕ್ಕೆ ಕೊಂಡೊಯ್ಯುವ ಪ್ರಯತ್ನ ನಡೆದಿದೆ. ಇಲ್ಲಿ 'ಕೊಡವ' ಒಂದು ಸಮುದಾಯ ಮಾತ್ರವಾಗಿದ್ದು ಕೊಡಗು ಎಂಬುದು ಅನೇಕ ಕೊಡವರೆಂಬ ಆಸ್ತಿವಂತರೂ, ಕೊಡವರಲ್ಲದ ಅನೇಕ ಬುಡಕಟ್ಟು, ತಳ-ಕೆಳ ಸಮುದಾಯಗಳೂ ಇವೆ ಎಂಬುದನ್ನೇ ಮರೆಮಾಚಿದಂತಿದೆ. ಹೀಗೆ ಇಲ್ಲಿ ವಾಸಿಸುತ್ತಿರುವ ಇತರ ಸಮುದಾಯಗಳನ್ನು ಬದಿಗೊತ್ತಿ ಕೊಡಗಿನೊಂದಿಗೆ ಕೊಡವರ ಬದುಕನ್ನು ಮಾತ್ರ ಬೆಸೆದಿರುವ ಸಂಸ್ಕೃತಿ ಆಧಾರಿತ ಅಧ್ಯಯನಗಳು ಮಾತ್ರ ಹೆಚ್ಚಾಗಿ ನಡೆದಿರುತ್ತವೆ. ಯಾವುದೇ ಸ್ಥಳದ, ಸನ್ನಿವೇಶದ ಸಾಂಸ್ಕೃತಿಕ ಮಹತ್ವಕ್ಕೆ ಒಂದೇ ಒಂದು ಜನಸಮುದಾಯ ಕಾರಣವಾಗುವುದು ಅಪರೂಪ. ಹಲವು ಭಾಷೆ, ವೇಷ, ಆಹಾರ, ಉಡುಗೆ-ತೊಡುಗೆ ಸಂಪ್ರದಾಯ, ಆಚರಣೆ ಮೊದಲಾದ ವೈವಿಧ್ಯತೆಗಳು ಹಲವಾರು ಜನಾಂಗಗಳು ನೆಲೆನಿಂತಿರುವ ಪ್ರದೇಶದಲ್ಲಿ ಪ್ರತಿಬಿಂಬಿಸುತ್ತವೆ. ಈ ಅಂಶಗಳು ಕೊಡಗಿನ ಸಾಂಸ್ಕೃತಿಕ ವಲಯಕ್ಕೆ ಅನ್ವಯವಾಗುತ್ತವೆ.

ಕೊಡಗು ಎಂದರೆ ಕೊಡವರು, ಕೊಡವರು ಎಂದರೆ ಕೊಡಗು ಎನ್ನುವಷ್ಟು ಸರಳವಾಗಿ ತಿಳಿದುಕೊಳ್ಳುತ್ತಿದ್ದ ಕಾಲವೊಂದಿತ್ತು. ಈಗಲೂ ಕೊಡಗಿನ ಸುತ್ತಮುತ್ತಲ ಜಿಲ್ಲೆಗಳಲ್ಲಿ ಹೀಗೇ ತಿಳಿದುಕೊಳ್ಳಲಾಗುತ್ತಿದೆ. ಅಷ್ಟರಮಟ್ಟಿಗೆ ಕೊಡಗಿನೊಂದಿಗೆ ಕೊಡವರು ಬೆಸೆದು ಕೊಂಡಿದ್ದಾರೆ. ಕೊಡವರ ಭಾಷೆಯೆಂದೇ ಹೇಳಲಾಗುವ 'ಕೊಡವ' ಭಾಷೆಯನ್ನಾಡುವ ೧೮ ಜನಾಂಗಗಳಿಗೆ ಹಾಗೂ ಮೂಲನಿವಾಸಿಗಳೆನಿಸಿಕೊಂಡು ಬದುಕುತ್ತಿರುವ ೨೩ ಜನಾಂಗಗಳಿಗೆ ಆಸರೆಯಾಗಿರುವ ಕೊಡಗು, ಕೊಡವರು ಮತ್ತು ಕೊಡವೇತರ ಸಮುದಾಯದವರಿಂದ ಹೇಗೆ ತನ್ನ ಅನನ್ಯತೆಯನ್ನು ಕಂಡುಕೊಂಡಿದೆ ಎನ್ನುವುದನ್ನು ಶೋಧಿಸುವ ಪ್ರಯತ್ನ ಮಾಡಲಾಗಿದೆ.

ಇಲ್ಲಿ 'ಕೊಡವರು' ಮತ್ತು 'ಕೊಡಗರು' ಶಬ್ದವನ್ನು ಕುರಿತು ಸಂಕ್ಷಿಪ್ತವಾಗಿ ಚರ್ಚಿಸುವುದು ಸೂಕ್ತವೆನಿಸುತ್ತದೆ. ಈ ಎರಡೂ ಶಬ್ದಗಳನ್ನು ಒಂದೇ ಅರ್ಥದಲ್ಲಿ ಹಲವಾರು ವಿದ್ವಾಂಸರು ಬಳಸಿರುವುದು ಮತ್ತು ಗುರುತಿಸಿರುವುದು ತಿಳಿದುಬರುತ್ತದೆ. ಐ. ಮಾ. ಮುತ್ತಣ್ಣನವರು 'ಕೊಡವರು' ಮತ್ತು 'ಕೊಡಗರು' ಒಂದೇ ಎಂದು ಕರೆದರೆ, ಎಂ. ಪಿ. ಕಾರ್ಯಪ್ಪನವರು 'ಕೂರ್ಗ್ಸ್ ಆಫ್ ಕೂರ್ಗ್' (ಕೊಡಗಿನ ಕೊಡವರು) ಎಂದು ಬರೆಯುತ್ತಾರೆ. ಇವರ ಪ್ರಕಾರ

'ಕೂರ್ಗ್ಸ್' ಎಂದರೆ 'ಕೊಡವರು' ಎಂದರ್ಥ. ಇಂದಿಗೂ ಅನೇಕರು ಕೊಡವರನ್ನು 'ಕೂರ್ಗೀಸ್' ಎಂದೇ ಕರೆಯುವುದು ರೂಢಿಯಲ್ಲಿದೆ.[೯] ಭಾರತದಲ್ಲಿ ವಾಸಿಸುವವರನ್ನು ಭಾರತೀಯರು, ಕರ್ನಾಟಕದಲ್ಲಿ ವಾಸಿಸುವವರನ್ನು ಕನ್ನಡಿಗರು ಹಾಗೂ ತಮಿಳುನಾಡಿನಲ್ಲಿ ವಾಸಿಸುವವರನ್ನು ತಮಿಳರು ಎಂದು ಕರೆಯಲಾಗುತ್ತದೆಯೋ ಅದೇ ರೀತಿ ಕೊಡಗಿನಲ್ಲಿ ವಾಸಿಸುವವರೆಲ್ಲರೂ 'ಕೊಡಗರು' ಆಗುತ್ತಾರೆ. ಇಲ್ಲಿರುವ ಹಲವಾರು ಸಮುದಾಯಗಳಲ್ಲಿ ಕೊಡವ ಸಮುದಾಯವೂ ಒಂದು ಎಂಬುದನ್ನು ಗುರುತಿಸಿಕೊಳ್ಳಲಾಗಿದೆ. ಪಂಜೆಯವರು ಬರೆದಿರುವ 'ಹುತ್ತರಿ ಹಾಡು' ಪದ್ಯದಲ್ಲಿನ "ಅಲ್ಲೇ ಆ ಕಡೆ ನೋಡಲಾ, ಅಲ್ಲೇ ಕೊಡಗರ ನಾಡಲಾ, ಅಲ್ಲೆ ಕೊಡವರ ಬೀಡಲಾ"[೧೦] ಎಂಬ ಸಾಲುಗಳಲ್ಲಿ ಬಳಕೆಯಾಗಿರುವ 'ಕೊಡಗ' ಮತ್ತು 'ಕೊಡವ' ಶಬ್ದಗಳು ಗೊಂದಲಗಳಿಗೆ ಪರಿಹಾರವಾಗಬಲ್ಲವು ಎಂದು ಹೇಳಬಹುದು.

ಭೌಗೋಳಿಕವಾಗಿ ತನ್ನ ಹೆಸರನ್ನು ಕಂಡುಕೊಂಡ 'ಕೊಡಗು' ಎಂಬ ಪ್ರದೇಶದಲ್ಲಿ ವಾಸಮಾಡುತ್ತಿರುವವರು 'ಕೊಡಗರು' ಆಗುತ್ತಾರೆಯೇ ಹೊರತು ಪ್ರಾಬಲ್ಯದಲ್ಲಿರುವ ಚರಿತ್ರೆ ರಚನಾಶಾಸ್ತ್ರವು ಹೇಳುವ ರೀತಿ 'ಏಕರೂಪಿ'ಯಾದ ಒಂದು ಸಮುದಾಯ ಮಾತ್ರ 'ಕೊಡಗರು' ಆಗುತ್ತಾರೆನ್ನುವುದು ಅಚಾರಿತ್ರಿಕವಾಗುತ್ತದೆ[೧೧] ಎಂಬ ವಾದವನ್ನು ಮುಂದಿಟ್ಟುಕೊಂಡು ಇಲ್ಲಿನ ನಿವಾಸಿಗಳನ್ನು 'ಕೊಡಗರು' ಎಂದು ಪರಿಗಣಿಸಿ ಅಧ್ಯಯನ ನಡೆಸಲಾಗಿದೆ.

'ನಮ್ಮ ಸಮಾಜ ವಿಜ್ಞಾನ ಬೇರೆಬೇರೆ ರೀತಿಯ ತಜ್ಞರು ಮತ್ತು ಸಿದ್ಧಾಂತಗಳಿಂದ ಒಡೆದು ಕೊಂಡಿರುವಂತೆ ಕೊಡಗಿನಲ್ಲಿಯೂ ಬೇರೆಬೇರೆ ಸಮುದಾಯಗಳನ್ನು ಬೇರೆಬೇರೆಯಾಗಿಯೇ ಗುರುತಿಸಿ ಅಧ್ಯಯನ ಮಾಡಲಾಗುತ್ತಿದೆ. ಮಾನವಶಾಸ್ತ್ರಜ್ಞರು ಬುಡಕಟ್ಟನ್ನು ಬಿಟ್ಟು ಬೇರೆಯವರನ್ನು ಮುಟ್ಟುವುದಿಲ್ಲ. ಸಮಾಜಶಾಸ್ತ್ರಜ್ಞರು ಸಾಮಾನ್ಯ ಸಂಸ್ಕೃತಿ ಶೋಧದ ಹೊರಗೆ ನೋಡುವುದಿಲ್ಲ. ಜಾನಪದ ತಜ್ಞರು ಮುಗಿದು ಹೋದ ಅಭಿವೃದ್ಧಿಯ ಬಗ್ಗೆ ಕಳಕಳಿ ವಹಿಸುವಷ್ಟು ಸಮಕಾಲೀನ ಬೆಳವಣಿಗೆಯನ್ನು ಗಮನಿಸುವುದಿಲ್ಲ'.[೧೨] ಎಂದು ಹೇಳುವ ವಿಚಾರಗಳು ಕೊಡಗಿನ ಸಾಂಸ್ಕೃತಿಕ ಅಧ್ಯಯನಗಳಿಗೆ ಅನ್ವಯಿಸುತ್ತವೆ.

ಕೊಡಗಿನಲ್ಲಿ ಕೊಡವರಲ್ಲದೆ ಗೌಡ ಜನಾಂಗ, ಕೆಂಬಟ್ಟಿಯರು, ಎರವರು ಸೇರಿದಂತೆ ಹಲವಾರು ಬುಡಕಟ್ಟು ಸಮುದಾಯದವರು ಅನ್ಯ ಪ್ರದೇಶಗಳಿಂದ ವಲಸೆ ಬಂದು ನೆಲೆಸಿದವರು ಎಂಬುದನ್ನು ಅಧ್ಯಯನಕಾರರು ಒಪ್ಪಿದ್ದಾರೆ. ಕೊಡವರು ಉತ್ತರ ಭಾರತದಿಂದ ಬಂದಿರುವ ಕ್ಷತ್ರಿಯ ಕುಲದವರು ಎಂದು ಹೇಳಲಾಗುತ್ತಿದೆ. ಎಲ್ಲಿಂದಲೋ ಬಂದು ನೆಲೆಸಿದ ಕೊಡವರು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಸಬಲರಾದ ಹಾಗೆ ಉಳಿದ ಸಮುದಾಯಗಳು ಇಲ್ಲಿ ಬೆಳವಣಿಗೆಯನ್ನು ಕಾಣಲಿಲ್ಲ. ಕೆಂಬಟ್ಟಿ ಹೊಲೆಯರು ವೇಷ, ಭಾಷೆ, ನಡೆ ನುಡಿಗಳಲ್ಲಿ ಕೊಡವರ ಅನುಯಾಯಿಗಳಂತೆ ಕಂಡರೂ ಕೊಡವರಂತೆ ಸಾಮಾಜಿಕವಾಗಿ ಗುರುತಿಸಿಕೊಳ್ಳದಿರುವುದು ಸಾಮಾಜಿಕ ಅಸಮಾನತೆಯನ್ನು ಸಂಕೇತಿಸುತ್ತದೆ. ಈ ಸಮುದಾಯದವರು ಇನ್ನೂ ಕೊಡವರ ಮದುವೆ ಮತ್ತಿತರ ಸಮಾರಂಭಗಳಲ್ಲಿ ವಾದ್ಯ ನುಡಿಸುವುಕ್ಕೆ ಮಾತ್ರ ಸೀಮಿತಗೊಂಡಿದ್ದಾರೆ. ಕಾಡು

ಮೇಡುಗಳಲ್ಲಿ ವಾಸಿಸುತ್ತಿದ್ದು ನಾಗರೀಕ ಸಮಾಜದ ಸೌಲಭ್ಯಗಳಿಂದ ವಂಚಿತರಾಗಿರುವ ಬುಡಕಟ್ಟು ಜನರನ್ನೂ ಪ್ರಮುಖವಾಗಿ ಗುರುತಿಸಬಹುದು. ಎರವರು, ಕುಡಿಯರು, ಜೇನುಕುರುಬರು, ಕಾಡುಕುರುಬರು ಹೀಗೆ ಅಧಿಕ ಸಂಖ್ಯೆಯಲ್ಲಿ ಆದಿವಾಸಿ ಜನಗಳಿರುವುದನ್ನು ಕಾಣಬಹುದು. ಇವರೆಲ್ಲ ಇಷ್ಟು ಪ್ರಮಾಣದಲ್ಲಿ ನೆಲೆಸಲು ಕಾರಣಗಳನ್ನು ಹುಡುಕಿದಾಗ ಅನೇಕ ಸಂಗತಿಗಳು ತೆರೆದುಕೊಳ್ಳುತ್ತವೆ. ಕೊಡಗು ಗುಡ್ಡ, ಬೆಟ್ಟಗಳಿಂದ ಕೂಡಿದ ಕಾಡು ಪ್ರದೇಶವಾಗಿದ್ದು ಸಂರಕ್ಷಣಾತ್ಮಕವಾಗಿದೆ. ಹಳ್ಳ-ಕೊಳ್ಳ, ನದಿಗಳಿದ್ದು ನಿರಂತರ ಜೀವನಕ್ಕೆ ಆಶ್ರಯವಾಗಿದೆ. ದಂಡೆಯಾತ್ರೆ, ದರೋಡೆ. ದಾಳಿಗಳೆಂಬ ರಾಜಕೀಯ ಮೇಲಾಟಕ್ಕೆ ಅವಕಾಶ ಕಡಿಮೆ. ಅಲ್ಲದೆ ಯಜಮಾನಿಕೆಗೆ ಅನುಕೂಲ ವಾತಾವರಣವಿದೆ.[೧೩] ಈ ಕಾರಣಗಳಿಂದ ಬುಡಕಟ್ಟು ಜನರು ವಾಸ ಮಾಡಲು ಅರಣ್ಯದಿಂದಾವೃತವಾದ ಕೊಡಗು ಭೂಪ್ರದೇಶ ಸೂಕ್ತವಾಗಿದೆ.

ಭಿನ್ನ ಸಂಸ್ಕೃತಿಗಳ ಅಳವಡಿಕೆಯೊಂದಿಗೆ ದೇಶದ ಗಮನ ಸೆಳೆದಿರುವ ಕೊಡಗು ವಿವಿಧ ಜಾತಿ, ಧರ್ಮಗಳ ಜನಸಮುದಾಯಗಳ ಸಂಗಮ ಸ್ಥಾನದಂತಿದೆ. ಇಲ್ಲಿ 'ಕೊಡವರು' ಎಂದು ಕರೆಯಲ್ಪಡುವ ಸಮುದಾಯದೊಂದಿಗೆ ಬ್ರಾಹ್ಮಣ, ಒಕ್ಕಲಿಗರು, ಅರೆಭಾಷೆ ಗೌಡರು, ಲಿಂಗಾಯತರು, ಪರಿಶಿಷ್ಟ ಜಾತಿ, ಗೊಲ್ಲ, ಕಣಿಯ, ಕೆಂಬಟ್ಟಿ, ಐರಿರ, ಕೊಯವ, ಕಾಪಳ, ಬೇಡರು, ಈಡಿಗರು, ಕುಂಬಾರರು, ಅಗಸರು, ಬೆಸ್ತರು, ಮುಸಲ್ಮಾನರು, ಕ್ರಿಶ್ಚಿಯನ್ನರು, ಮಲೆಯಾಳಿಗರು ಮೊದಲಾದ ಜಾತಿಯ ಜನರು ಬದುಕನ್ನು ಕಟ್ಟಿಕೊಂಡು ತಮ್ಮದೇ ಸಂಸ್ಕೃತಿಯನ್ನು ಅಳವಡಿಸಿಕೊಂಡಿದ್ದಾರೆ. ಆದರೂ ಕೊಡಗಿನ ಸಂಸ್ಕೃತಿಯನ್ನು ಕುರಿತು ಅಧ್ಯಯನ ಅಥವಾ ಸಂಶೋಧನೆ ಕೈಗೊಳ್ಳುವವರು ಹೆಚ್ಚಾಗಿ 'ಕೊಡವ'ರನ್ನೇ ಕುರಿತು ಚರ್ಚಿಸಿದ್ದಾರೆ. ತಮ್ಮ ಅಧ್ಯಯನದ ವ್ಯಾಪ್ತಿಯನ್ನು ಸ್ವಲ್ಪ ವಿಸ್ತರಿಸಿಕೊಂಡು ಅರೆಭಾಷೆ ಗೌಡರ ಸಾಂಸ್ಕೃತಿಕ ಜೀವನ ವಿಧಾನವನ್ನು ಚರ್ಚಿಸಿದ್ದಾರೆ. ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತುತ ಮಹಾಪ್ರಬಂಧದಲ್ಲಿ ಇಲ್ಲಿನ ಕೆಲವು ಪ್ರಮುಖ ಜನಾಂಗಗಳ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಡುವ ಉದ್ದೇಶ ಹೊಂದಲಾಗಿದೆ.

## ೧.೩. ಅಧ್ಯಯನದ ವ್ಯಾಪ್ತಿ

ಕೊಡಗು ಸಾಂಸ್ಕೃತಿಕವಾಗಿ ಗುರುತಿಸಿಕೊಂಡಿರುವಷ್ಟು ಸಾಹಿತ್ಯಕ ವಲಯದಲ್ಲಿ ಕಾಣಿಸಿ ಕೊಂಡಿಲ್ಲವೆಂಬ ಅಭಿಪ್ರಾಯವಿದೆ. ಆದರೂ ಸಾಹಿತಿಗಳ ಸಂಖ್ಯೆ ಬಾಹುಳ್ಯವಿಲ್ಲದಿದ್ದರೂ ಅತ್ಯಂತ ಶ್ರೇಷ್ಠವೆನಿಸುವ ಮಹತ್ವದ ಕೃತಿಗಳನ್ನು ರಚಿಸಿರುವ ಪ್ರಮುಖ ಸಾಹಿತಿಗಳಿದ್ದಾರೆ. ಹಾಲೇರಿ ಅರಸರ ನಂತರ ಕೊಡಗನ್ನು ಆಳಿದ ಬ್ರಿಟೀಷ್ ಆಡಳಿತಾಧಿಕಾರಿಗಳು ತಮ್ಮ ಸಂಬಂಧಿಕರಿಗೆ ಬರೆದ ಪತ್ರಗಳಿಂದ ಮೊದಲ್ಗೊಂಡು ಆಂಗ್ಲ ಭಾಷೆಯ ವಿವಿಧ ಪ್ರಕಾರಗಳಲ್ಲಿ ಕೊಡಗು ಚಿತ್ರಿತವಾಗಿದೆ.

ಕೊಡಗಿನಲ್ಲಿ ಪ್ರಾಚೀನ ಶಾಸನಗಳಿಂದ ಹಿಡಿದು ಇಂದಿನವರೆಗೆ ಸಾಹಿತ್ಯ ಕೃತಿಗಳು ವಿಫುಲವಾಗಿ ರಚನೆಯಾಗಿವೆ. ಒಂದನೇ ಗುಣವರ್ಮ, ದಯಾಸಿಂಹ ಮತ್ತು ಮೌಕ್ತಿಕ ಕವಿ

ಮೊದಲಾದವರ ಹೆಸರು ಕೊಡಗಿನ ಸಾಹಿತ್ಯದೊಂದಿಗೆ ಕಾಣಿಸಿಕೊಳ್ಳುತ್ತದೆ. ಮಡಿಕೇರಿಯ ಟಿ. ಕೇಶವಭಟ್ಟರು ಸಂಪಾದಿಸಿ, ಭಾರತೀಯ ಜ್ಞಾನಪೀಠದ ಜೈನ ಗ್ರಂಥಮಾಲೆಯ ಪ್ರಥಮ ಕನ್ನಡ ಗ್ರಂಥವಾಗಿ ಪ್ರಕಟಗೊಂಡ ದೇವಪ್ಪ ಕವಿಯ 'ರಾಮವಿಜಯ' ಕಾವ್ಯವೇ ಕೊಡಗಿನ ಪ್ರಥಮ ಉಪಲಬ್ಧ ಮಹಾಕಾವ್ಯವೆಂದು ಹೇಳಲಾಗಿದೆ.[೧೪]

ಕೊಡಗು ಕನ್ನಡ ಸಾಹಿತ್ಯಕ್ಕೆ ಸಮೃದ್ಧವಾದ ಕೊಡುಗೆಯನ್ನು ನೀಡಿರುವುದು ಗಮನಾರ್ಹವಾಗಿದೆ. ೧೯೨೪ರಲ್ಲಿ ಪ್ರಕಟಗೊಂಡ ನಡಿಕೇರಿಯಂಡ ಚಿಣ್ಣಪ್ಪನವರ 'ಪಟ್ಟೋಲೆ ಪಳಮೆ'ಯಿಂದ ಅರಂಭವಾಗಿ ಸಮಕಾಲೀನ ಸಂದರ್ಭದವರೆಗೂ ಕನ್ನಡ ಸಾಹಿತ್ಯದಲ್ಲಿ ರಚಿತವಾಗಿರುವ, ಕೊಡಗು ಸಂಸ್ಕೃತಿ ಅನಾವರಣವಾಗಿರುವ ಪ್ರಾತಿನಿಧಿಕ ಕೃತಿಗಳನ್ನು ಆಕರ ಪಠ್ಯಗಳನ್ನಾಗಿ ಅಳವಡಿಸಿಕೊಂಡು ಸಂಶೋಧನೆಯನ್ನು ಕೈಗೊಳ್ಳಲಾಗಿದೆ. ಶಾಸನಗಳು, ಬ್ರಿಟೀಷ್ ಅಧಿಕಾರಿಗಳ ದಾಖಲೆಪತ್ರಗಳು, ಗೆಜೆಟಿಯರ್‌ಗಳನ್ನು ಅಧ್ಯಯನದ ದೃಷ್ಟಿಯಿಂದ ಆನುಷಂಗಿಕವಾಗಿ ಬಳಸಿಕೊಳ್ಳಲಾಗಿದೆ. ಇವುಗಳ ಜೊತೆಗೆ ಸಾಂದರ್ಭಿಕವಾಗಿ ಇಂಗ್ಲಿಷ್ ಮತ್ತು ಕೊಡವ ಭಾಷೆಯಲ್ಲಿ ರಚಿತಗೊಂಡಿರುವ ಪ್ರಾತಿನಿಧಿಕ ಕೃತಿಗಳನ್ನು ಅಧ್ಯಯನದ ದೃಷ್ಟಿಯಿಂದ ಪೂರಕವಾಗಿ ಪರಾಮರ್ಶಿಸಿ ಕೊಡಗರ ಸಂಸ್ಕೃತಿಯನ್ನು ಸಮಕಾಲೀನ ಸಂದರ್ಭದೊಂದಿಗೆ ವಿಶ್ಲೇಷಿಸಲಾಗಿದೆ. ಆಧುನಿಕ ಸಾಹಿತ್ಯ ಸಂದರ್ಭದ ಎಲ್ಲಾ ಪ್ರಕಾರದ ಪ್ರಾತಿನಿಧಿಕ ಕೃತಿಗಳು ಹಾಗೂ ವೃತ್ತಪತ್ರಿಕೆಗಳನ್ನು ಬಳಸಿಕೊಂಡು ಈ ಸಂಶೋಧನಾ ಮಹಾಪ್ರಬಂಧವನ್ನು ರಚಿಸಲು ಪ್ರಯತ್ನಿಸಲಾಗಿದೆ. ಜೊತೆಗೆ ಕೊಡಗಿನ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಕೆಲವು ಛಾಯಾಚಿತ್ರಗಳನ್ನು, ಹಾಡುಗಳನ್ನು ಬಳಸಿಕೊಂಡು 'ಕನ್ನಡ ಸಾಹಿತ್ಯದಲ್ಲಿ ಕೊಡಗರ ಸಂಸ್ಕೃತಿಯ ವಿನ್ಯಾಸಗಳು' ಎಂಬ ಮಹಾಪ್ರಬಂಧವನ್ನು ರಚಿಸಲಾಗಿದೆ.

ಬಹಳ ಹಿಂದಿನಿಂದಲೂ ಕೊಡಗು ಹಲವು ಜನಸಮುದಾಯ ಮತ್ತು ಸಂಸ್ಕೃತಿಗಳ ಕೇಂದ್ರವಾಗಿದ್ದರೂ ಕೊಡವ ಸಂಸ್ಕೃತಿ ಕೇಂದ್ರಿತ ಅಧ್ಯಯನಗಳ ಕಡೆಗೇ ಹೆಚ್ಚು ಗಮನ ಹರಿಸಲಾಗಿದೆ. ಕೊಡಗಿನಲ್ಲಿ ಕೊಡವರೂ ಸೇರಿದಂತೆ ಹಲವು ಜಾತಿ ಜನಾಂಗದವರು ವಾಸಿಸುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಅಧ್ಯಯನದ ವ್ಯಾಪ್ತಿಯನ್ನು ಗಮನದಲ್ಲಿಟ್ಟುಕೊಂಡು ಇಲ್ಲಿನ ಕೊಡವರು, ಅರೆಭಾಷೆ ಗೌಡರು, ಕೆಂಬಟ್ಟಿಯರು, ಬುಡಕಟ್ಟು ಜನಾಂಗಗಳಾದ ಜೇನುಕುರುಬರು ಮತ್ತು ಎರವರ ಸಂಸ್ಕೃತಿಯನ್ನು ಮಾತ್ರ ಈ ಅಧ್ಯಯನದಲ್ಲಿ ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

## ೧.೪. ಅಧ್ಯಯನದ ವಿಧಾನ

ಸಂಶೋಧನೆಯನ್ನು ಕೈಗೊಳ್ಳುವಾಗ ಅದರ ಅಧ್ಯಯನದ ವಿಧಾನವು ಮಹಾಪ್ರಬಂಧದ ಒಂದು ಭಾಗವಾಗಿಯೇ ಇರುತ್ತದೆ. ಆ ಮೂಲಕ ಪ್ರಮುಖ ಅಧ್ಯಯನ ಮಾದರಿಯ ನೆಲೆಗಳು ಅದೇ ಗತಿಯಲ್ಲಿ ರೂಪುಗೊಳ್ಳುತ್ತ ಹೋಗುತ್ತವೆ. ಪ್ರಸ್ತುತ ಪ್ರಬಂಧವು ಒಂದು ಸಾಂಸ್ಕೃತಿಕ

ಅಧ್ಯಯನವಾಗಿ ಮೂಡಿಬಂದಿರುವುದರಿಂದ ಚರಿತ್ರೆ, ಸಾಹಿತ್ಯ ಪರಂಪರೆ, ಮತ್ತು ಸಮಕಾಲೀನ ಸಂಸ್ಕೃತಿ ಸ್ಥಿತ್ಯಂತರಗಳ ಕುರಿತಾದ ಚರ್ಚೆಗಳಿಂದ ಕೂಡಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಮೂರು ವಿಧಾನಗಳ ಮೂಲಕ ಕಟ್ಟಿಕೊಡಲಾಗಿದೆ. 'ಚಾರಿತ್ರಿಕ ವಿಧಾನ', 'ಕ್ಷೇತ್ರಾಧ್ಯಯನ ವಿಧಾನ' ಮತ್ತು 'ವಿಶ್ಲೇಷಣಾತ್ಮಕ ವಿಧಾನ'ಗಳನ್ನು ಅನುಸರಿಸಿ ಸಂಶೋಧನೆಯ ಗತಿ ಸಾಗಿದೆ.

ಈ ಪ್ರಬಂಧಕ್ಕೆ ಪೂರಕವಾಗಿ ಮೊದಲು ಸಂಗ್ರಹಿಸಿದ್ದು ಚರಿತ್ರೆಯ ದಾಖಲೆಗಳನ್ನು. ಪ್ರಧಾನವಾಗಿ ಕೊಡಗು ಹಾಗೂ ಕನ್ನಡ ಸಾಹಿತ್ಯದ ಕುರಿತಾದ ರಾಜಕೀಯ, ಸಾಂಸ್ಕೃತಿಕ, ಭಾಷಿಕ ಮತ್ತು ಜನಾಂಗಿಕ ವಿವರಗಳನ್ನು ಚಾರಿತ್ರಿಕವಾಗಿ ವಿಶ್ಲೇಷಿಸಲಾಗಿದೆ. ಆ ಮುಖೇನ ಕನ್ನಡ ಸಾಹಿತ್ಯದಲ್ಲಿ ಕೊಡಗರ ಸಾಂಸ್ಕೃತಿಕ ಪರಂಪರೆಯೊಂದು ವಿನ್ಯಾಸಗೊಂಡಿರುವ ಹಾಗೂ ಸ್ಥಿತ್ಯಂತರಗೊಂಡಿರುವ ಮಾರ್ಗಗಳನ್ನು ಗುರುತಿಸಲಾಗಿದೆ. ಮುಖ್ಯವಾಗಿ ಕೊಡಗರಲ್ಲಿರುವ ನಂಬಿಕೆ, ಆಚರಣೆ, ಹಬ್ಬಗಳು, ಕೃಷಿ ಪದ್ಧತಿ ಮುಂತಾದವುಗಳಿಗೆ ಧಾರ್ಮಿಕ ಚೌಕಟ್ಟುಗಳಿದ್ದರೂ ಅವುಗಳೊಂದಿಗೆ ಬೆಸೆದುಕೊಂಡಿರುವ ವೈಜ್ಞಾನಿಕ ಆಲೋಚನೆಗಳನ್ನು ತಾತ್ವಿಕವಾಗಿ ಚರ್ಚಿಸಲಾಗಿದೆ. ಕನ್ನಡ ಸಾಹಿತ್ಯದ ಕವಲಾಗಿ ಕೊಡಗು ಸಂಸ್ಕೃತಿಯೊಂದು ಹೇಗೆ ಬೇರೆಬೇರೆ ನೆಲೆಗಳಿಂದ ವಿಭಿನ್ನವಾಗಿ ಬೆಳೆಯಿತು ಎನ್ನುವುದನ್ನು ಐತಿಹಾಸಿಕವಾಗಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಕ್ಷೇತ್ರಾಧ್ಯಯನ ವಿಧಾನದ ಮೂಲಕವಾಗಿಯೂ ಈ ಸಂಶೋಧನಾ ಪ್ರಬಂಧದ ವಿಷಯ ವಿಚಾರಗಳನ್ನು ಗ್ರಹಿಸಲಾಗಿದೆ. ಈ ಅಧ್ಯಯನವನ್ನು ಪಠ್ಯಕೇಂದ್ರಿತವಾಗಿ ನಡೆಸಲಾಗಿದ್ದರೂ ಇಲ್ಲಿನ ವಿಷಯಗಳ ವಸ್ತುನಿಷ್ಠತೆಯನ್ನು ಕಂಡುಕೊಳ್ಳಲು ಕ್ಷೇತ್ರಕಾರ್ಯವನ್ನೂ ಕೈಗೊಂಡು, ವಕ್ತೃಗಳನ್ನು ಸಂದರ್ಶಿಸಿ ಮಾಹಿತಿಯನ್ನು ಕಲೆಹಾಕಲಾಗಿದೆ. ಕೊಡಗರ ಸಾಂಸ್ಕೃತಿಕ ಪರಂಪರೆ, ಕನ್ನಡ ಸಾಹಿತ್ಯದ ಮೂಲಕವಾಗಿ ಪಡೆದುಕೊಂಡಿರುವ ವಿನ್ಯಾಸಗಳನ್ನು ಸಾಮಾಜಿಕ, ವೈಜ್ಞಾನಿಕ ಹಿನ್ನೆಲೆಯಲ್ಲಿ ವಿಶ್ಲೇಷಣೆಗೊಳಪಡಿಸಲಾಗಿದೆ.

ಕೊಡಗರ ಭಾಷೆ, ಚರಿತ್ರೆ, ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಕೌಟಂಬಿಕ ಜೀವನ ವಿಚಾರಗಳನ್ನು ವಿಶ್ಲೇಷಣಾತ್ಮಕವಾಗಿಯೂ ಗ್ರಹಿಸಲಾಗಿದೆ. ಇಲ್ಲಿ ಪ್ರಧಾನವಾಗಿ ಕನ್ನಡ ಸಾಹಿತ್ಯದಲ್ಲಿ ಕೊಡಗರ ಚಾರಿತ್ರಿಕ ಅಸ್ಮಿತೆಯು ಯಾವ ಯಾವ ರೀತಿಯಲ್ಲಿ ತನ್ನ ಸ್ವರೂಪವನ್ನು ಪಡೆದುಕೊಂಡಿದೆ ಎಂಬುದು ಮಹತ್ವದ್ದಾಗಿದೆ. ಸಾಂಸ್ಕೃತಿಕವಾಗಿ ಮತ್ತು ರಾಜಕೀಯವಾಗಿ ಇರುವ ಕೊಡಗರ ಭಿನ್ನವಾದ ಜೀವನ ಶೈಲಿಯನ್ನು ವಿಶ್ಲೇಷಿಸಲಾಗಿದೆ. ಭಾಷೆಯ ಮೂಲಕವಾಗಿಯೂ ನಿರೂಪಿತಗೊಂಡಿರುವ ಸಾಹಿತ್ಯಿಕ ಒಳಧಾರೆಯ ಮಹತ್ವವನ್ನು ಸಾಹಿತ್ಯ ರಚನೆಯ ಹಿನ್ನೆಲೆಯಿಂದ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಜೊತೆಗೆ ಆಧುನಿಕ ಕೊಡಗಿನಲ್ಲಿ ನಡೆದಿರುವ ಸಾಂಸ್ಕೃತಿಕ ಚಲನಶೀಲತೆ ಮತ್ತು ವರ್ತಮಾನದ ಪಲ್ಲಟಗಳನ್ನು ಚರ್ಚಿಸಲಾಗಿದೆ.

## ೧.೫. ಅಧ್ಯಯನದ ಸ್ವರೂಪ

ಈ ಮಹಾಪ್ರಬಂಧವು ಒಟ್ಟು ಏಳು ಅಧ್ಯಾಯಗಳಾಗಿ ತನ್ನ ಸ್ವರೂಪವನ್ನು ಪಡೆದುಕೊಂಡಿದೆ. ಇದು ಸಾಂಸ್ಕೃತಿಕ, ಚಾರಿತ್ರಿಕ ಮತ್ತು ಭೌಗೋಳಿಕ ಅಧ್ಯಯನ ಆಗಿರುವುದರಿಂದ ಕೊಡಗರ ಜನ-ಜೀವನದ ಗತವೊಂದರ ಅಧ್ಯಯನ ಇಲ್ಲಿ ನಿರೂಪಿತಗೊಂಡಿದೆ.

**ಅಧ್ಯಾಯ– ಒಂದು: ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ**

ಈ ಅಧ್ಯಯನವನ್ನು ಕೈಗೊಂಡ ಉದ್ದೇಶವನ್ನು ಹೇಳುವ ಜತೆಗೆ ಅಧ್ಯಯನದ ವ್ಯಾಪ್ತಿಯನ್ನು ಪ್ರಸ್ತಾಪಿಸಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಸಾಹಿತ್ಯ ಪಠ್ಯಗಳು ಮತ್ತು ಇಲ್ಲಿನ ಜನಸಮುದಾಯಗಳ ವ್ಯಾಪ್ತಿಯನ್ನು ಗುರುತಿಸಿಕೊಳ್ಳಲಾಗಿದೆ ಮತ್ತು ಅಳವಡಿಸಿಕೊಂಡಿರುವ ಅಧ್ಯಯನದ ವಿಧಾನಗಳನ್ನು ವಿವರಿಸಲಾಗಿದೆ.

**ಅಧ್ಯಾಯ– ಎರಡು: ಕೊಡಗಿನ ಚರಿತ್ರೆ**

ಈ ಅಧ್ಯಾಯದಲ್ಲಿ ಎರಡು ವಿಭಾಗಗಳಿದ್ದು ಅವುಗಳಲ್ಲಿ ಮೊದಲನೆಯದು 'ಭೌಗೋಳಿಕ ಕೊಡಗು' ಎಂಬುದಾಗಿದೆ. ಇದರಲ್ಲಿ ಕೊಡಗಿನ ಭೌಗೋಳಿಕ ಪರಿಸರ, ಪ್ರೇಕ್ಷಣೀಯ ಸ್ಥಳಗಳು, 'ಕೊಡಗು' ಎಂಬ ಹೆಸರು ಬಂದ ಬಗೆ, ಕೊಡಗಿನ ದೇವತೆಗಳಾದ ಕಾವೇರಮ್ಮನ ಕತೆ, ಇಗ್ಗುತ್ತಪ್ಪನ ಕತೆ ಮತ್ತು ಇಲ್ಲಿನ ಪರಂಪರೆ ಮುಂತಾದವುಗಳ ಬಗೆಗೆ ಚರ್ಚಿಸಲಾಗಿದೆ. ಎರಡನೆಯ ವಿಭಾಗವಾದ 'ಐತಿಹಾಸಿಕ ಕೊಡಗು' ಎಂಬುದರಲ್ಲಿ ಕೊಡಗನ್ನಾಳಿದ ಪ್ರಮುಖ ಹಾಲೇರಿ ಅರಸರು, ಬ್ರಿಟೀಷರ ಆಳ್ವಿಕೆ ಮುಂತಾದ ಚಾರಿತ್ರಿಕ ವಿಚಾರಗಳನ್ನು ಕುರಿತು ಅಧ್ಯಯನ ಕೈಗೊಳ್ಳಲಾಗಿದೆ.

**ಅಧ್ಯಾಯ– ಮೂರು: ಕೊಡಗಿನ ಸಾಹಿತ್ಯ ಪರಂಪರೆ**

ಈ ಅಧ್ಯಾಯವನ್ನು ಶಾಸನ ಸಾಹಿತ್ಯ, ಜನಪದ ಸಾಹಿತ್ಯ, ಪ್ರಾಚೀನ ಸಾಹಿತ್ಯ, ಆಧುನಿಕ ಸಾಹಿತ್ಯ, ಪತ್ರಿಕಾ ಸಾಹಿತ್ಯ ಎಂದು ವಿಭಾಗ ಮಾಡಿಕೊಳ್ಳಲಾಗಿದೆ. ಈ ಅಧ್ಯಾಯದಲ್ಲಿ ಕೊಡಗನ್ನು ಕುರಿತು ಪ್ರಕಟಗೊಂಡಿರುವ ಕನ್ನಡದ ಎಲ್ಲಾ ಪ್ರಕಾರದ ಕೃತಿಗಳು, ಕೊಡಗು ಗೆಜೆಟಿಯರ್ ಹಾಗೂ ವೃತ್ತಪತ್ರಿಕೆಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸುವ ಪ್ರಯತ್ನ ಮಾಡುವುದರ ಜತೆಗೆ ಅನೇಕ ಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ.

**ಅಧ್ಯಾಯ – ನಾಲ್ಕು: ಕೊಡವರ ಸಂಸ್ಕೃತಿಯ ಸ್ವರೂಪಗಳು**

ಕೊಡವರು ಸಾಮಾಜಿಕ ಮತ್ತು ಆರ್ಥಿಕವಾಗಿ ಕೊಡಗಿನಲ್ಲಿ ಪ್ರತ್ಯೇಕವಾಗಿ ಗುರುತಿಸಿಕೊಳ್ಳುವಂತಹ ಸಮುದಾಯ. ಇವರು ಅನುಸರಿಸಿಕೊಂಡು ಬರುತ್ತಿರುವ ಸಾಂಸ್ಕೃತಿಕ

ಜೀವನ ವಿಧಾನವನ್ನು ಇಲ್ಲಿ ವಿಶ್ಲೇಷಣೆಗೊಳಪಡಿಸಲಾಗಿದೆ. ಕೊಡವರ ಮೂಲ, ಕೊಡವರ ಸಂಸ್ಕೃತಿಯ ಭಾಗಗಳಾದ ಉಡುಗೆ-ತೊಡುಗೆ, ಆಹಾರ ಪದ್ಧತಿ, ಜೀವನ ಶೈಲಿ, ವಿವಾಹ, ಕೃಷಿ ಪದ್ಧತಿ, ಬೇಟೆ, ಮಿಲಿಟರಿ ಸೇವೆ ಮೊದಲಾದ ಧಾರ್ಮಿಕ, ಸಾಮಾಜಿಕ ಹಾಗೂ ಕೌಟುಂಬಿಕ ಆಚರಣೆಗಳ ವೈವಿಧ್ಯತೆಗಳನ್ನು ಗುರುತಿಸಿ ಚರ್ಚೆಗೊಳಪಡಿಸಲಾಗಿದೆ.

**ಅಧ್ಯಾಯ- ಐದು: ಕೊಡವೇತರರು ಮತ್ತು ಬುಡಕಟ್ಟು ಜನಾಂಗಗಳ ಸಂಸ್ಕೃತಿಯ ಸ್ವರೂಪಗಳು**

ಕೊಡಗಿನಲ್ಲಿ ಕೊಡವರ ಸಮೀಪವರ್ತಿಗಳಂತೆ ಕಂಡುಬರುವ ಅರೆಭಾಷೆ ಗೌಡರು ಈ ಭಾಗದ ಮತ್ತೊಂದು ಪ್ರಮುಖ ಜನಾಂಗವಾಗಿದ್ದು, ಇವರೊಂದಿಗೆ ಕೊಡವ ಭಾಷೆಯನ್ನಾಡುವ ಹಾಗೂ ಇಲ್ಲಿನ ಮೂಲನಿವಾಸಿಗಳೆನಿಸಿರುವ ಇತರೆ ಸಮುದಾಯದವರು ವಾಸಿಸುತ್ತಿದ್ದಾರೆ. ಈ ಹಿನ್ನೆಲೆಯನ್ನು ಗಮನದಲ್ಲಿಟ್ಟುಕೊಂಡು ಕೊಡಗಿನಲ್ಲಿ ಬದುಕು ಕಟ್ಟಿಕೊಂಡಿರುವ ಕೊಡವೇತರ ಸಮುದಾಯಗಳಾದ ಅರೆಭಾಷೆ ಗೌಡರು, ಕೆಂಬಟ್ಟಿಯರು, ಹಾಗೂ ಬುಡಕಟ್ಟು ಸಮುದಾಯಗಳಾದ ಎರವರು ಮತ್ತು ಜೇನುಕುರುಬರ ಸಾಂಸ್ಕೃತಿಕ ಬದುಕಿನ ವೈವಿಧ್ಯತೆಯನ್ನು ಕುರಿತು ಅಧ್ಯಯನ ನಡೆಸಲಾಗಿದೆ.

**ಅಧ್ಯಾಯ- ಆರು: ಕೊಡಗರ ಸಮಕಾಲೀನ ಸ್ಥಿತ್ಯಂತರಗಳು**

ಕನ್ನಡ ಸಾಹಿತ್ಯದಲ್ಲಿ ರಚಿತಗೊಂಡಿರುವ ಕೃತಿಗಳಲ್ಲಿ ಬಿಂಬಿತವಾಗಿರುವ ಕೊಡಗಿನ ಪರಂಪರಾಗತವಾದ ಸಂಸ್ಕೃತಿ ಆಧುನಿಕತೆಯ ಪ್ರಭಾವಕ್ಕೆ ಮುಖಾಮುಖಿಯಾಗಿ ಪಡೆದು ಕೊಂಡಿರಬಹುದಾದ ಸ್ಥಿತ್ಯಂತರಗಳ ಕುರಿತು ಹೊಸ ನೋಟವನ್ನು ನೀಡುವುದು ಈ ಅಧ್ಯಾಯದ ಉದ್ದೇಶವಾಗಿದೆ. ಪರಂಪರೆಯಿಂದ ಬೆಳೆದು ಬಂದ ಇಲ್ಲಿಯ ಹಬ್ಬಗಳು, ಧಾರ್ಮಿಕ, ಸಾಮಾಜಿಕ ಮತ್ತು ಕೌಟುಂಬಿಕ ಆಚರಣೆಗಳು ಜಾಗತೀಕರಣದ ಇಂದಿನ ದಿನಗಳಲ್ಲಿ ಪಡೆದುಕೊಳ್ಳುತ್ತಿರುವ ಹೊಸ ರೂಪಗಳನ್ನು ಅಧ್ಯಯನ ನಡೆಸುವುದರೊಂದಿಗೆ ಕ್ಷೇತ್ರಕಾರ್ಯ, ವಕ್ತೃಗಳೊಂದಿಗೆ ಚರ್ಚೆ ಮತ್ತು ಸಂದರ್ಶನಗಳ ಮೂಲಕ ಕೊಡಗಿನಲ್ಲಿ ನಡೆದಿರುವ ಸಮಕಾಲೀನ ಪಲ್ಲಟಗಳನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

**ಅಧ್ಯಾಯ- ಏಳು: ಉಪಸಂಹಾರ**

ಈ ಮಹಾಪ್ರಬಂಧದಲ್ಲಿ ಚರ್ಚಿಸಲಾಗಿರುವ ಅಂಶಗಳನ್ನು 'ಉಪಸಂಹಾರ' ಎಂಬ ಕೊನೆಯ ಅಧ್ಯಾಯದಲ್ಲಿ ಅಧ್ಯಯನದ ಫಲಶ್ರುತಿಯನ್ನು ನೀಡಲಾಗಿದೆ. ಕೊನೆಯಲ್ಲಿ ಅಧ್ಯಯನದ ದೃಷ್ಟಿಯಿಂದ ಅನುಕೂಲವಾದ ಆಕರ ಗ್ರಂಥಗಳ ಪಟ್ಟಿ, ವಕ್ತೃಗಳ ವಿವರ ಮತ್ತು ಕೊಡಗರ ಸಂಸ್ಕೃತಿ ಬಿಂಬಿಸುವ ಛಾಯಾಚಿತ್ರಗಳನ್ನು ನೀಡಲಾಗಿದೆ.

## ೧.೬. ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಕೊಡಗಿನ ಸಾಹಿತ್ಯ, ಕಲೆ, ಚರಿತ್ರೆ, ಸಂಸ್ಕೃತಿ ಮತ್ತು ಭಾಷಿಕ ಹಿನ್ನೆಲೆಯ ಅಧ್ಯಯನವು ಈಗಾಗಲೇ ಸಾಕಷ್ಟು ನಡೆದಿದೆ. ಈ ಕ್ಷೇತ್ರದಲ್ಲಿ ಮೊದಲ ಅಧ್ಯಯನಕಾರಾಗಿ ಕಂಡು ಬರುವ ಹೆಸರೆಂದರೆ ಕೊರವಂಡ ಅಪ್ಪಯ್ಯನವರದು. ಇವರು ೧೮೮೭ರಲ್ಲಿಯೇ ಕೊಡವ ಭಾಷೆಗೆ ಪ್ರತ್ಯೇಕ ಲಿಪಿಯೊಂದನ್ನು ರಚಿಸಲು ಪ್ರಯತ್ನಿಸಿದ್ದರು. ಭಾರತೀಯ ಸಾಹಿತ್ಯ, ಸಂಸ್ಕೃತಿ, ಸಂಶೋಧನೆ ಮತ್ತು ಚರಿತ್ರೆ ರಚನೆಯ ಕುರುಹುಗಳನ್ನು ಐ. ಮಾ. ಮತ್ತಣ್ಣನವರು 'ಭಾರತೀಯ ಸಂಸ್ಕೃತಿಗೆ ಪಾಶ್ಚಾತ್ಯ ವಿದ್ವಾಂಸರ ಕೊಡುಗೆ' ಎನ್ನುವ ತಮ್ಮ ಸಂಶೋಧನಾ ಪತ್ರದಲ್ಲಿ ಚರ್ಚಿಸಿದ್ದಾರೆ. ಕೊಡಗಿನ ನೆಲ ಸಂಶೋಧನೆಗೆ ವಿಪುಲ ಅವಕಾಶಗಳನ್ನು ರೂಪಿಸಿಕೊಳ್ಳುತ್ತಲೇ ಬಂದಿದೆ. ಕೆಲವು ವಿಶ್ವವಿದ್ಯಾಲಯಗಳಿಗೆ ಸಲ್ಲಿಸಲಾದ ಮಹಾಪ್ರಬಂಧಗಳಾದರೆ ಕೆಲವು ಕುತೂಹಲಕ್ಕಾಗಿ ನಡೆಸಿದ ಅಧ್ಯಯನಗಳಿವೆ. ೧೯೩೧ರ ಕಾಲಘಟ್ಟದಲ್ಲಿಯೇ ಬಿ. ಜಿ. ಕಂಠಿ ಎಂಬುವವರು ಕೊಡಗು ಮತ್ತು ಹಾಲೇರಿ ಅರಸರನ್ನು ಕುರಿತು 'ಕೂರ್ಗ್ ಆಂಡ್ ಇಟ್ಸ್ ರೂಲರ್ಸ್' ಎಂಬ ಪ್ರಬಂಧವನ್ನು ಮುಂಬೈ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ ಮಾಹಿತಿ ದೊರೆಯುತ್ತದೆ.[೧೫]

ಕೊಡಗಿನ ಚಾರಿತ್ರಿಕ ದಾಖಲೆಗಳನ್ನು ಕುರಿತು ಆಳವಾದ ಅಧ್ಯಯನ ಮಾಡಿದವರಲ್ಲಿ ಡಿ. ಎನ್. ಕೃಷ್ಣಯ್ಯನವರು ಪ್ರಮುಖರು. ತಮ್ಮ ಕೃತಿಗಳ ಮೂಲಕ ಕೊಡಗಿನ ಸಂಶೋಧನಾ ಕ್ಷೇತ್ರದಲ್ಲಿ ಹೆಸರು ಮಾಡಿದ್ದಾರೆ. 'ಕೊಡಗಿನ ಇತಿಹಾಸ', ಚಾರಿತ್ರಿಕ ಕೃತಿಯಾಗಿದ್ದು ಕೊಡಗಿಗೆ ಸಂಬಂಧಿಸಿದ ಎಲ್ಲಾ ಐತಿಹಾಸಿಕ ವಿವರಗಳನ್ನು ಒಳಗೊಂಡಿದೆ. ಪಾಶ್ಚಾತ್ಯ ಹಾಗೂ ಭಾರತೀಯ ವಿದ್ವಾಂಸರು ಕೊಡಗಿನ ಚರಿತ್ರೆಯನ್ನು ಕುರಿತು ರಚಿಸಿರುವ ಎಲ್ಲಾ ಕೃತಿಗಳನ್ನು, ಕೊಡಗಿನಲ್ಲಿ ದೊರೆತ ಶಾಸನಗಳನ್ನು, ರಾಜರು ನಡೆಸಿದ್ದ ಪತ್ರ ವ್ಯವಹಾರಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿ ಈ ಕೃತಿಯನ್ನು ಸಿದ್ಧಪಡಿಸಿದ್ದಾರೆ. ಕೊಡಗು ಪ್ರಾಂತ್ಯದ ರಾಜಕೀಯ ಮತ್ತು ಸಾಮಾಜಿಕ ಚರಿತ್ರೆ ಸವಿಸ್ತಾರವಾಗಿ 'ಕೊಡಗಿನ ಇತಿಹಾಸ'ದಲ್ಲಿ ಪ್ರಕಟವಾಗಿದೆ. ಈ ಕೃತಿಯು ಕೊಡಗರ ಚರಿತ್ರೆಯ ಅಧ್ಯಯನಕ್ಕೆ ತುಂಬಾ ಉತ್ತಮ ಮಾಹಿತಿಯನ್ನು ಒದಗಿಸುತ್ತದೆ.

೧೬೩೩ ರಿಂದ ೧೮೦೮ರ ವರೆಗಿನ ಕೊಡಗಿನ ಚರಿತ್ರೆಯನ್ನು ದೊಡ್ಡವಿರರಾಜೇಂದ್ರ ಒಡೆಯನು 'ರಾಜೇಂದ್ರನಾಮೆ' ಎಂಬ ಹೆಸರಿನಲ್ಲಿ ಬರೆಸಿರುವುದು ತಿಳಿದುಬರುತ್ತದೆ. ಇದೇ ಕೃತಿಯನ್ನು ಡಿ. ಎನ್. ಕೃಷ್ಣಯ್ಯನವರು ಎಂ. ಎಸ್. ಸುಬ್ಬರಾಯರ ಜೊತೆ ಶಾಸ್ತ್ರೀಯವಾಗಿ ಸಂಪಾದಿಸಿ ಮರುಪರಿಷ್ಕರಿಸಿ ಪ್ರಕಟಿಸಿದ್ದಾರೆ. ರಾಜೇಂದ್ರನಾಮೆಯಲ್ಲಿ ಬಿಟ್ಟು ಹೋಗಿದ್ದ ಹಾಗೂ ರಾಜನೇ ಉದ್ದೇಶ ಪೂರ್ವಕವಾಗಿ ಸೇರಿಸಲು ಇಚ್ಚಿಸದೆ ಇದ್ದ ಎಷ್ಟೋ ವಿಚಾರಗಳನ್ನು ತಮಗೆ ದೊರೆತ ಇತರ ಆಕರಗಳ ಪರಿಶೀಲನೆಯಿಂದ ಸೇರಿಸಿ 'ರಾಜೇಂದ್ರನಾಮೆ'ಯನ್ನು ಅಧಿಕೃತ ಇತಿಹಾಸ ಗ್ರಂಥವಾಗಿಸಿದ್ದಾರೆ.

ಪಿ. ಎಸ್. ರಾಮಾನುಜಂ ಅವರು ರಚಿಸಿರುವ 'ಕೊಡವರು' ಕೃತಿಯು ಕೊಡವರ ಸಾಮಾಜಿಕ ಜೀವನ, ಉಡುಗೆ ತೊಡುಗೆ, ಆಹಾರ ಪದ್ಧತಿ, ಕೊಡವರ ಹಬ್ಬಗಳು, ವಿವಾಹ

ಪದ್ಧತಿಗಳು, ಜನನ-ಮರಣ, ಶವಸಂಸ್ಕಾರ ಹಾಗೂ ಕಾರೋಣರ ಆರಾಧನೆ ಇತ್ಯಾದಿಗಳನ್ನು ಸವಿವರವಾಗಿ ಬರೆಯುತ್ತಾ ಚರ್ಚೆಗೊಳಪಡಿಸಿದ್ದಾರೆ. ಹಲವು ದೃಷ್ಟಿಕೋನಗಳಿಂದ ಕೊಡವರ ಸಾಂಸ್ಕೃತಿಕ ಬದುಕನ್ನು ಈ ಕೃತಿಯು ವಿಶ್ಲೇಷಿಸಿದೆ. ಇದರಲ್ಲಿ ಇದುವರೆಗೆ ಕೊಡವರ ಮೂಲದ ಕುರಿತು ಪ್ರಕಟವಾಗಿರುವ ಕೃತಿಗಳು, ಲೇಖನಗಳು, ಮೊದಲಾದವುಗಳನ್ನೆಲ್ಲಾ ಅವಲೋಕಿಸಿ ವಿಶ್ಲೇಷಣೆಗೊಳಪಡಿಸಿದ್ದಾರೆ.

ಎಂ. ಜಿ. ನಾಗರಾಜ್ ಅವರು ಕೊಡಗು ಜಿಲ್ಲೆ ಸಂಬಂಧಿತ ಸಂಶೋಧನೆ ನಡೆಸಿದ ಮಹತ್ವದ ಸಂಶೋಧಕರಲ್ಲಿ ಒಬ್ಬರು. 'ಕೊಡಗಿನ ಸಾಂಸ್ಕೃತಿಕ ಜಾನಪದ ನೆಲೆಗಳು', 'ಕೊಡಗಿನ ಕೈಮಡಗಳು', 'ಕೊಡಗು ಜಿಲ್ಲೆಯ ಸುಗ್ಗಿ ಕಟ್ಟೆಗಳು', 'ಕೊಡಗಿನ ಅರಸರು', 'ಕೆಂಬಟ್ಟಿ ಹೊಲೆಯರ ಸಂಸ್ಕೃತಿ' ಮೊದಲಾದ ಕೃತಿಗಳನ್ನು ಪ್ರಕಟಿಸಿರುತ್ತಾರೆ. ನಾಗರಾಜ್ ಅವರು ಕೊಡಗಿನ ಸಂಸ್ಕೃತಿಯನ್ನು ಜಾನಪದೀಯ ಚೌಕಟ್ಟಿನಲ್ಲಿ ಹಿಡಿದಿಡುವ ಪ್ರಯತ್ನ ಮಾಡಿದ್ದಾರೆ. ಮುಖ್ಯವಾಗಿ ಕೊಡಗಿನಲ್ಲಿ ವಿಶಿಷ್ಟವೆನಿಸಿರುವ ಕೈಮಡಗಳು, ಕೊಲೆ ಕಲ್ಲುಗಳು, ಸುಗ್ಗಿ ಕಟ್ಟೆಗಳ ಬಿನ್ನ ಆಯಾಮಗಳನ್ನು ಚಿತ್ರಿಸಿಕೊಡುತ್ತಾರೆ.

ಪಿ. ಎನ್. ಹರೀಶ್ ಅವರ ಎರವರ ಸಂಸ್ಕೃತಿ ಎನ್ನುವುದು ಸಂಶೋಧನಾ ಪ್ರಬಂಧವಾಗಿದೆ. ಇದು ಕೊಡಗಿನ ಮೂಲನಿವಾಸಿಗಳಾದ ಎರವರ ಸಾಂಸ್ಕೃತಿಕ ಜೀವನವನ್ನು ಪರಿಚಯಿಸುತ್ತದೆ. ಕೊಡವರಂತೆಯೇ ಸಾಂಸ್ಕೃತಿಕವಾಗಿ ಗುರುತಿಸಿಕೊಂಡವರು ಎರವರು. ಸಂಸ್ಕೃತಿಯನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿ ಮುಖ್ಯವಾಗಿ ಎರವರ ಬದುಕಿನ ವೈವಿಧ್ಯತೆಯನ್ನು ತಿಳಿದುಕೊಳ್ಳಲು ಈ ಕೃತಿ ಸಹಕಾರಿಯಾಗುತ್ತದೆ. ಎರವರ ಜೀವನ ಶೈಲಿ, ಇವರ ಭಾಷೆ, ಆರಾಧನೆ, ಹಬ್ಬಗಳು, ಜಾನಪದ ಹಾಡುಗಳನ್ನು ಕುರಿತ ಸಂಶೋಧನಾ ಕೃತಿಯಾಗಿದೆ.

ತಂಬಂಡ ವಿಜಯ್ ಪೂಣಚ್ಚ ಅವರು 'ಕೊಡಗು ವಿವರಣೆ', 'ಆಧುನಿಕ ಕೊಡಗು', 'ಪಳಮೆ', 'ಪ್ರತ್ಯೇಕ ಕೊಡಗು ರಾಜ್ಯ' ಕೊಡಗು ಸಂಬಂಧಿತ ಕೃತಿಗಳು. ಕೊಡಗಿನ ಆಧುನಿಕ ವಿಚಾರಗಳನ್ನು 'ಆಧುನಿಕ ಕೊಡಗು' ಕೃತಿ ಚರ್ಚೆ ಮಾಡಲಾಗಿದೆ. ಇದರಲ್ಲಿ ಮುಖ್ಯವಾಗಿ ಭೂಮಿಗೆ ಸಂಬಂಧಿಸಿದ ಪ್ರಶ್ನೆಗಳು, ಭೂ ಹಂಚಿಕೆ, ಭೂ ಹಿಡುವಳಿ ಪದ್ಧತಿಗಳು, ಬಿಟ್ಟಿ ದುಡಿಮೆ, ಕೃಷಿ ಕೂಲಿಕಾರ ಸಮುದಾಯಗಳು, ದಲಿತರ ಪ್ರಶ್ನೆಗಳು, ಅವಿಭಕ್ತ ಕುಟುಂಬ ಪದ್ಧತಿ, ಮೂಲೆಗೊತ್ತಲ್ಪಟ್ಟ ಸಮುದಾಯಗಳು ಹಾಗೂ ಕೊಡಗಿನಲ್ಲಿ ಇಂದಿಗೂ ಜಾರಿಯಲ್ಲಿರುವ ಜಮ್ಮದಾಳುಗಳ ಚರಿತ್ರೆಯನ್ನು ಚರ್ಚಿಸಲಾಗಿದೆ. ಪಾರಂಪರಿಕವಾಗಿ ಬಂದ ಭಾವನೆ, ನಂಬಿಕೆಯನ್ನು ಪರಾಮರ್ಶಿಸುವ ಹಾಗೂ ಮರು ಅಧ್ಯಯನಕ್ಕೆ ಎಡೆಮಾಡಿಕೊಡಬಲ್ಲ ಕೃತಿಯೆನಿಸಿದೆ.

ಜಾನಪದೀಯ ನೆಲೆಯಲ್ಲಿ ರಚಿತವಾಗಿರುವ ಕೃತಿಗಳನ್ನು ವಿಶ್ಲೇಷಣಾತ್ಮಕವಾಗಿ ನೋಡುವ ಪ್ರಯತ್ನ 'ಪಳಮೆ' ಕೃತಿಯಲ್ಲಿದೆ. ನಡಿಕೇರಿಯಂಡ ಚಿಣ್ಣಪ್ಪನವರು ರಚಿಸಿರುವ ಕೊಡಗಿನ ಪ್ರಥಮ

ಜನಪದ ಕೃತಿಯಾದ 'ಪಟ್ಟೋಲೆ ಪಳಮೆ'ಯನ್ನು ಮರುಚಿಂತನೆಗೆ ಹಚ್ಚುವ ಕಾರ್ಯ ನಡೆದಿದೆ ಎನ್ನಬಹುದು. 'ಪಟ್ಟೋಲೆ ಪಳಮೆ' ಕೃತಿಯಲ್ಲಿ ಆ ಕಾಲಕ್ಕೆ ಕೊಡಗಿನಲ್ಲಿ ಇದ್ದಂತಹ ಯಜಮಾನಿಕೆ ಸಂಸ್ಕೃತಿಯು ಅಧೀನ ಸಂಸ್ಕೃತಿಯ ಸಮುದಾಯಗಳ ಮೇಲೆ ಮಾಡಿದ ದಬ್ಬಾಳಿಕೆಯನ್ನು ವಿರೋಧಿಸಿರುವುದು ಕಂಡುಬರುತ್ತದೆ.

ತೀತೀರ ರೇಖಾ ವಸಂತ ಅವರು ಕೊಡವ ಸಂಸ್ಕೃತಿ, ಕೊಡವ ಭಾಷೆ, ಸಾಹಿತ್ಯ ಕುರಿತು ಸಾಕಷ್ಟು ಕೆಲಸ ಮಾಡಿದ್ದಾರೆ. ಇವರು ಎಂ. ಫಿಲ್. ಪದವಿಗಾಗಿ ಸಲ್ಲಿಸಿದ 'ಕೊಡವ ರಂಗಭೂಮಿ' ಎಂಬ ಕೃತಿಯಲ್ಲಿ ೧೯೦೬ರಿಂದ ೨೦೦೬ವರೆಗಿನ ನೂರು ವರ್ಷಗಳ ಇತಿಹಾಸವನ್ನು ಹೊಂದಿರುವ ಕೊಡವ ರಂಗಭೂಮಿಯ ಪರಂಪರೆ ಮತ್ತು ಪ್ರವೃತ್ತಿಗಳನ್ನು ಚರ್ಚಿಸುವ ಕಿರು ಪ್ರಬಂಧವಾಗಿದೆ. ಇದರಲ್ಲಿ ಕೊಡವ ರಂಗಭೂಮಿಯನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿ ಕೊಂಡಿದ್ದಾರೆ. ಕೊಡವ ರಂಗಭೂಮಿಯ ಪ್ರೇರಣೆಗಳು ಮತ್ತು ಅದರ ಬೆಳವಣಿಗೆ ಕುರಿತಂತೆ ಚರ್ಚಿಸಿದ್ದಾರೆ. ೧೯೦೬ರಲ್ಲಿ ಪ್ರಕಟಗೊಂಡ ಹರದಾಸ ಅಪ್ಪಚ್ಚ ಕವಿಯ 'ಯಯಾತಿರಾಜ' ನಾಟಕದಿಂದ ಹಿಡಿದು ೨೦೦೬ರಲ್ಲಿ ಪ್ರಕಟವಾದ ಕಲಿಯಂಡ ಸಾಬು ಅಯ್ಯಣ್ಣ ಅವರ 'ಕಲ್ಲಕೆರೆ ಮಾದೇವಿ' ವರೆಗಿನ ನಾಟಕಗಳನ್ನು ಪರಾಮರ್ಶಿಸಿದ್ದಾರೆ. ಆ ಕಾಲದಲ್ಲಿ ಕೊಡಗಿನಲ್ಲಿದ್ದ ನಾಟಕ ಕಂಪನಿಗಳು, ಪ್ರದರ್ಶನಗೊಂಡ ನಾಟಕಗಳು, ಕೊಡವ ನಾಟಕಗಳಿಗೆ ಇದ್ದ ಜನಮನ್ನಣೆಗಳನ್ನು ಕುರಿತು ಕೂಲಂಕಷವಾಗಿ ವಿವರಿಸುತ್ತಾರೆ. ರೇಖಾ ವಸಂತ ಅವರ ಸಂಶೋಧನಾ ಮಹಾಪ್ರಬಂಧ 'ಆಧುನಿಕ ಕೊಡವ ಸಾಹಿತ್ಯ'. ಕೊಡಗಿನಲ್ಲಿ ಕೊಡವರಿಂದಲೇ ರಚಿತವಾಗಿರುವ ಕೊಡವ ಕೃತಿಗಳನ್ನು ಅವಲೋಕಿಸುವ ಕಾರ್ಯ ಈ ಕೃತಿಯಲ್ಲಿ ನಡೆದಿದೆ. ಇದರಲ್ಲಿ ಕೊಡವ ಕಾವ್ಯ, ನಾಟಕ, ಕಾದಂಬರಿ, ಕತೆಗಳನ್ನು ವಿಶ್ಲೇಷಿಸುವ ಚಿತ್ರಣವಿದೆ. ಅಜ್ಞಾತವಾಗಿದ್ದ ಕೊಡವ ಸಾಹಿತ್ಯವನ್ನು ಅವಲೋಕಿಸಿ ಪರಿಚಯಿಸುವ ಕೆಲಸ ಇವರ ಈ ಸಂಶೋಧನ ಕೃತಿಯಲ್ಲಿ ಪ್ರತಿಬಿಂಬಿತವಾಗಿದೆ.

ಹೆಬ್ಬಾಲೆ ಕೆ. ನಾಗೇಶ್ ಅವರು ಮೈಸೂರು ವಿಶ್ವವಿದ್ಯಾಲಯಕ್ಕೆ 'ಕೊಡವರ ಪ್ರದರ್ಶನಾತ್ಮಕ ಕಲೆಗಳು' ಎಂಬ ಪಿಎಚ್. ಡಿ. ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಇದರಲ್ಲಿ ಇಲ್ಲಿನ ಸಮುದಾಯಗಳಾದ ಕೊಡವ, ಕೆಂಬಟ್ಟಿ, ಜೇನುಕುರುಬ, ಎರವ ಮೊದಲಾದವರು ಹಿಂದಿನಿಂದಲೂ ಪರಂಪರೆಯ ಭಾಗವಾಗಿ ಸಂಪ್ರದಾಯ, ಆಚರಣೆಗಳನ್ನು ರೂಢಿಸಿಕೊಂಡು ಇಲ್ಲಿನ ನಂಬಿಕೆ ಮತ್ತು ಆಚರಣೆಗಳ ಸುತ್ತ ಅನಾವರಣಗೊಳ್ಳುವ ಪ್ರದರ್ಶನಾತ್ಮಕ ಕಲೆಗಳನ್ನು ಸಾಂಸ್ಕೃತಿಕವಾಗಿ ಪರಿಚಯಿಸುವ ಪ್ರಯತ್ನ ನಡೆದಿದೆ. ಈ ಭಾಗದ ಪ್ರದರ್ಶನ ಕಲೆಗಳಾದ ಹುತ್ತರಿ ಕೋಲಾಟ, ಪರೆಯಕಳಿ, ಉಮ್ಮತ್ತಾಟ್ ಮೊದಲಾದವುಗಳು ಇಂದಿನ ಆಧುನಿಕ ಸಂದರ್ಭದಲ್ಲಿಯೂ ತನ್ನ ಮೂಲ ಸ್ವರೂಪದಲ್ಲಿಯೇ ಉಳಿದುಕೊಂಡಿರುವುದನ್ನು ಮತ್ತು ಈ ಎಲ್ಲಾ ಕಲೆಗಳು ಆಧ್ಯಾತ್ಮಿಕ ಮತ್ತು ಪೌರಾಣಿಕ ಅಂಶಗಳೊಂದಿಗೆ ತಳುಕುಹಾಕಿಕೊಂಡಿರುವುದನ್ನು ಚರ್ಚಿಸಲಾಗಿದೆ. ಅಶೋಕ ಆಳ್ವ ಕೆ. ಅವರ 'ಕೊಡಗಿನ ಜನಪದ ಕುಣಿತಗಳ ಸಾಂಸ್ಕೃತಿಕ ಅಧ್ಯಯನ' ಕಿರು ಸಂಶೋಧನ ಕೃತಿ. ಕೊಡಗಿನ ಜಾನಪದ ಆಚರಣೆಗಳಾದ ಹಬ್ಬಗಳು ಮತ್ತು

ಈ ಸಂದರ್ಭದಲ್ಲಿ ಪ್ರದರ್ಶನಗೊಳ್ಳುವ ಹುತ್ತರಿ ಕುಣಿತಗಳು ಹಾಗೂ ಸಾಹಸ ಪ್ರಧಾನ ಕುಣಿತಗಳ ಸಾಂಸ್ಕೃತಿಕ ಚಿತ್ರಣ ದೊರೆಯುತ್ತದೆ. ಅಲ್ಲದೆ ಈ ಕೃತಿಯಲ್ಲಿ ಕೊಡಗಿನ ಮೂಲನಿವಾಸಿಗಳಾದ ಕೆಂಬಟ್ಟಿಗಳ 'ಅಂಗಕಳಿ', ಕುಡಿಯರ ಕುಣಿತ ಮತ್ತು ಎರವರ ಕುಣಿತಗಳಿಗಿರುವ ಆಚರಣಾಮೂಲ ಸಂಬಂಧಿತ ಮಾಹಿತಿಗಳನ್ನು ಕಲೆಹಾಕಲಾಗಿದೆ.

ಎ. ಸಿ. ಶೈಲಜ ಅವರು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿರುವ ಸಂಶೋಧನಾ ಮಹಾಪ್ರಬಂಧ 'ಕೊಡವರು ಮತ್ತು ಕೊಡಗಿನ ಅರೆಭಾಷೆ ಗೌಡರ ಸಂಸ್ಕೃತಿ– ತೌಲನಿಕ ಅಧ್ಯಯನ'. ಈ ಪ್ರಬಂಧದಲ್ಲಿ ಕೊಡವರು ಮತ್ತು ಕೊಡಗಿನಲ್ಲಿ ವಾಸಿಸುತ್ತಿರುವ ಅರೆಭಾಷೆ ಗೌಡರ ಸಾಂಸ್ಕೃತಿಕ ವೈವಿಧ್ಯತೆಗಳನ್ನು ತೌಲನಿಕವಾಗಿ ಚಿತ್ರಿಸಿದ್ದಾರೆ. ಮುಖ್ಯವಾಗಿ ಅರೆಭಾಷೆ ಗೌಡರು ತಮ್ಮ ಸಂಪ್ರದಾಯ, ಪದ್ಧತಿಗಳಲ್ಲಿ ಕೊಡವರನ್ನು ಅನುಸರಿಸುತ್ತಿರುವ ವಿವರಗಳನ್ನು ಚರ್ಚಿಸಲಾಗಿದೆ. ಕಾವೇರಿ ಎನ್. ಪಿ. 'ಕೊಡವರ ಸಂಸ್ಕಾರಗಳು: ಸಮಾಜೋ ಸಾಂಸ್ಕೃತಿಕ ಅಧ್ಯಯನ' ಎಂಬ ಸಂಶೋಧನ ಮಹಾಪ್ರಬಂಧವನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿರುತ್ತಾರೆ. ಈ ಮಹಾಪ್ರಬಂಧದಲ್ಲಿ ಕೊಡವರ ಸಂಸ್ಕೃತಿಯನ್ನು ಹಲವು ನೆಲೆಗಳಿಂದ ಚರ್ಚಿಸುವ ಪ್ರಯತ್ನ ಮಾಡಿದ್ದಾರೆ. ಕೊಡವರ ಜೀವನ ಕ್ರಮ, ಆಚಾರ–ವಿಚಾರ, ಸಾಂಸ್ಕೃತಿಕ ಚಟವಟಿಕೆಗಳು, ಹಬ್ಬ, ಹುಟ್ಟು, ಸಾವು, ವಿವಾಹ ಕ್ರಮಗಳನ್ನು ಸಂಕೀರ್ಣವಾಗಿ ವಿಶ್ಲೇಷಿಸಿದ್ದಾರೆ.

ಲಲಿತ ಕೆ. ಪಿ. ಅವರು 'ವಿರಾಜಪೇಟೆಯ ಸ್ಥಳನಾಮಗಳ ಅಧ್ಯಯನ' ಎಂಬ ಸಂಶೋಧನ ಮಹಾಪ್ರಬಂಧವನ್ನು ಮೈಸೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ವಿರಾಜಪೇಟೆ ತಾಲೂಕಿನ ಸ್ಥಳನಾಮಗಳ ಬಗ್ಗೆ ಇರಬಹುದಾದ ಐತಿಹ್ಯಗಳ ವಿಶೇಷವಾದ ಅಧ್ಯಯನದೊಂದಿಗೆ ಕ್ಷೇತ್ರಕಾರ್ಯ ಕೈಗೊಂಡು ರಚಿಸಿರುವ ಮಹಾಪ್ರಬಂಧ. ಇಲ್ಲಿನ ಸ್ಥಳಗಳಿಗೆ ಇರುವ ಸಾಂದರ್ಭಿಕ, ಸಾಮಾಜಿಕ ಮತ್ತು ವೈಜ್ಞಾನಿಕ ಕಾರಣಗಳನ್ನು ಕಟ್ಟಿಕೊಡಲಾಗಿದೆ. ಇವರು ರಚಿಸಿರುವ ಸಂಶೋಧನ ಬಿಡಿ ಲೇಖನಗಳನ್ನು ಹೊಂದಿರುವ ಮತ್ತೊಂದು ಕೃತಿ 'ವಿವಕ್ಷಾ' ಈ ಕ್ಷೇತ್ರದಲ್ಲಿ ನಡೆದಿರುವ ಮತ್ತೊಂದು ಅಧ್ಯಯನ. ನಡಿಕೇರಿಯಂಡ ಚಿಣ್ಣಪ್ಪನವರ 'ಪಟ್ಟೋಲೆ ಪಳಮೆ'ಯಲ್ಲಿ ಕಂಡುಬರುವ ಕೆಲವು ಜಾನಪದೀಯ ವಿಚಾರಗಳನ್ನು ವಿಶ್ಲೇಷಿಸುವ ಪ್ರಯತ್ನ ಮಾಡಿದ್ದಾರೆ. ಕೊಡವ ಜಾನಪದೀಯ ವಿವರಗಳನ್ನು ಮೊದಲಿಗೆ ಕಟ್ಟಿಕೊಡುವ ಕೃತಿ ಪಟ್ಟೋಲೆ ಪಳಮೆ ಎಂಬ ಮಾತನ್ನು ಒಪ್ಪದೆ, ಈ ಕೃತಿ ಬರುವುದಕ್ಕೂ ಮೊದಲು ಕೊಡವರ ಆಚಾರ–ವಿಚಾರ, ಸಂಸ್ಕೃತಿಗಳ ಮೇಲೆ ಬೆಳಕು ಚೆಲ್ಲುವಂತ ಅನೇಕ ಕೃತಿಗಳು ಬಂದಿವೆ ಎಂಬುದನ್ನು ಸ್ಪಷ್ಟಪಡಿಸುತ್ತಾರೆ. ಕೊಡಗಿನ ಸಂಸ್ಕೃತಿ, ಗಾದೆ, ಸ್ಥಳನಾಮಗಳು. ಐತಿಹ್ಯಗಳು ಮೊದಲಾದವುಗಳನ್ನು ಆಧುನಿಕ ಬೆಳವಣಿಗೆ ಹಿನ್ನೆಲೆಯಲ್ಲಿ ಚರ್ಚಿಸುವ ಪ್ರಯತ್ನ ಮಾಡಿದ್ದಾರೆ. ಕೊಡಗಿನ ಇತಿಹಾಸದ ಪುಟಗಳಲ್ಲಿ ಬಂದು ಹೋಗಿರುವ ಟಿಪ್ಪುಸುಲ್ತಾನನ ಆಡಳಿತ ವೈಖರಿ, ಆತನ ಧರ್ಮಾಂಧತೆ, ಅವನು ಕೊಡಗಿನ ಪ್ರಜೆಗಳಿಗೆ ಮಾಡಿರುವ ದ್ರೋಹದ ಬಗ್ಗೆ ಚರ್ಚಿಸಿದ್ದಾರೆ.

ನಾಗೇಶ್ ಕಾಲೂರು ಅವರ 'ಕೊಡವ ಭಾಷಿಕ ಜನಾಂಗಗಳ ಸಾಂಸ್ಕೃತಿಕ ಬದುಕು' ಮಹಾಪ್ರಬಂಧದಲ್ಲಿ ಈ ಭಾಗದಲ್ಲಿರುವ 'ಕೊಡವ' ಭಾಷೆಯನ್ನಾಡುವ ಹಲವು ಜನಾಂಗಗಳ ಸಂಸ್ಕೃತಿಯನ್ನು ಚರ್ಚಿಸಲಾಗಿದೆ. ಹಂಪಿ ವಿಶ್ವವಿದ್ಯಾಲಯಕ್ಕೆ ಎಂ. ಫಿಲ್. ಪದವಿಗಾಗಿ ಸಲ್ಲಿಕೆಯಾಗಿರುವ ಭೋಜಮ್ಮ ಕೆ. ಎನ್. ಅವರ 'ಪರಂಪರೆ ಮತ್ತು ಆಧುನಿಕತೆಯ ನಡುವೆ ಕೊಡವ ಮಹಿಳೆ–ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ಕಿರು ಪ್ರಬಂಧದಲ್ಲಿ ಕೊಡವ ಮಹಿಳೆ ಆಧುನಿಕತೆಗೆ ತೆರೆದುಕೊಂಡು ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಪ್ರಗತಿ ಹೊಂದಿರುವ ಬಗೆಯನ್ನು ವಿಶ್ಲೇಷಿಸಿದ್ದಾರೆ. ಹೊಸಟ್ಟಿ ಭಾರತಿ ಅರ್ಜುನ ಅವರು 'ಕೊಡಗು ಜಿಲ್ಲೆಯ ಕುರುಬ ಬುಡಕಟ್ಟು–ಒಂದು ಕುಲಶಾಸ್ತ್ರೀಯ ಅಧ್ಯಯನ' ಕೊಡಗಿನಲ್ಲಿ ವಾಸಿಸುತ್ತಿರುವ ಕುರುಬ ಸಮುದಾಯದ ಪರಂಪರೆ ಮತ್ತು ಆಧುನಿಕತೆಯ ಬದುಕನ್ನು ಕಟ್ಟಿಕೊಡಲಾಗಿದೆ. ಲಾವಣ್ಯ ಸಿ. ಪಿ. ಅವರ 'ಕೊಡಗಿನ ಗೌಡಕನ್ನಡ ಭಾಷಿಕ ನೆಲೆಗಳು' ಎಂಬ ಮಹಾಪ್ರಬಂಧದಲ್ಲಿ ಇಲ್ಲಿನ ಅರೆಭಾಷೆ ಗೌಡರು ರೂಢಿಸಿಕೊಂಡಿರುವ ಭಾಷೆಯ ವೈವಿಧ್ಯತೆಯನ್ನು ಚರ್ಚಿಸಿದ್ದಾರೆ.

ಈ ಮೇಲಿನ ಬಹುಪಾಲು ಅಧ್ಯಯನಗಳು ಕ್ಷೇತ್ರಕಾರ್ಯ ಕೇಂದ್ರಿತವಾಗಿ ನಡೆದಿರುವುದನ್ನು ಗಮನಿಸಲಾಗಿದೆ. ಅಲ್ಲದೆ ಎಲ್ಲಾ ಅಧ್ಯಯನಕಾರರು ಕೊಡವರನ್ನು ಮುಖ್ಯವಾಗಿ ಪರಿಗಣಿಸಿ ಅವರ ಇತಿಹಾಸ, ಸಂಸ್ಕೃತಿ ಮೊದಲಾದ ವಿವರಗಳನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಆದರೆ ಈ ಅಧ್ಯಯನದ ಮೂಲಕ ಕೊಡವರೂ ಸೇರಿದಂತೆ ಇಲ್ಲಿನ ಕೆಲವು ಪ್ರಮುಖ ಜನಾಂಗಗಳನ್ನೂ ಕುರಿತು ಚರ್ಚಿಸಲಾಗಿದೆ. ಕೊನೆಯ ಅಧ್ಯಾಯದಲ್ಲಿ ಕೊಡಗರ ಸಮಕಾಲೀನ ಪಲ್ಲಟಗಳನ್ನು ಚರ್ಚಿಸಲಾಗಿದೆ.

**ಕೊನೆ ಟಿಪ್ಪಣಿಗಳು**


೧. **ಕನ್ನಡ ಸಂಸ್ಕೃತಿ–ಒಂದು ಚಿಂತನೆ**, ಜಿ. ಎಸ್. ಶಿವರುದ್ರಪ್ಪ, 'ಕಣಜ' ವೆಬ್‌ಸೈಟ್

೨. **ಎರವರ ಸಂಸ್ಕೃತಿ** (ಪ್ರಸ್ತಾವನೆ), ೧೯೯೩, ಹರೀಶ್ ಪಿ. ಎನ್., ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪುಟ–೭

೩. **ಅದೇ;** ಪುಟ–೨೩

೪. **ಅದೇ;** ಪುಟ–೨೮

೫. **ಅದೇ;** ಪುಟ–೨೯

೬. **ಸಾಂಸ್ಕೃತಿಕ ಅಧ್ಯಯನ**, ೨೦೦೪, ರಹಮತ್ ತರೀಕೆರೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪುಟ–೪

೭. **ಅದೇ;** ಪುಟ–೯

೮. **ಅದೇ;** ಪುಟ–೯೧

೯. **ಆಧುನಿಕ ಕೊಡಗು**, ೨೦೧೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ–೬

೧೦. **ಕೊಡಗು**, ೧೯೯೮, ರಾಮಚಂದ್ರಾಚಾರ್ ಡಿ. ಬಿ., ಸುನಂದ ಪ್ರಕಾಶನ, ವಿರಾಜಪೇಟೆ, ಪುಟ–೨೨೪

೧೧. **ಆಧುನಿಕ ಕೊಡಗು**, ೨೦೧೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ–೯

೧೨. **ಆಧುನಿಕ ಕೊಡವ ಸಾಹಿತ್ಯ**, ೨೦೧೦, ರೇಖಾ ಎಂ. ಪಿ., ಗಾಯತ್ರಿ ಪ್ರಿಂಟರ್ಸ್, ಮೈಸೂರು, ಪುಟ–viii

೧೩. ಅದೇ; ಪುಟ–xi

೧೪. **ಮಡಿಕೇರಿ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ**, ೧೯೯೧, ಸಂ. ನಾಗರಾಜಯ್ಯ ಹಂ.ಪ., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ–೨೨೩

೧೫. **ಕರ್ನಾಟಕ ರಾಜ್ಯ ಗೆಜೆಟಿಯರ್–ಕೊಡಗು ಜಿಲ್ಲೆ**, ೧೯೯೨, ಸೂರ್ಯನಾಥ ಯು ಕಾಮತ್, ಲಿಪಿ ಮುದ್ರಣ, ಬೆಂಗಳೂರು, ಪುಟ–೭೦೩

## ಅಧ್ಯಾಯ – ಎರಡು

## ಕೊಡಗಿನ ಚರಿತ್ರೆ

೨.೧. ಭೌಗೋಳಿಕ ಕೊಡಗು

೨.೧.೧. 'ಕೊಡಗು' ಶಬ್ದದ ವ್ಯುತ್ಪತ್ತಿ

೨.೧.೨. ಜನಸಮುದಾಯ ಮತ್ತು ಭಾಷೆ

೨.೧.೩. ಪ್ರಮುಖ ಪಟ್ಟಣಗಳ ಹೆಸರುಗಳ ವಿವೇಚನೆ

೨.೧.೪. ಪ್ರಮುಖ ಬೆಳೆಗಳು

೨.೧.೫. ಹವಾಮಾನ

೨.೧.೬. ಪ್ರಮುಖ ದೇವತೆಗಳು ಮತ್ತು ದೇವಸ್ಥಾನಗಳು

೨.೧.೭. ಪ್ರಮುಖ ಪ್ರವಾಸಿ ತಾಣಗಳು

೨.೨. ಐತಿಹಾಸಿಕ ಕೊಡಗು

೨.೨.೧. ಹಾಲೇರಿ ಅರಸರ ಆಳ್ವಿಕೆ

೨.೨.೨. ಬ್ರಿಟೀಷರ ಆಳ್ವಿಕೆ

# ಅಧ್ಯಾಯ – ಎರಡು

# ಕೊಡಗಿನ ಚರಿತ್ರೆ

## ೨.೧. ಭೌಗೋಳಿಕ ಕೊಡಗು

ಕೊಡಗು ಕರ್ನಾಟಕದ ದಕ್ಷಿಣ ಭಾಗದಲ್ಲಿದ್ದು, ತಾನು ಹೊಂದಿರುವ ಐತಿಹಾಸಿಕ, ಭೌಗೋಳಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆಯಿಂದ ಭಾರತದಾದ್ಯಂತ ಗುರುತಿಸಿಕೊಂಡಿದೆ. ಈ ಪ್ರದೇಶ ಪಶ್ಚಿಮ ಘಟ್ಟಗಳ ತಪ್ಪಲಿನಿಂದ ಕೂಡಿದ್ದು ನೈಸರ್ಗಿಕವಾಗಿ ವಿಭಿನ್ನ ಲಕ್ಷಣಗಳನ್ನು ಹೊಂದಿದೆ. ಇದು ಪಶ್ಚಿಮ ಘಟ್ಟಗಳ ತಪ್ಪಲಿನಲ್ಲಿರುವುದರಿಂದ ಪೂರ್ವಕ್ಕೆ ಇಳಿಜಾರಾಗಿದೆ. ಈ ಜಿಲ್ಲೆಯು ಮೈಸೂರು, ಹಾಸನ ದಕ್ಷಿಣ ಕನ್ನಡ ಜಿಲ್ಲೆಗಳು ಮತ್ತು ಕೇರಳ ರಾಜ್ಯದ ಕೆಲವು ಭಾಗಗಳಿಂದ ಸುತ್ತವರಿಯಲ್ಪಟ್ಟಿದೆ. ವಿಸ್ತೀರ್ಣದಲ್ಲಿ ಕೊಡಗು ಚಿಕ್ಕ ಜಿಲ್ಲೆಯಾಗಿದ್ದು ಒಟ್ಟು ಸುಮಾರು ೪೦೬೦ ಚದರ ಕಿ. ಮೀ. ವಿಸ್ತೀರ್ಣವನ್ನು ಹೊಂದಿದೆ. ಅಲ್ಲದೆ ಕೊಡಗಿನ ಮಧ್ಯಭಾಗದಲ್ಲಿರುವ ಮಡಿಕೇರಿಯ ಪೀಠಭೂಮಿಯು ಸಮುದ್ರಮಟ್ಟದಿಂದ ಮಡಿಕೇರಿ ಕೋಟೆ ಇರುವ ಸ್ಥಳ ಸುಮಾರು ೩೮೦೦ ಅಡಿಗಳಷ್ಟು ಎತ್ತರದಲ್ಲಿದೆ. ಕುಶಾಲನಗರವು ಪೂರ್ವದ ಗಡಿಪ್ರದೇಶವಾಗಿದ್ದು ಸಮುದ್ರಮಟ್ಟದಿಂದ ೨೭೦೦ ಅಡಿಗಳಷ್ಟಿದೆ. ಅಂದರೆ ಪಶ್ಚಿಮದಿಂದ ಪೂರ್ವಕ್ಕೆ ಇಳಿಜಾರಾಗಿರುವುದು ಸ್ಪಷ್ಟವಾಗುತ್ತದೆ. ಹಾಗಾಗಿ ಕೊಡಗಿನ ಬಹುತೇಕ ನದಿಗಳು ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತಿವೆ. ಇಲ್ಲಿನ ಪರ್ವತ ಶ್ರೇಣಿಗಳು ಕೊಡಗಿನ ಸೊಬಗನ್ನು ವೃದ್ಧಿಸಿವೆ. ಸದಾ ಹಸಿರಿನಿಂದ ಕೂಡಿರುವ ಈ ಪ್ರದೇಶ ಪ್ರವಾಸಿಗರ ಪಾಲಿಗೆ ಅಚ್ಚುಮೆಚ್ಚು ಎನ್ನಬಹುದು. ಕೊಡಗು ಭೌಗೋಳಿಕವಾಗಿ ಕಡಿಮೆ ವ್ಯಾಪ್ತಿಯಿಂದ ಕೂಡಿದ್ದು ಮಡಿಕೇರಿ, ವೀರರಾಜಪೇಟೆ ಮತ್ತು ಸೋಮವಾರಪೇಟೆ ಎಂಬ ಕೇವಲ ಮೂರು ತಾಲ್ಲೂಕುಗಳನ್ನು ಹೊಂದಿದೆ. 'ಕೊಡಗು' ಎಂಬುದು ಒಂದು ಊರಲ್ಲ. ಬದಲಾಗಿ ಇಡೀ ಜಿಲ್ಲೆಯನ್ನು ಪ್ರತಿನಿಧಿಸುವ ಹೆಸರು. ಮಡಿಕೇರಿ ಕೊಡಗಿನ ಆಡಳಿತ ಜಿಲ್ಲಾ ಕೇಂದ್ರವಾಗಿದ್ದು, ಪ್ರಾಕೃತಿಕವಾಗಿ, ಸಾಂಸ್ಕೃತಿಕವಾಗಿ ಹಾಗೂ ಜನಾಂಗಿಕವಾಗಿ ಪ್ರತ್ಯೇಕತೆಯನ್ನು ಕಂಡುಕೊಂಡಿದೆ.

ಕಾವೇರಿ ನದಿಯು ಕೊಡಗನ್ನು ಇಬ್ಭಾಗ ಮಾಡಿದೆ. ಉತ್ತರದಲ್ಲಿರುವ ಭಾಗವನ್ನು ಉತ್ತರ ಕೊಡಗೆಂದೂ, ದಕ್ಷಿಣಕ್ಕಿರುವ ಭಾಗವನ್ನು ದಕ್ಷಿಣ ಕೊಡಗೆಂದು ಹೆಸರಿಸಲಾಗಿದೆ. ಉತ್ತರ ಕೊಡಗಿಗಿಂತ ದಕ್ಷಿಣ ಕೊಡಗು ಹಲವಾರು ಅಂಶಗಳಿಂದ ಹೆಸರುವಾಸಿಯಾಗಿದೆ. ಸೋಮವಾರಪೇಟೆ ದಕ್ಷಿಣ ಕೊಡಗಿನಂತೆ ಹೆಚ್ಚಾಗಿ ಬೆಟ್ಟ ಕಣಿವೆಗಳಿಂದ ಕೂಡಿರದೆ ಬಯಲು ಪ್ರದೇಶವಾಗಿದೆ. ಕೊಡಗಿನ ಮೂಲ ನಿವಾಸಿಗಳೆಂದು ಕರೆಸಿಕೊಳ್ಳುವ ಬುಡಕಟ್ಟು ಜನಾಂಗ ಹಾಗೂ ಕೊಡವರು ಹೆಚ್ಚಾಗಿ ವಾಸಿಸುತ್ತಿರುವುದು ವೀರರಾಜಪೇಟೆ ಮತ್ತು ಮಡಿಕೇರಿ ತಾಲ್ಲೂಕುಗಳಲ್ಲಿ. ಭಾಷಿಕವಾಗಿ ಗುರುತಿಸುವುದಾದರೆ ಕೊಡವ ಭಾಷೆಯನ್ನು ಮಾತನಾಡುವವರ ಸಂಖ್ಯೆ ಈ ಎರಡು ತಾಲ್ಲೂಕುಗಳಲ್ಲಿಯೇ ಹೆಚ್ಚಾಗಿ ಕಂಡುಬರುತ್ತದೆ.

ಕೊಡಗು ಪಶ್ಚಿಮ ಘಟ್ಟಗಳ ತಪ್ಪಲಿನಲ್ಲಿರುವುದರಿಂದ ಹೆಚ್ಚಾಗಿ ಬೆಟ್ಟ ಗುಡ್ಡಗಳು ಕಂಡು ಬರುತ್ತವೆ. ರಸ್ತೆಯ ಇಕ್ಕೆಲವೂ ಕಾಫಿ, ಏಲಕ್ಕಿ ತೋಟಗಳು, ತೋಟಗಳ ನಡುವೆ ಬೆಳೆದಿರುವ ಮುಗಿಲೆತ್ತರದ ವಿವಿಧ ಜಾತಿಯ ಮರಗಳು ಪ್ರಯಾಣಿಕರನ್ನು ಆಕರ್ಷಿಸುತ್ತವೆ. 'ಕಾವೇರಿಯಿಂದಮಾ ನೇತ್ರಾವತಿವರೆಮಿರ್ದ ನಾಡದಾ ಕೊಡಗು' ಎಂದು ಕೊಡಗಿನ ಭೌಗೋಳಿಕ ಎಲ್ಲೆಯನ್ನು ವಿವರಿಸಲಾಗಿದೆ.[೧] ಆದರೆ ಕೊಡಗಿನ ಗಡಿ ವಿಚಾರ ಕಾವ್ಯದಲ್ಲಿ ಹೇಳಿದಷ್ಟು ಸುಲಭವಾಗಿಲ್ಲ. ಇದರಂತೆ ಕನ್ನಡದ ಅನೇಕ ಹಿರಿಯ ಕವಿಗಳು ಕೊಡಗಿನ ಭೂಸ್ವರೂಪ ಮತ್ತು ಪ್ರಾಕೃತಿಕ ವಿವರಗಳನ್ನು ಪದ್ಯಗಳ ಮೂಲಕ ಕಾವ್ಯಾತ್ಮಕವಾಗಿ ಹಿಡಿದಿಡುವ ಪ್ರಯತ್ನ ಮಾಡಿದ್ದಾರೆ.

ಡಿ.ವಿ.ಜಿ. ಯವರು 'ನಡೆದು ನೋಡು ಕೊಡಗಿನ ಬೆಡಗು' ಎನ್ನುವ ಮೂಲಕ ಇಲ್ಲಿ ನೈಸರ್ಗಿಕ ವಾತಾವರಣವನ್ನು ಕೇಳಿ, ಓದಿ ತಿಳಿಯುವುದಕ್ಕಿಂತ ನೋಡಿ ಅರಿಯವುದು ಉತ್ತಮವೆನ್ನುತ್ತಾರೆ. ಮಂಜಿನ ನಗರಿ ಎಂದು ಕರೆಸಿಕೊಂಡಿರುವ ಮಡಿಕೇರಿಯ ಸೊಬಗನ್ನು ಜಿ. ಪಿ. ರಾಜರತ್ನಂ ಅವರು 'ಭೂಮಿ ತಬ್ಬಿದ್ ಮೋಡ್ ಇದ್ದಂಗೆ' ಎಂದರೆ, 'ಎಲ್ಲಿ ಭೂರಮೆ ದೇವ ಸನ್ನಿಧಿ ಬಯಸಿ ಬಿಮ್ಮನೆ ಬಂದಳೊ' ಎಂದು ಪಂಜೆಯವರು ಹಾಡುತ್ತಾರೆ.

### ೨.೧.೧. 'ಕೊಡಗು' ಶಬ್ದದ ವ್ಯುತ್ಪತ್ತಿ

ಭಾರತ ಹಳ್ಳಿಗಳ ದೇಶವಾಗಿದ್ದು, ಪ್ರತಿಹಳ್ಳಿಗಳಿಗೂ ಒಂದೊಂದು ಹೆಸರಿದೆ. ಆ ಹೆಸರುಗಳು ಬರಲು ಆಯಾ ಪ್ರದೇಶದ ಪರಿಸರ, ಹವಾಮಾನ, ಭೌಗೋಳೀಕತೆ, ಜನಾಂಗ, ಧಾರ್ಮಿಕ, ಸಾಂಸ್ಕೃತಿಕ ಅಂಶಗಳು, ಆಳಿದ ರಾಜಮನೆತನಗಳು ಕಾರಣವಾಗಿರುತ್ತವೆ. ಹೀಗೆ ಬೇರೆ ಬೇರೆ ಕಾರಣಗಳಿಂದ ಕರೆಯಲ್ಪಟ್ಟ ಹೆಸರುಗಳು ಕಾಲಕ್ರಮೇಣ ಅಪಭ್ರಂಶಗೊಂಡು ಬದಲಾಗಿರುವ ಅನೇಕ ನಿದರ್ಶನಗಳೂ ನಮ್ಮ ಮುಂದಿವೆ. ಸ್ಥಳನಾಮಗಳು ಅಪಭ್ರಂಶಗೊಳ್ಳಲು ಹಲವು ರೀತಿಯ ಕಾರಣಗಳಿರುತ್ತವೆ. ಈ ಮೇಲಿನ ಅಂಶಗಳನ್ನಾಧರಿಸಿ ಪ್ರತಿ ಸ್ಥಳಗಳೂ ಒಂದು ನಿರ್ದಿಷ್ಟ ಹೆಸರಿನಿಂದ ಕರೆಯಲ್ಪಟ್ಟಿವೆ. 'ಕೊಡಗು' ಶಬ್ದ ಉಗಮಗೊಂಡಿರುವ ಹಿನ್ನೆಲೆಯನ್ನು ಕಂಡು ಹಿಡಿಯಲು ಅನೇಕ ಹಿರಿಯ ವಿದ್ವಾಂಸರು, ಸಂಶೋಧಕರು ಪ್ರಯತ್ನಿಸಿದ್ದಾರೆ. ಆದರೂ ಒಂದು ನಿಖರವಾದ ಕಾರಣವನ್ನು ಕಂಡುಕೊಳ್ಳಲು ಸಾಧ್ಯವಾಗದೆ ಹಲವರು ಹಲವು ರೀತಿಯ ಊಹೆಗಳನ್ನು ನೀಡಿರುತ್ತಾರೆ.

ಎದುರ್ಕಳ ಶಂಕರನಾರಾಯಣ ಭಟ್ಟರು ಕೊಡಗನ್ನು 'ಕುಡುಮಲೆನಾಡು' 'ಕೊಡಿಮಲೆನಾಡು'[೨] ಎಂದು ಕರೆದಿದ್ದಾರೆ. 'ಕೊಡಿ' ಎಂದರೆ ಎತ್ತರ, ಶಿಖರ ಎಂಬಂತಹ ಅರ್ಥವಿರುವುದರಿಂದ ಈ ಮೇಲಿನ ಶಬ್ದ ದಿನಗಳೆದಂತೆ ಅಪಭ್ರಂಶಗೊಂಡು 'ಕೊಡಗು' ಎಂದಾಗಿರಬಹುದು ಎಂದು ಅಭಿಪ್ರಾಯಪಡುತ್ತಾರೆ. ಕೊಡಗು ದಟ್ಟವಾದ ಅರಣ್ಯ ಹಾಗೂ ಎತ್ತರವಾದ ಶಿಖರಗಳಿಂದ ಕೂಡಿರುವುದರಿಂದ ಕೊಡಗು ಎಂಬ ಪದ ಹುಟ್ಟಿರಬಹುದು ಎಂಬ ಶಂಕರನಾರಾಯಣ ಭಟ್ಟರ ಅಭಿಪ್ರಾಯವೂ ಇಲ್ಲಿ ಗಮನಾರ್ಹವಾಗುತ್ತದೆ. ಕೊಡಿಮಲೆನಾಡು

ಎಂದರೆ ಇಳಿಜಾರಾದ ಬೆಟ್ಟಗಳ ಮೇಲಿರುವ ದಟ್ಟವಾದ ಅರಣ್ಯವೆಂದೂ ಅರ್ಥವಿದೆ. ಲೆಫ್ಟಿನೆಂಟ್ ಕೊನ್ನಾರ್ ಎಂಬ ವಿದ್ವಾಂಸ ತನ್ನ 'ಮೆಮೋರ್ ಆಫ್ ದ ಕೂರ್ಗ್ ಸರ್ವೆ' ಎಂಬ ಗ್ರಂಥದಲ್ಲಿ 'ಕೊಡಗು ಸಾವಿರಾರು ಬೆಟ್ಟಗಳ ನಾಡು' ಎಂದು ಕರೆದಿದ್ದಾನೆ.[೩] ಕೊಡವ ಭಾಷೆಯಲ್ಲಿ 'ಕೊಡಯಿ' ಎಂದರೆ ಬೇಟೆಯಾಡುವ ಸ್ಥಳ ಎಂದು ಅರ್ಥವಿರುವುದರಿಂದ ಬೇಟೆಗೆ ಪ್ರಸಿದ್ಧಿಯಾದ ಪ್ರದೇಶವೇ 'ಕೊಡಗು' ಎಂದಾಗಿರಬೇಕು.[೪] ಕೊಡಗಿನಲ್ಲಿ ಪ್ರಾಚೀನ ಕಾಲದಲ್ಲಿ ಬೇಟೆ ಯಾವ ನಿಯಮ, ನಿರ್ಬಂಧಗಳಿಲ್ಲದೆ ಒಂದು ಸಹಜವಾದ ಹಾಗೂ ಶೌರ್ಯ ಪ್ರದರ್ಶನದ ಒಂದು ಭಾಗವಾಗಿದ್ದನ್ನು ಗಮನಿಸಬಹುದು.

ಡಿ. ಎನ್. ಕೃಷ್ಣಯ್ಯನವರು ಕೊಡಗು ಬೇರೆಬೇರೆ ಹೆಸರುಗಳಿಂದ ಕರೆಯಲ್ಪಡುತ್ತಿತ್ತು ಎಂಬುದಕ್ಕೆ ಐತಿಹ್ಯಾಧಾರಿತ ಮೂರು ಕಾರಣಗಳನ್ನು ನೀಡುತ್ತಾರೆ. ಐತಿಹ್ಯಗಳು ಎಂದಾಗಿರುವುದರಿಂದ ಇದು ಕೇವಲ ಊಹೆಯೇ ಹೊರತು ಖಚಿತವಾಗಿರಲು ಸಾಧ್ಯವಿಲ್ಲವೆಂದು ಹೇಳಬಹುದು. ಅವರ ಪ್ರಕಾರ ಈ ನೆಲದಲ್ಲಿ ಮತ್ಸ್ಯದೇಶದ ರಾಜ ಚಂದ್ರವರ್ಮನು ನೆಲೆನಿಂತು ರಾಜ್ಯಭಾರ ಮಾಡಿದುದರಿಂದ ಮತ್ಸ್ಯದೇಶವೆಂದೂ, ಬ್ರಹ್ಮನು ಇಲ್ಲಿ ಕೆಲವು ಕಾಲ ವಿಷ್ಣುವನ್ನು ಪೂಜಿಸಿದುದರಿಂದ ಬ್ರಹ್ಮದೇಶವೆಂದೂ ಕರೆಯಲ್ಪಟ್ಟಿದೆ. ಮತ್ತೊಂದು ಊಹೆಯ ಪ್ರಕಾರ ಕದಂಬ ವಂಶದ ಅರಸ ಚಂದ್ರವರ್ಮನೆಂಬುವವನ ಸಂತತಿಯವರು ಕೊಡಗು ಎಂದು ಕರೆಯಲ್ಪಡುತ್ತಿರುವ ಭೂಭಾಗವನ್ನು ತಮ್ಮ ಶಕ್ತಿಯುತವಾದ ಉಗುರುಗಳಿಂದ ಹಸನುಗೊಳಿಸಿದರು. ಹೀಗೆ ಕ್ರೊಢ(ಹಂದಿ)ಗಳಂತೆ ನೆಲವನ್ನು ಹಸನು ಮಾಡಿದ್ದರಿಂದ ಅವರಿಗೆ 'ಕ್ರೋಢಜನ'ರೆಂದು ಆ ಪ್ರದೇಶಕ್ಕೆ 'ಕ್ರೋಢದೇಶ'ವೆಂಬ ಹೆಸರಾಗಿದೆಯೆಂದು ಹೇಳುತ್ತಾರೆ.[೫] ಇದೊಂದು ಪೌರಾಣಿಕ ಉಲ್ಲೇಖವಾಗಿದ್ದು, ರಾಬರ್ಟ್ ಕೋಲ್, ರೆ. ಮೊಗ್ಲಿಂಗ್ ಮುಂತಾದವರು ಇದು ಆಸಕ್ತ ಬ್ರಾಹ್ಮಣರ ಕಲ್ಪನೆಯೆಂದು ಅಲ್ಲಗಳೆದಿದ್ದಾರೆ.[೬] ಮತ್ತೊಂದು ಮೂಲದ ಪ್ರಕಾರ ಕ್ರಿ. ಶ. ೧೧೭೪ ರಲ್ಲಿ ಇಡೀ ಕೊಡಗು ಕೋಟೆಯಿಂದ ಸುತ್ತುವರಿಯಲ್ಪಟ್ಟು ನೆರೆಯ ಸೇನೆಯ ವಶದಲ್ಲಿತ್ತು. ಆದರೆ ಅನಂತರ ಬಂದ ವಿವಿಧ ರಾಜರು ಈ ದುರ್ಗವನ್ನು ಧ್ವಂಸಗೊಳಿಸಿ, ಇಲ್ಲಿನ ಕ್ಷೇತ್ರಗಳನ್ನು ಒಗ್ಗೂಡಿಸಿ ತಮ್ಮದೇ ಆದ ಸಾಮ್ರಾಜ್ಯವನ್ನು ಕಟ್ಟಿ ಇಲ್ಲಿನವರನ್ನೆಲ್ಲ ಕೊಡವರೆಂದು ಕರೆದರು[೭] ಎನ್ನಲಾಗುತ್ತದೆ. ಇದಕ್ಕೆ ಸಾಕ್ಷಿಯೆಂಬಂತೆ ೧೯೫೬ರಲ್ಲಿ ಕೊಡಗು ಪ್ರತ್ಯೇಕ ರಾಜ್ಯವಾಗಿ ರೂಪುಗೊಂಡ ಸಂದರ್ಭದಲ್ಲಿ ಕೊಡಗು ಜಿಲ್ಲೆಯನ್ನು 'ಕೊಡವ ನಾಡು' ಎಂದು ಕರೆಯಲಾಗುತ್ತಿತ್ತು. ಆದರೆ ಅನಂತರ ಬಂದ ಬ್ರಿಟೀಷರು ಈ ಹೆಸರುಗಳನ್ನೆಲ್ಲ ತಮ್ಮದೇ ಆದ ಧಾಟಿಯಲ್ಲಿ ಬದಲಾಯಿಸಿದರು. ಅದರಂತೆ, ಅವರ ಆಡಳಿತಾವಧಿಯಲ್ಲಿ ಕೊಡವ ನಾಡಿನ ಕೊಡವರನ್ನು 'ಕೊಡಗಾಸ್ ಆಫ್ ಕೊಡಗು' ಮತ್ತು 'ಕೂರ್ಗ್ಸ್ ಆಫ್ ಕೂರ್ಗ್' ಎಂದೂ ಕರೆಯುತ್ತಿದ್ದರು.

ಕನ್ನಡಿಗರು ವಾಸಿಸುವ ನೆಲವೇ ಕನ್ನಡ ನಾಡು ಆದಂತೆ ಕೊಡವರು ನೆಲೆಸಿರುವ ನಾಡೇ ಕೊಡಗು ಆಗಿರಬಹುದು ಎಂಬ ಊಹೆಯು ತುಂಬಾ ಹತ್ತಿರವಿರುವುದನ್ನು ಕಾಣಬಹುದು.

ಹತ್ತೊಂಬತ್ತನೇ ಶತಮಾನದವರೆಗೆ 'ಕೊಡಗು' ಪದವನ್ನು ಪ್ರಾದೇಶಿಕ ಮತ್ತು ಭಾಷಿಕ ಸಂದರ್ಭದಲ್ಲೇ ಬಳಸಲಾಗುತ್ತಿತ್ತು. ಅನಂತರದಲ್ಲಿ ಇದರ ಭೌಗೋಳಿಕ ಪ್ರದೇಶವನ್ನು 'ಕೊಡಗು' ಪದದಿಂದಲೂ, ಜನಾಂಗ, ಭಾಷೆ, ಸಂಸ್ಕೃತಿ ಸಂಬಂಧವಾದ ಸಂಬೋಧನೆ ಸಂದರ್ಭದಲ್ಲಿ 'ಕೊಡವ' ಎಂದು ಗುರುತಿಸುತ್ತಿರುವುದು ಕಂಡುಬರುತ್ತಿದೆ.[೮] ಪೌರಾಣಿಕವಾಗಿ ಸುಮಾರು ಒಂದನೆಯ ಶತಮಾನದ ರಚನೆಯೆನ್ನಲಾದ ಕಾವೇರಿ ಪುರಾಣದಲ್ಲಿ ಕೊಡಗಿನ ಮತ್ತು ಕೊಡವರ ಉಲ್ಲೇಖವಾಗಿರುವುದು ತಿಳಿದುಬರುತ್ತದೆ. ಚಾರಿತ್ರಿಕವಾಗಿ ಕ್ರಿ. ಶ. ಮೂರನೆಯ ಶತಮಾನದ ತಮಿಳಿನ 'ಸಂಘಂ' ಸಾಹಿತ್ಯದಲ್ಲಿ ಕೊಡಗಿನ(ಕುಡುಹಂ) ಉಲ್ಲೇಖವಿರುವುದು ಕಂಡುಬರುತ್ತದೆ.

ಕೊಡಗು 'ಕೂರ್ಗ್' ಎಂಬ ಹೆಸರಿನಿಂದಲೂ ಕರೆಯಲ್ಪಡುತ್ತಿದೆ. ಬ್ರಿಟೀಷರ ಆಗಮನದ ನಂತರ ಕರ್ನಾಟಕದ ಅನೇಕ ಸ್ಥಳಗಳ ಹೆಸರು ಬೇರೆಬೇರೆ ರೀತಿಯಲ್ಲಿ ಉಚ್ಚಾರಗೊಂಡಿರುವುದನ್ನು ಗಮನಿಸಬಹುದು. ಇಂಗ್ಲೀಷರಿಗೆ ಇಲ್ಲಿನ ಸ್ಥಳಗಳ ಹೆಸರು ಹೇಳಲು ಕಷ್ಟವಾಗಿ ಅವರದೇ ಶೈಲಿಯಲ್ಲಿ ಕರೆಯುತ್ತಾ ಬಂದರು. ಮುಂದೆ ಅದೇ ಹೆಸರುಗಳನ್ನು ಕನ್ನಡಿಗರೂ ಬಳಸುತ್ತಾ ಅವುಗಳ ಮೂಲ ಸ್ವರೂಪವನ್ನೇ ಮರೆತಿರುವ ಅನೇಕ ನಿದರ್ಶನಗಳಿವೆ. ಅದರಂತೆ 'ಕೊಡಗು' ಶಬ್ದವೂ ಬ್ರಿಟೀಷರ ಬಾಯಲ್ಲಿ ಸರಿಯಾಗಿ ಉಚ್ಚಾರವಾಗದೆ ಕೊಡಗು 'ಕೂರ್ಗ್', ಮತ್ತು ಮಡಿಕೇರಿ 'ಮರ್ಕೆರ' ಎಂದಾಗಿವೆ. ಮುಂದೆ ಇದೇ ಹೆಸರುಗಳು ಇಲ್ಲಿನ ಜನಸಮುದಾಯಕ್ಕೆ ಮೆಚ್ಚುಗೆಯಾದಂತೆ ಕಂಡುಬಂದಿದ್ದು ಇಂದಿಗೂ 'ಕೂರ್ಗ್' ಮತ್ತು 'ಮರ್ಕೆರ' ಎಂಬ ಹೆಸರುಗಳು ಬಳಸಲ್ಪಡುತ್ತಿವೆ. ಮಡಿಕೇರಿಯೂ ಸೇರಿದಂತೆ ಈ ಜಿಲ್ಲೆಯ ಕೆಲವು ಪಟ್ಟಣಗಳಲ್ಲಿರುವ ಅನೇಕ ಹಳೆಯ ಕಟ್ಟಡಗಳ ಮೇಲೆ 'ಮರ್ಕೆರ' ಎಂದೇ ಕೆತ್ತಲ್ಪಟ್ಟಿರುವುದನ್ನು ಈಗಲೂ ಗಮನಿಸಬಹುದು. ಪಾಶ್ಚಾತ್ಯರ ಪ್ರಭಾವಕ್ಕೆ ಬಹುಬೇಗ ಒಳಗಾಗಿ, ಅವರನ್ನು ಅನುಕರಿಸಿದ ಜನ ಕೊಡವರು. ಅವರ ಆಚಾರ–ವಿಚಾರ, ವೇಷ, ಭಾಷೆ ಮುಂತಾದವುಗಳನ್ನು ಕೊಡವರು ಈಗಲೂ ಅನುಸರಿಸುತ್ತಿರುವುದನ್ನು ಕಾಣಬಹುದು.

ಪಿ. ಎಸ್. ರಾಮಾನುಜಂ ಅವರು ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ 'ಕುರು' ಶಬ್ದದಿಂದ 'ಕೊಡಗು' ಬಂದಿದೆ ಎಂದು ಅಭಿಪ್ರಾಯಪಡುತ್ತಾರೆ. 'ಡ' ಕಾರ 'ರ' ಕಾರವಾಗಿ ಬಳಕೆಯಾಗಿರುವ ಅನೇಕ ಉದಾಹರಣೆಗಳನ್ನು ನೀಡಿ ಸಮರ್ಥಿಸುತ್ತಾರೆ. ಪಾಶ್ಚಾತ್ಯರು 'ಧಾರವಾಡ' ವನ್ನು 'ಧಾರವಾರ್' ಎಂದು ಕರೆದಿರುವುದು, ಹಾಗೂ ನಾಮವಾಚಕ ಪದ 'ಕರಿಯಪ್ಪ' 'ಕಾರ್ಯಪ್ಪ' ಆಗಿರುವುದನ್ನು ಉದಾಹರಿಸುತ್ತ ಕೊಡಗು 'ಕೂರ್ಗ್' ಆಗಿದೆ[೯] ಎಂದು ಹೇಳುತ್ತಾರೆ.

### ೨.೧.೨. ಜನಸಮುದಾಯ ಮತ್ತು ಭಾಷೆ

ಕೊಡಗಿನಲ್ಲಿ ಕೊಡವರಂತೆ ಉಳಿದ ಅನೇಕ ಸಮುದಾಯಗಳೂ ಈ ಜಿಲ್ಲೆಯಲ್ಲಿ ಸಾಂಸ್ಕೃತಿಕ ಸಮಾಜವನ್ನು ಕಟ್ಟುವಲ್ಲಿ ತಮ್ಮದೇ ಆದ ಕೊಡುಗೆಯನ್ನು ನೀಡಿವೆ. ಇಲ್ಲಿ ಹಲವಾರು ಸಂಸ್ಕೃತಿಯ ಜಾತಿ ಜನಾಂಗಗಳಿವೆ. ಹತ್ತಾರು ಭಾಷೆಗಳಿವೆ. ಇದು ಬುಡಕಟ್ಟು ಸಂಸ್ಕೃತಿಯ

ಆಗರವೂ ಹೌದು. ಕೊಡಗು ಎಂದಾಕ್ಷಣ ನಮ್ಮ ಮನಸ್ಸಿಗೆ ಬರುವುದು ಕೊಡವರು. ಆದರೆ ಇಲ್ಲಿ ಅರೆಗೌಡರು, ಬುಡಕಟ್ಟು ಜನಾಂಗಗಳಾದ ಎರವರು, ಪಣಿಯರು ಹಾಗು ಇಲ್ಲಿನ ಮೂರು ಮುಖ್ಯ ಮೂಲನಿವಾಸಿಗಳೆಂದು ಕರೆಯಲ್ಪಡುವ ಹಾಲುಕುರುಬರು, ಜೇನುಕುರುಬರು ಮತ್ತು ಬೆಟ್ಟಕುರುಬರು ಸೇರಿದಂತೆ ಇನ್ನೂ ಹಲವಾರು ಜಾತಿಯ ಹಾಗೂ ಧರ್ಮದ ಜನರು ವಾಸಿಸುತ್ತಿದ್ದಾರೆ. ಇವರೂ ಸೇರಿದಂತೆ ಕೊಡಗಿನಲ್ಲಿ ಸುಮಾರು ೨೩ ಜನಾಂಗಗಳನ್ನು ಇಲ್ಲಿನ ಮೂಲನಿವಾಸಿಗಳೆಂದು ೧೮೧೨ರಲ್ಲಿ ರಚಿತವಾಗಿರುವ ಲಿಂಗರಾಜನ 'ಹುಕುಂನಾಮೆ'ಯಲ್ಲಿ ಬರೆಯಲಾಗಿದೆ.[೧೦] ಕೊಡಗಿನಲ್ಲಿ ಇವರು ಮಾತ್ರವಲ್ಲದೆ ಬ್ರಾಹ್ಮಣ, ಒಕ್ಕಲಿಗರು, ಅರೆಗೌಡರು, ಲಿಂಗಾಯತರು, ಪರಿಶಿಷ್ಟ ಜಾತಿ, ಗೊಲ್ಲ, ಕಣಿಯ, ಕೆಂಬಟ್ಟಿ, ಐರಿರ, ಕೊಯವ, ಕಾಪಳ, ಬೇಡರು, ಈಡಿಗರು, ಕುಂಬಾರರು, ಅಗಸರು, ಬೆಸ್ತರು, ಮುಸಲ್ಮಾನರು, ಕ್ರಿಶ್ಚಿಯನ್ನರು, ಮಲಯಾಳಿಗರು ಮೊದಲಾದವರು ಇಲ್ಲಿ ಜೀವನವನ್ನು ಕಟ್ಟಿಕೊಂಡು ತಮ್ಮದೇ ಸಂಸ್ಕೃತಿಯನ್ನು ಅಳವಡಿಸಿಕೊಂಡಿದ್ದಾರೆ. ಯಾವುದೇ ಹಬ್ಬಗಳಾಗಲಿ, ಆಚರಣೆಗಳಾಗಲಿ ವೈವಿಧ್ಯತೆಯನ್ನು ಅನುಸರಿಸುತ್ತಾರೆ. ಇಡೀ ಕೊಡಗು ಕೊಡವರ ಹಬ್ಬಗಳು, ಧಾರ್ಮಿಕ ಪದ್ಧತಿಗಳು ಮತ್ತು ಬುಡಕಟ್ಟು ಜನರಾದ ಎರವರು, ಜೇನುಕುರುಬರು ಆಚರಿಸುವ ಕೆಲವು ವಿಚಿತ್ರ ರೀತಿಯ ಹಬ್ಬಗಳ ಮೂಲಕ ಪ್ರತ್ಯೇಕತೆಯನ್ನು ಕಂಡುಕೊಂಡಿದೆ. ಇಲ್ಲಿನ ಜನಸಮುದಾಯದಲ್ಲಿ ಸಾಮಾಜಿಕವಾದ ಸಮಾನತೆಯನ್ನು ಕಾಣಲಾಗದಿದ್ದರೂ, ತಮ್ಮದೇ ಆದ ಜೀವನವಿಧಾನವನ್ನು ಅಳವಡಿಸಿಕೊಂಡು ಸಾಮರಸ್ಯದ ಬದುಕನ್ನು ನಡೆಸುತ್ತಿದ್ದಾರೆ.

ಕೊಡವರಲ್ಲಿ ಅಮ್ಮಕೊಡವ, ಸಣ್ಣಕೊಡವ, ಮಲ್ಲಕೊಡವ ಹಾಗೂ ಬೊಡ್ಡುಕೊಡವರೆಂಬ ನಾಲ್ಕು ಗುಂಪುಗಳಿವೆ. ಇವರ ಆಚರಣೆಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳಿದ್ದು, ಪರಸ್ಪರ ವೈವಾಹಿಕ ಸಂಬಂಧಗಳಿರುವುದಿಲ್ಲ. ಅಮ್ಮಕೊಡವರು ಸಸ್ಯಾಹಾರಿಗಳು ಎಂಬುದು ವಿಶೇಷವಾದದ್ದು. ಅಮ್ಮಕೊಡವರನ್ನು ಕುರಿತು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

೨೦೧೧ರ ಜನಗಣತಿಯ ಪ್ರಕಾರ ಕೊಡಗಿನ ಜನಸಂಖ್ಯೆ ೫,೫೪,೭೬೩ ಇದ್ದು, ಮಡಿಕೇರಿ ತಾಲೂಕಿನಲ್ಲಿ ೧,೪೬,೬೮೪ (ಗಂಡಸರು- ೭೩,೦೦೫, ಹೆಂಗಸರು-೭೩,೬೭೬), ವಿರಾಜಪೇಟೆ ತಾಲೂಕಿನಲ್ಲಿ ೨,೦೧,೪೩೮(ಗಂಡಸರು-೯೯,೭೪೧, ಹೆಂಗಸರು-೧,೦೧,೬೯೫), ಮತ್ತು ಸೋಮವಾರಪೇಟೆ ತಾಲೂಕಿನಲ್ಲಿ ೨,೦೬,೬೪೦( ಗಂಡಸರು-೧,೦೧,೯೭೨, ಹೆಂಗಸರು-೧,೦೪,೬೬೬) ಜನರಿದ್ದಾರೆಂದು ಗುರುತಿಸಲಾಗಿದೆ. ಇದರಲ್ಲಿ ಮೂರೂ ತಾಲೂಕುಗಳಲ್ಲಿ ಕೊಡವರ ಸಂಖ್ಯೆ ೧,೬೦,೦೦೦ ಎಂದು ಹೇಳಲಾಗಿದೆ. ಸೋಮವಾರಪೇಟೆ ತಾಲೂಕಿನಲ್ಲಿ ಕೊಡವರ ಸಂಖ್ಯೆ ೩೦,೦೦೦ ಮಾತ್ರವಿದೆ.[೧೧]

**ಭಾಷೆ:** ಮಾನವರು ಸಂವಹನ ಮತ್ತು ಸಾಂಸ್ಕೃತಿಕ ಸಾಮರಸ್ಯವನ್ನು ಹೊಂದಲು ವಾಹಕವಾಗಿರುವುದೇ ಭಾಷೆ. ಹಾಗಾಗಿ ಕೊಡಗಿನಲ್ಲಿ ಕನ್ನಡ, ಕೊಡವ, ಅರೆಭಾಷೆ, ಮಲೆಯಾಳ, ತಮಿಳು, ತುಳು, ಎರವ ಮೊದಲಾದ ಭಾಷೆಗಳನ್ನು ಮಾತನಾಡುವವರಿದ್ದಾರೆ. 'ಕೊಡವ' ಇಲ್ಲಿನ

ಕೊಡವರ ಭಾಷೆ ಎಂದು ಹೇಳಲಾಗಿದೆ. ಆದರೆ ಇದನ್ನು ಇಲ್ಲಿನ ಸ್ಥಳೀಯ ಭಾಷೆ ಎಂದು ಕರೆಯಬಹುದು. ಏಕೆಂದರೆ ಈ ಭಾಷೆಯನ್ನು 'ಕೊಡವರು' ಮಾತ್ರವಲ್ಲದೆ ಅಮ್ಮಕೊಡವ, ಕೆಂಬಟ್ಟಿಯರು ಸೇರಿದಂತೆ ಸುಮಾರು ಹದಿನೆಂಟು ಜನಾಂಗಗಳು ಬಳಸುತ್ತಿದ್ದಾರೆ. ಇವರೆಲ್ಲ ಕೊಡವ ಭಾಷಿಕ ಮೂಲನಿವಾಸಿಗಳೆಂದೂ ಕರೆಯಿಸಿಕೊಂಡಿದ್ದಾರೆ. ಇಲ್ಲಿಗೆ ಕೇರಳದಿಂದ ಬಂದವರು ಮಲೆಯಾಳ ಮಾತನಾಡಿದರೆ, ದಕ್ಷಿಣ ಕನ್ನಡದಿಂದ ಬಂದವರು ತುಳು ಮಾತನಾಡುತ್ತಾರೆ. ಹೀಗೆ ಇಡೀ ಜಿಲ್ಲೆ ಹಲವು ಭಾಷಾವರ್ಗದಿಂದ ಕೂಡಿದ್ದು ಭಾಷಾ ವೈವಿಧ್ಯತೆಯನ್ನು ಹೊಂದಿದೆ.

ಚಿಕವೀರರಾಜ ಪದಚ್ಯುತಿಗೊಂಡು ಇಂಗ್ಲೆಂಡ್‌ನಲ್ಲಿ ವಾಸಮಾಡುತ್ತಿರುವ ಸಮಯದಲ್ಲಿ ರಾಜನ ಮೇಲ್ವಿಚಾರಕ ಜೆ. ಎಸ್. ಮಿಲ್ ಜೊತೆ ಸಂಭಾಷಿಸುತ್ತಿರುವಾಗ ಕೊಡವ ಭಾಷೆಯ ಬಗೆಗೆ ಹೀಗೆ ಹೇಳುತ್ತಾನೆ. 'ಕೊಡವ ಭಾಷೆ ಕೊಡಗಿನಲ್ಲಿರುವ ಒಂದು ಜನಾಂಗದ ಭಾಷೆ. ಅದಕ್ಕೆ ಲಿಪಿಯಿಲ್ಲ. ದಕ್ಷಿಣ ಕೊಡಗಿನಲ್ಲಿರುವ ಈ ಜನಾಂಗ ಮಲೆಯಾಳ ದೇಶದ ಸಂಸ್ಕೃತಿಯಿಂದ ತುಂಬಾ ಪ್ರಭಾವಿತವಾಗಿದೆ. ಭಾಷೆ ಮಲೆಯಾಳದಂತಿದ್ದರೂ ಬರೆಯುವುದು ಕನ್ನಡದಲ್ಲಿ'[೧೨] ಎಂದು ಹೇಳುವಂತೆ 'ಕೊಡವ' ಭಾಷೆ ಕನ್ನಡ, ಮಲೆಯಾಳ ಹಾಗೂ ತುಳು ಮಿಶ್ರಿತ ಭಾಷೆಯಾಗಿದೆ.

ದಕ್ಷಿಣ ದ್ರಾವಿಡ ಭಾಷೆಗಳ ಗುಂಪಿಗೆ ಸೇರುವ ಕೊಡವ ಭಾಷೆಯು ಹಳಗನ್ನಡ ಮತ್ತು ತುಳು ಭಾಷೆಗಳ ನಡುವೆ ಬರುತ್ತದೆಂದು ರಾಬರ್ಟ್ ಕಾಲ್ಡ್‌ವೆಲ್ ಅಭಿಪ್ರಾಯಪಡುತ್ತಾರೆ.[೧೩] ಇದು ತಮಿಳು ಮತ್ತು ಮಲೆಯಾಳಂ ಭಾಷೆಗೆ ಹತ್ತಿರವಿದೆಯೆಂದು ಮೊಗ್ಲಿಂಗ್ ಹೇಳುತ್ತಾರೆ.[೧೪] ತುಳು, ಕೊಂಕಣಿಯಂತೆ ಕೊಡವ ಭಾಷೆ ಕೂಡ ಕನ್ನಡದ ಉಪಭಾಷೆಯಾಗಿರುವುದರಿಂದ ಇದಕ್ಕೂ ಪ್ರತ್ಯೇಕ ಲಿಪಿಯೆಂಬುದಿಲ್ಲ. ೧೮೮೭ರಲ್ಲಿ ಕೊಡಗಿನವರೇ ಆದ ಡಾ. ಕೊರವಂಡ ಅಪ್ಪಯ್ಯನವರು ಇದಕ್ಕೆ ಪ್ರತ್ಯೇಕ ಲಿಪಿಯನ್ನು ಕಂಡು ಹಿಡಿದಿದ್ದರು.[೧೫] ಆದರೆ ಅದು ರೂಢಿಗೆ ಬಂದಿರುವ ಯಾವ ಸುಳಿವೂ ಇಲ್ಲ. ೧೮೬೭ರಲ್ಲಿ ಮೇಜರ್ ಆರ್. ಎ. ಕೋಲ್ ಎಂಬ ವಿದ್ವಾಂಸ 'ಕೂರ್ಗ್ ಗ್ರಾಮರ್' ಎಂಬ ವ್ಯಾಕರಣ ಗ್ರಂಥವನ್ನು ರಚಿಸಿದ್ದಾನೆಂದು ತಿಳಿದುಬಂದಿದೆ.[೧೬] ಕನ್ನಡ ಲಿಪಿಯನ್ನೇ ಬಳಸಿಕೊಂಡು ಕೊಡವ ಭಾಷೆಯಲ್ಲಿ ಹಲವು ಗ್ರಂಥಗಳು ರಚನೆಯಾಗಿವೆ. ಅಲ್ಲದೆ ಇಂದಿಗೂ ಕೊಡಗಿನಲ್ಲಿ ಹಲವಾರು ದಿನಪತ್ರಿಕೆಗಳು ಕೊಡವ ಭಾಷೆಯಲ್ಲಿಯೇ ಪ್ರಕಟವಾಗುತ್ತಿದ್ದು, ಅದಕ್ಕನುಗುಣವಾಗಿ ಓದುಗರ ಸಮೂಹವೂ ಇದೆ. 'ಕರ್ನಾಟಕ ಕೊಡವ ಅಕಾಡೆಮಿ' ಕೊಡವ ಭಾಷೆಯ ಪ್ರಾಮುಖ್ಯತೆಯನ್ನು ಉಳಿಸುವ ನಿಟ್ಟಿನಲ್ಲಿ ಕಾರ್ಯನಿರ್ವಹಿಸುವ ಪ್ರಯತ್ನ ಮಾಡುತ್ತಿದೆ. ಅನೇಕ ಕನ್ನಡ ಕೃತಿಗಳನ್ನು ಕೊಡವ ಭಾಷೆಗೆ ಅನುವಾದಿಸಿ ಪ್ರಕಟಿಸುತ್ತಿದೆ.

ಕೊಡಗಿನ ಮತ್ತೊಂದು ವಿಶಿಷ್ಟ ಭಾಷೆ 'ಎರವ ಭಾಷೆ'. ಇದನ್ನು ಇಲ್ಲಿನ ಬುಡಕಟ್ಟು ಜನಾಂಗವಾದ 'ಎರವರು' ಬಳಸುತ್ತಾರೆ. ಇದನ್ನು ಕಾಡು ಭಾಷೆಯೆಂತಲೂ ಮಲೆಯಾಳಂನ ಉಪಭಾಷೆಯೆಂತಲೂ ಕರೆಯಲಾಗುತ್ತದೆ. ಆದರೂ ತನ್ನದೇ ಆದ ಭಾಷಾ ರಚನೆಯನ್ನು

ಹೊಂದಿದೆ. ಇದು ನೇರವಾಗಿ ಕನ್ನಡ, ಕೊಡವ, ಮಲೆಯಾಳಂ ಭಾಷಿಗರಿಗೆ ಅರ್ಥವಾಗುವುದಿಲ್ಲ. ಇದು ದಕ್ಷಿಣ ದ್ರಾವಿಡ ಗುಂಪಿಗೆ ಸೇರುವ ಒಂದು ಪ್ರತ್ಯೇಕವಾದ ಭಾಷೆಯಾಗಿದೆ. ವ್ಯಾಕರಣದ ದೃಷ್ಟಿಯಿಂದ ನೋಡಿದರೆ ಎರವ ಭಾಷೆಯ ಕೆಲವು ಪದಗಳು ಕನ್ನಡ, ಕೊಡವ ಭಾಷೆಗಳಂತೆಯೇ 'ಉ' ಕಾರಾಂತಗಳಾಗಿವೆ. ಪಿ. ಎನ್. ಹರೀಶ್ ಅವರು 'ಎರವ' ಭಾಷೆ, ಸಾಹಿತ್ಯ, ಸಂಸ್ಕೃತಿಯ ಬಗ್ಗೆ ಸಮಗ್ರ ಅಧ್ಯಯನ ನಡೆಸಿ ಸಂಶೋಧನ ಪ್ರಬಂಧ ಪ್ರಕಟಿಸಿದ್ದಾರೆ.[೧೭]

ಕೊಡಗಿನ ಮೂಲನಿವಾಸಿಗಳಲ್ಲಿ ಕುರುಬರೂ ಪ್ರಮುಖರು. ಇವರಲ್ಲಿ 'ಕಾಡುಕುರುಬ', 'ಬೆಟ್ಟಕುರುಬ' ಮತ್ತು 'ಜೇನುಕುರುಬ' ಎಂಬ ಪ್ರಬೇಧಗಳಿವೆ. ಹಾಗೆಯೇ ಅವರಾಡುವ ಭಾಷೆಯಲ್ಲಿಯೂ ಕೂಡ ಒಳಪ್ರಬೇಧಗಳಿವೆ. ಕನ್ನಡ ಭಾಷೆಯನ್ನೇ ವಿಭಿನ್ನವಾಗಿ, ವಿಶಿಷ್ಟವಾಗಿ ಮಾತನಾಡುವ ಈ ಭಾಷೆಯನ್ನು 'ಕುರುಬಕನ್ನಡ'ವೆಂದೇ ಗುರುತಿಸಲಾಗಿದೆ. ದ್ರಾವಿಡ ಭಾಷೆಗಳ ಕಲಸುಮೇಲೋಗರದಂತೆ ಕಂಡರೂ ಪ್ರಾದೇಶಿಕ ಸೊಗಡಿನಿಂದ ಕೂಡಿದ ಈ 'ಕುರುಬಕನ್ನಡ' ಭಾಷೆ ತನ್ನದೇ ಆದ ವಿಶಿಷ್ಟತೆಯನ್ನು ಹೊಂದಿದೆ.

ಕೊಡಗಿನಲ್ಲಿ ಬಳಕೆಯಲ್ಲಿರುವ ಭಾಷೆಗಳಲ್ಲಿ ಕೊಡಗಿನ ಗೌಡರು ಮಾತನಾಡುವ 'ಅರೆಭಾಷೆ'ಯೂ ಪ್ರಮುಖವಾದದ್ದು. ಇವರು ಮೂಲತ ಕೊಡಗಿನವರಲ್ಲ, ದಕ್ಷಿಣ ಕನ್ನಡದ ಸುಳ್ಯ ಪರಿಸರದಿಂದ ಇಲ್ಲಿಗೆ ವಲಸೆ ಬಂದವರು. ಇವರ ಭಾಷೆಯನ್ನು 'ಅರೆಭಾಷೆ' ಆಥವಾ 'ಗೌಡಕನ್ನಡ'ವೆಂದು ಕರೆಯುತ್ತಾರೆ. ಕರಾವಳಿ ಭಾಗದಿಂದ ಬಂದವರಾದ್ದರಿಂದ ತುಳು ಹಾಗೂ ಕೊಡವ ಸಂಸ್ಕೃತಿಯ ಸಮೀಕರಣದ ಸಮತೋಲನವನ್ನು ಕಾಪಾಡಿಕೊಂಡು ಬಂದಿದ್ದಾರೆ ಎಂಬ ಅಂಶ ಇವರಾಡುತ್ತಿರುವ ಅರೆಭಾಷೆಯಲ್ಲಿ ವ್ಯಕ್ತವಾಗುತ್ತದೆ. ವೀರರಾಜಪೇಟೆ ಹಾಗೂ ಮಡಿಕೇರಿ ಭಾಗಗಳಲ್ಲಿ ಅರೆಭಾಷೆ ಮಾತನಾಡುವವರು ಕಂಡುಬರುತ್ತಾರೆ. ಕೊಡಗಿನಲ್ಲಿ ಈ ಭಾಷೆಗೂ ಪ್ರಾಮುಖ್ಯತೆಯಿದೆ. ಇದನ್ನು ಉಳಿಸುವ ಕಾರಣದಿಂದಾಗಿ 'ಅರೆಭಾಷಾ ಅಕಾಡೆಮಿ'ಯ ಸ್ಥಾಪನೆಯೂ ಆಗಿದೆ. ಅರೆಭಾಷೆಯಲ್ಲಿ ಪತ್ರಿಕೆಗಳನ್ನು ತರುವ ಹಾಗೂ ಕತೆ, ಕಾವ್ಯ, ನಾಟಕಗಳನ್ನು ಬರೆಯುವ ಪ್ರಯತ್ನವೂ ನಡೆದಿದೆ.

### ೨.೧.೩. ಪ್ರಮುಖ ಪಟ್ಟಣಗಳ ಹೆಸರುಗಳ ವಿವೇಚನೆ

ಕೊಡಗು ಜಿಲ್ಲೆಯಲ್ಲಿ ಮಡಿಕೇರಿ, ವಿರಾಜಪೇಟೆ ಮತ್ತು ಸೋಮವಾರಪೇಟೆ ಇವು ಮೂರು ತಾಲ್ಲೂಕು ಕೇಂದ್ರವಾಗಿದ್ದರೂ ಕುಶಾಲನಗರ, ಅಮ್ಮತ್ತಿ, ಗೋಣಿಕೊಪ್ಪ, ಪೊನ್ನಂಪೇಟೆ ಮೊದಲಾದ ಇನ್ನೂ ಹಲವು ಪಟ್ಟಣಗಳು ಶೈಕ್ಷಣಿಕ ಹಾಗೂ ವ್ಯಾವಹಾರಿಕವಾಗಿ ಪ್ರಸಿದ್ಧವಾಗಿವೆ. ಈ ಹೆಸರುಗಳು ಬಂದಿರಬಹುದಾದ ಕಾರಣಗಳನ್ನು ಈ ಕೆಳಗಿನಂತೆ ವಿವರಿಸಬಹುದು.

**ಮಡಿಕೇರಿ:** ಇದು ಕೊಡಗಿನ ಜಿಲ್ಲಾಕೇಂದ್ರ, ಹಾಲೇರಿ ಅರಸರ ಆಳ್ವಿಕೆಯಿಂದ ಬ್ರಿಟೀಷರ ಆಳ್ವಿಕೆಯವರೆಗೂ ಮಡಿಕೇರಿ ಆಡಳಿತ ಕೇಂದ್ರ ಸ್ಥಾನವಾಗಿತ್ತು. ಅದು ಇಂದಿಗೂ

ಮುಂದುವರೆದಿದೆ. ಮಡಿಕೇರಿ ಎಂದು ಹೆಸರು ಬರಲು ಹಾಲೇರಿ ಅರಸರಲ್ಲಿ ಪ್ರಸಿದ್ಧನಾದ ಮುದ್ದುರಾಜ ಕಾರಣವೆಂದು ಹೇಳಲಾಗುತ್ತದೆ. ಅರಣ್ಯದಿಂದಾವೃತವಾಗಿದ್ದ "ಈ ಪ್ರದೇಶವನ್ನು ಸವರಿ ಕಣಿವೆ ಪ್ರದೇಶದಲ್ಲಿ ವ್ಯವಸ್ಥಿತವಾದ ಒಂದು ಜನವಸತಿ ನಿರ್ಮಿಸಿಕೊಟ್ಟು ಅದಕ್ಕೆ 'ಮುದ್ದುರಾಜಕೇರಿ' ಎಂದು ಹೆಸರಿಟ್ಟರು."[೧೮] ಇದೇ ಮುಂದೆ ಮಡಿಕೇರಿಯಾಯಿತು. ಇಂದಿಗೂ ಇದು ಇಲ್ಲಿನ ಜನರಿಗೆ ಮುದ್ದುರಾಜಕೇರಿಯೇ ಆಗಿದೆ ಎಂದು ಹೇಳಲಾಗುತ್ತಿದೆ. ಆದರೆ ಕೆಲವು ಜನ ಇದನ್ನು ಹಾಲೇರಿ ಮತ್ತು ಹೊರಮಲೆನಾಡುಗಳ ಮಧ್ಯದ ಕೇರಿಯಾದುದರಿಂದ 'ಮಡಿಕೇರಿ' ಆಯಿತು ಎಂದು ಹೇಳುವುದು ಕಂಡುಬರುತ್ತದೆ.[೧೯] ಅಲ್ಲದೆ ಈ ಹೆಸರು ಬರಲು ಇನ್ನೂ ಎರಡು ಕಾರಣಗಳನ್ನು ಗುರುತಿಸುತ್ತಾರೆ. ಈ ಪ್ರದೇಶ "ತರುಲತೆಗಳಿಂದ ನಿಬಿಡವಾಗಿದ್ದು, ಮನೋಹರವಾಗಿ ಬಹಳ ಶುಭ್ರವಾಗಿತ್ತು". ಆದುದರಿಂದ ಇದನ್ನು 'ಮಡಿಯಾದಕೇರಿ'[೨೦] ಎಂದು ಕರೆಯಲಾಗುತ್ತಿತ್ತು. ಇದೇ ಕಾಲಕ್ರಮೇಣ ಮಡಿಕೇರಿಯಾಗಿರಬಹುದು ಎಂದು ಅಂದಾಜಿಸಲಾಗಿದೆ. ಮತ್ತೊಂದು ಊಹೆಯ ಪ್ರಕಾರ ಈ ಸ್ಥಳದಲ್ಲಿ ಹೆಚ್ಚಾಗಿ ಮಡಿಕೆಗಳನ್ನು ಮಾಡಲಾಗುತ್ತಿತ್ತು ಹಾಗಾಗಿ 'ಮಡಿಕೆ ಕೇರಿ' ಎಂದು ಕರೆಸಿಕೊಂಡು ನಂತರ ಮಡಿಕೇರಿಯಾಗಿದೆ ಎಂದೂ ಅಭಿಪ್ರಾಯಪಡಲಾಗಿದೆ.[೨೧] ಮಡಿಕೇರಿ ಕೊಡಗಿನ ಪ್ರಮುಖ ತಾಲ್ಲೂಕು ಕೇಂದ್ರವಾಗಿದ್ದು, ಮುಖ್ಯ ಪಟ್ಟಣವೂ ಆಗಿದೆ. ವಾಣಿಜ್ಯ, ಸಾಂಸ್ಕೃತಿಕ ಹಾಗೂ ಶೈಕ್ಷಣಿಕವಾಗಿ ಗುರುತಿಸಿಕೊಂಡು ತನ್ನ ಜನಪ್ರಿಯತೆಯನ್ನು ಉಳಿಸಿಕೊಂಡು ಹೋಗುತ್ತಿದೆ.

**ವೀರರಾಜಪೇಟೆ:** ಇದು ಕೊಡಗಿನ ಮತ್ತೊಂದು ತಾಲ್ಲೂಕು ಕೇಂದ್ರ. ಈಸ್ಟ್ ಇಂಡಿಯಾ ಕಂಪೆನಿಯ ಮುಂಬಯಿ ಸಂಸ್ಥಾನದ ಮುಖ್ಯಸ್ಥ ಮೇಜರ್ ಅಬರ್ ಕ್ರಾಂಬಿ ಆಗ ಕೊಡಗಿನ ಅರಸನಾಗಿದ್ದ ವೀರರಾಜೇಂದ್ರನನ್ನು ಬೇಟಿ ಮಾಡಲು ಬರುತ್ತಾನೆ. ಆ ಬೇಟಿಯ ಸವಿನೆನಪಿಗಾಗಿ ಸುಸಜ್ಜಿತವಾದ ಪಟ್ಟಣವನ್ನು ಸ್ಥಾಪಿಸಿ ತನ್ನ ಹೆಸರಿನಲ್ಲಿಯೇ 'ವೀರರಾಜೇಂದ್ರಪೇಟೆ' ಎಂದು ನಾಮಕರಣ ಮಾಡಿ ಅಕ್ಕ ಪಕ್ಕದ ಪ್ರಾಂತ್ಯಗಳಿಂದ ಜನರನ್ನು ಕರೆದು ತಂದು ವಾಸಿಸಲು ಅನುವು ಮಾಡಿಕೊಡುತ್ತಾನೆ.[೨೨] ಇದೇ ಹೆಸರಿನಿಂದ ಕರೆಸಿಕೊಳ್ಳುತ್ತಿದ್ದ ಈ ಪಟ್ಟಣ ಬರಬರುತ್ತಾ ಜನರ ಬಾಯಲ್ಲಿ ಸಂಕ್ಷಿಪ್ತಗೊಂಡು 'ವಿರಾಜಪೇಟೆ' ಎಂದಷ್ಟೇ ಉಳಿದಿದೆ. ಇದು ದಕ್ಷಿಣ ಕೊಡಗಿನಲ್ಲಿ ಸ್ಥಾಪಿತವಾದ ಮೊದಲ ನಗರವಾಗಿದೆ.[೨೩] ಈ ನಗರಕ್ಕೆ ಕೇರಳದ ಪ್ರಭಾವವಿದ್ದು, ಮಲೆಯಾಳ ಭಾಷಿಕರ ಸಂಖ್ಯೆ ಅಧಿಕವಾಗಿದೆ. ವೀರರಾಜಪೇಟೆಗೂ ಕೇರಳದ ತಲಚೇರಿ, ಕಣ್ಣಾನೂರು ಎಂಬ ಪಟ್ಟಣಗಳಿಗೆ ಇಂದಿಗೂ ವ್ಯಾಪಾರ ವಹಿವಾಟು ನಡೆಯುತ್ತಿದೆ. ಗೋಣಿಕೊಪ್ಪ, ಅಮ್ಮತ್ತಿ, ಪೊನ್ನಂಪೇಟೆ ಮುಂತಾದ ಪ್ರಮುಖ ಪಟ್ಟಣಗಳು ಇದೇ ತಾಲ್ಲೂಕಿನವುಗಳಾಗಿವೆ.

**ಕುಶಾಲನಗರ:** ಮಡಿಕೇರಿಯಿಂದ ಮೈಸೂರು ಮಾರ್ಗವಾಗಿ ಸಾಗುವಾಗ ಸುಮಾರು ೩೦ ಕಿ.ಮೀ ದೂರದಲ್ಲಿ ಕುಶಾಲನಗರವೆಂಬ ಪಟ್ಟಣವಿದೆ. ಈ ಪ್ರದೇಶವನ್ನು ಆವರಿಸಿಕೊಂಡಂತೆ ಕಾವೇರಿ ನದಿ ಹರಿಯುತ್ತಿದೆ. ಹೈದರಾಲಿಯು ಮೈಸೂರಿನ ನವಾಬನಾಗಿದ್ದ ಕಾಲದಲ್ಲಿ ಈ ಸ್ಥಳದಲ್ಲಿ ಬೀಡುಬಿಟ್ಟಿದ್ದನು. ಅದೇ ಸಮಯದಲ್ಲಿ ಇವನಿಗೆ ಟಿಪ್ಪು ಜನಿಸಿದ ಸಂತೋಷಕರ ವಿಷಯ

ತಿಳಿಯಿತು. ಈ ಖುಷಿಯ ಸ್ಮರಣಾರ್ಥ ಇಲ್ಲಿಗೆ 'ಕುಶಾಲ್ ನಗರ'ವೆಂದು ಹೆಸರನ್ನಿಟ್ಟು ಒಂದು ಕೋಟೆಯನ್ನು ನಿರ್ಮಿಸಿದನೆಂದು ಪಾಶ್ಚಾತ್ಯ ವಿದ್ವಾಂಸ ರೈಸ್ ಹೇಳಿದ್ದಾರೆ. ಆದರೆ ಚಾರಿತ್ರಿಕವಾಗಿ ಇದು ಸರಿಯಾಗಿಲ್ಲ. ಏಕೆಂದರೆ ಟಿಪ್ಪು ಹುಟ್ಟಿದ ಸಮಯದಲ್ಲಿ ಹೈದರ್ ಮೈಸೂರಿನ ಸೈನ್ಯದಲ್ಲಿ ಸಣ್ಣ ನಾಯಕನಾಗಿದ್ದನು. ಬಹುಷ ಈ ಪ್ರದೇಶದಲ್ಲಿ ಹೈದರ್ ನೆಲೆಸಿರುವಾಗ ಟಿಪ್ಪು ಶತ್ರುಗಳ ಮೇಲೆ ಜಯವನ್ನು ಪಡೆದ ವರ್ತಮಾನವು ಗೊತ್ತಾಗಿ ಸಂತೋಷವಾದ್ದರಿಂದ ಕುಶಾಲ (ಸಂತೋಷ)ನಗರ[೨೪] ಎಂದು ಕರೆದಿರಬಹುದು ಎಂಬ ವಾದವನ್ನು ಡಿ. ಎನ್. ಕೃಷ್ಣಯ್ಯನವರು ಮುಂದಿಡುತ್ತಾರೆ. ಮತ್ತೊಂದು ವಾದದ ಪ್ರಕಾರ "ಟಿಪ್ಪುವಿಗೆ ಗಂಡುಮಗು ಜನಿಸಿದ ಸುದ್ದಿ ಕೇಳಿ ಆ ಸ್ಥಳಕ್ಕೆ 'ಕುಶಾಲ್‌ನಗರ'" ಎಂದು ನಾಮಕರಣ ಮಾಡಲಾಯ್ತು[೨೫] ಎನ್ನಲಾಗಿದೆ. ನಂತರದ ಹಲವು ವರ್ಷಗಳಲ್ಲಿ ಕೊಡಗನ್ನು ಬ್ರಿಟೀಷರು ವಶಪಡಿಸಿಕೊಂಡ ಮೇಲೆ ಇಲ್ಲಿದ್ದ ಕೋಟೆಯನ್ನು ನೆಲಸಮಮಾಡಿ ಅದರಿಂದ ಸಿಕ್ಕ ಕಲ್ಲುಗಳಿಂದ ಬ್ರಿಟೀಷ್ ಅಧಿಕಾರಿ ಫ್ರೇಜರನ ನೇತೃತ್ವದಲ್ಲಿ ಕಾವೇರಿ ನದಿಗೆ ಅಡ್ಡಲಾಗಿ ಸೇತುವೆಯನ್ನು ಕಟ್ಟಿದರಂತೆ. ಇದರಿಂದ ಸಂತೋಷಗೊಂಡ ಕೊಡಗಿನ ಜನರು ಫ್ರೇಜರನ ನೆನಪಿಗಾಗಿ 'ಕುಶಾಲನಗರ'ವನ್ನು 'ಫ್ರೇಜರ್‌ಪೇಟೆ'ಯೆಂದು ಕರೆದರು. ಆದರೆ ಕುಶಾಲನಗರವೆಂಬ ಹೆಸರೇ ಇಂದಿಗೂ ರೂಢಿಯಲ್ಲಿದ್ದು, ಈ ನಗರದ ಒಂದು ಪಾರ್ಶ್ವದ ಜನವಸತಿ ಪ್ರದೇಶವನ್ನು ಫ್ರೇಜರ್‌ಪೇಟೆ ಎಂದು ಕರೆಯಲಾಗುತ್ತಿದೆ. ಕುಶಾಲನಗರ ದಕ್ಷಿಣ ಕೊಡಗಿನ ಹಾಗೆ ಬೆಟ್ಟ ಕಣಿವೆಗಳಿಂದ ಕೂಡಿರದೆ ಸಮತಟ್ಟಾದ ಪ್ರದೇಶವಾಗಿದೆ. ಕೊಡಗಿನ ಉಳಿದ ಪಟ್ಟಣಗಳಂತೆ ವ್ಯಾವಹಾರಿಕವಾಗಿ, ಸಾಂಸ್ಕೃತಿಕವಾಗಿ ಹಾಗೂ ಶೈಕ್ಷಣಿಕವಾಗಿ ಮುಂದುವರೆದಿದೆ. ಇಲ್ಲಿ ಸರ್ಕಾರಿ ಪದವಿ ಕಾಲೇಜು, ಇಂಜಿನಿಯರಿಂಗ್ ಕಾಲೇಜು ಮತ್ತು ಡಿಪ್ಲೋಮಾ ಕಾಲೇಜುಗಳನ್ನು ಸ್ಥಾಪಿಸಿ ಉನ್ನತ ಶಿಕ್ಷಣಕ್ಕೆ ಒತ್ತು ನೀಡಲಾಗಿದೆ. ಕುಶಾಲನಗರ ಮಡಿಕೇರಿಗೆ ಸಮಾನವಾಗಿ ಬೆಳೆಯುವ ಲಕ್ಷಣಗಳು ಕಂಡುಬರುತ್ತಿವೆ.

## ೨.೧.೪. ಪ್ರಮುಖ ಬೆಳೆಗಳು

ಕೊಡಗು ಹಸಿರಿನಿಂದ ಕೂಡಿದ್ದು ಸದಾ ನೀರಿನ ಮೂಲ ಸೌಲಭ್ಯವನ್ನು ಹೊಂದಿರುವುದರಿಂದ ಕೃಷಿಗೆ ಯೋಗ್ಯವಾದ ಸ್ಥಳವಾಗಿದೆ. ಕೊಡಗು ಕೃಷಿ ಪ್ರಧಾನವಾದ ಜಿಲ್ಲೆಯಾಗಿದ್ದು ಇಲ್ಲಿನ ಜನಸಮುದಾಯ ಬಹುಪಾಲು ಬೇಸಾಯ ಪದ್ಧತಿಯನ್ನೇ ಅವಲಂಬಿಸಿ ಬದುಕು ನಡೆಸುತ್ತಿದೆ. ಜಿಲ್ಲೆಯ ಒಟ್ಟು ವಿಸ್ತೀರ್ಣದಲ್ಲಿ ಅರಣ್ಯ ಪ್ರದೇಶವೇ ೧೩೪೫೯೭ ಹೆಕ್ಟೇರುಗಳಾಗಿದ್ದು, ೧೪೩೫೪ ಹೆಕ್ಟೇರು ಪ್ರದೇಶ ಮಾತ್ರ ಕೃಷಿ ಬಿತ್ತನೆಗೆ ಯೋಗ್ಯವಾಗಿದೆಯೆಂದು ಹೇಳಲಾಗುತ್ತಿದೆ.[೨೬] ಇಲ್ಲಿ ಕಾಫಿ, ಭತ್ತ, ಕಾಳುಮೆಣಸು, ಏಲಕ್ಕಿ ಮತ್ತು ಕೊಡಗಿನ ಕಿತ್ತಳೆಯನ್ನು ಬೆಳೆಯಲಾಗುತ್ತಿದೆ. ಇವುಗಳಲ್ಲಿ ಭತ್ತವನ್ನು ಹೊರತು ಪಡಿಸಿದರೆ ಉಳಿದವುಗಳು ವಾಣಿಜ್ಯ ಬೆಳೆಗಳು. ಇಂಥ ಲಾಭದಾಯಕ ಬೆಳೆಗಳನ್ನು ಬೆಳೆಯುತ್ತಿರುವುದರಿಂದ ಕೊಡಗಿನ ಆರ್ಥಿಕ ಸ್ಥಿತಿಗತಿ ಉತ್ತಮವಾಗಿದೆಯೆಂದು ಹೇಳಬಹುದು. ಕೊಡಗಿನ ದಕ್ಷಿಣ ಭಾಗ ದಟ್ಟವಾದ ಅರಣ್ಯ ಪ್ರದೇಶವಾಗಿರುವುದರಿಂದ ಇಲ್ಲಿ ಮಾತ್ರ ಕಾಫಿ, ಏಲಕ್ಕಿ, ಮೆಣಸುಗಳನ್ನು ಬೆಳೆಯಲಾಗುತ್ತದೆ.

ಉಳಿದಂತೆ ಕೊಡಗಿನಾದ್ಯಂತ ಬತ್ತದ ಕೃಷಿಯೇ ಪ್ರಮುಖವಾಗಿದೆ. ಜಿಲ್ಲೆಯ ಮಡಿಕೇರಿ ಮತ್ತು ವಿರಾಜಪೇಟೆ ತಾಲೂಕುಗಳು ಮುಖ್ಯವಾಗಿ ಕಾಫಿ ಬೆಳೆಗಳನ್ನು ಅವಲಂಬಿಸಿವೆ. ಈ ಎರಡು ತಾಲೂಕುಗಳಲ್ಲಿ ಕಾಫಿಯ ತಳಿಗಳಾದ ರೋಬಾಸ್ಟಾ ಮತ್ತು ಅರೇಬಿಕಗಳನ್ನು ಬೆಳೆಯಲಾಗುತ್ತದೆ. ಕೊಡಗಿನ ಕೃಷಿಕರ ಆರ್ಥಿಕ ಮತ್ತು ಸಾಮಾಜಿಕ ಭದ್ರತೆ ಒದಗಿಸುವಲ್ಲಿ ಕಾಫಿ ಬೆಳೆ ಪ್ರಮುಖ ಪಾತ್ರವಹಿಸಿದೆ. ಕೊಡಗು ವ್ಯವಸಾಯಕ್ಕೆ ಯೋಗ್ಯವಾದ ಫಲವತ್ತಾದ ಕೆಂಪು, ಕಪ್ಪು, ಕಲ್ಲುಮಿಶ್ರಿತ ಜೇಡಿ ಹಾಗೂ ಎರೆಮಣ್ಣುಗಳನ್ನು ಹೊಂದಿದ್ದು, ಇಲ್ಲಿನ ಕೃಷಿಕರಿಗೆ ವರದಾನವಾಗಿದೆಯೆಂದು ಹೇಳಬಹುದು.

ಬೆಟ್ಟಗಳ ಮೇಲ್ಭಾಗದಿಂದ ಹಳ್ಳದತ್ತ ಹರಿದು ಬರುವ ನೀರನ್ನು ಸಂಗ್ರಹಿಸಿ ಭತ್ತ ಬೆಳೆಯುವುದು ಇಲ್ಲಿನ ವಿಧಾನ. ಜತೆಗೆ ಹಳ್ಳದ ಗದ್ದೆಗಳು ವರ್ಷದ ಎಲ್ಲಾ ಕಾಲದಲ್ಲಿಯೂ ತೇವಾಂಶದಿಂದ ಕೂಡಿರುತ್ತವೆ. ಇದರಿಂದ ಭತ್ತದ ಕೃಷಿಗೆ ಅನುಕೂಲವಾಗುತ್ತಿದೆ. ಇಲ್ಲಿನ ಕೃಷಿಗೆ ಮಳೆಯೇ ಆಸರೆ. ಮಳೆಗಾಲದಲ್ಲಿ ಮೂರು ತಿಂಗಳು ಅಂದರೆ ಜೂನ್‌ನಿಂದ ಆಗಸ್ಟ್‌ವರೆಗೆ ಸತತವಾಗಿ ಬೀಳುವ ಮಳೆಗೆ ಎಲ್ಲೆಡೆ ಜಲ ಆವರಿಸಿಕೊಂಡಿರುತ್ತದೆ. ಸೆಪ್ಟಂಬರ್‌ನಿಂದ ಮಳೆ ತುಸು ಕಡಿಮೆಯಾದರೂ ಡಿಸೆಂಬರ್‌ವರೆಗೂ ಗದ್ದೆಗಳಲ್ಲಿ ನೀರು ತುಂಬಿರುತ್ತದೆ. ಇದರಿಂದ ಭತ್ತದ ಬೆಳೆಯನ್ನೇ ಇಲ್ಲಿನ ಜನ ಪ್ರಮುಖವಾಗಿ ಕಂಡುಕೊಂಡಿದ್ದಾರೆ. ಹಳ್ಳದ ಗದ್ದೆಗಳಲ್ಲಿ ಭತ್ತವನ್ನು ಹೊರತು ಪಡಿಸಿ ಬೇರೆ ಬೆಳೆಯನ್ನು ಬೆಳೆಯಲು ಸಾಧ್ಯವಾಗುವುದಿಲ್ಲ.

ಇತ್ತೀಚೆಗೆ ಕೇರಳ ಮತ್ತಿತರ ಹೊರರಾಜ್ಯಗಳ ಪ್ರಭಾವದಿಂದಾಗಿ ಶುಂಠಿ ಹಾಗೂ ಅರಿಷಿಣ ಬೆಳೆಗಳು ಕೊಡಗು ಸೇರಿದಂತೆ ಜಿಲ್ಲೆಯ ಆಸುಪಾಸಿನ ಪ್ರದೇಶಗಳಿಗೆ ಕಾಲಿಟ್ಟಿವೆ. ಹಣದ ಆಸೆಗೆ ಒಳಗಾದ ರೈತರು ಇಂಥ ಬೆಳೆಗಳಿಂದ ನೆಲದ ಫಲವತ್ತತೆ ಕ್ಷೀಣಿಸುತ್ತದೆಯೆಂದು ಗೊತ್ತಿದ್ದರೂ ತಮ್ಮ ಜಮೀನಿನಲ್ಲಿ ಶುಂಠಿಯಂತ ಭೂಮಿಯ ಫಲವತ್ತತೆಯನ್ನು ಹಾಳುಮಾಡುವಂತಹ ಬೆಳೆಗಳನ್ನು ಬೆಳೆಯುತ್ತಿದ್ದಾರೆ. ಉತ್ತಮ ತಳಿಗಳ ಅಭಾವ ಹಾಗೂ ಕೃಷಿಗೆ ತಗಲುತ್ತಿರುವ ವಿವಿಧ ರೀತಿಯ ರೋಗಗಳಿಂದಾಗಿ ಜಿಲ್ಲೆಯ ರೈತರು ಕೃಷಿಯ ಕಡೆಗೆ ಬೆನ್ನು ತಿರುಗಿಸುತ್ತಿರುವುದು ಕಂಡುಬರುತ್ತಿದೆ.

### ೨.೧.೫. ಹವಾಮಾನ

ಕೊಡಗು ಚಿಕ್ಕ ಜಿಲ್ಲೆಯಾಗಿದ್ದರೂ ಬೆಟ್ಟಗುಡ್ಡಗಳಿಂದ ಕೂಡಿರುವುದರಿಂದ ನೈಸರ್ಗಿಕವಾಗಿ ಆಕರ್ಷಣೀಯವಾಗಿದೆ. ಎತ್ತರವಾದ ಬೆಟ್ಟಗುಡ್ಡಗಳಿರುವುದರಿಂದ ಇಲ್ಲಿ ಕೆಲವು ತಿಂಗಳುಗಳ ಕಾಲ ತಂಪಾಗಿರುತ್ತದೆ. ಕರಾವಳಿಯ ಸೆರಗಿನಲ್ಲಿರುವುದರಿಂದ ಕೊಡಗಿನಲ್ಲಿಯೂ ಜೂನ್‌ನಿಂದ ಅಕ್ಟೋಬರ್‌ವರೆಗೆ ಮಳೆಗಾಲವಿದ್ದು, ನವೆಂಬರ್‌ನಿಂದ ಫೆಬ್ರವರಿಯವರೆಗೆ ಚಳಿಗಾಲವಿರುತ್ತದೆ. ಈ

ಎರಡೂ ಅವಧಿಯಲ್ಲಿ ಕೊಡಗು ಚಳಿಯಿಂದ ತತ್ತರಿಸಿ ಹೋಗುತ್ತದೆ. ಇಲ್ಲಿಯ ವಾತಾವರಣ ಕಾಶ್ಮೀರವನ್ನು ನೆನಪಿಸುತ್ತದೆ. ಅನೇಕರು ಕೊಡಗನ್ನು ಸ್ಕಾಟ್‌ಲ್ಯಾಂಡ್ ದೇಶಕ್ಕೂ ಹೋಲಿಸುತ್ತಾರೆ.

ಹೀಗೆ ಹೋಲಿಸುವುದನ್ನು ಕುರಿತು ನಾ ಡಿಸೋಜ ಅವರು "ಕೊಡಗನ್ನು ಅನೇಕರು ಸ್ವಿಟ್ಜರ್‌ಲ್ಯಾಂಡ್‌ಗೆ ಹೋಲಿಸುತ್ತಾರೆ. ಆದರೆ ನಾನು ನನ್ನ ನಾಡನ್ನು ಹೊಗಳಲು ಬೇರೊಂದು ದೇಶವನ್ನು ಎರವಲು ಪಡೆಯಲು ಹೋಗುವುದಿಲ್ಲ. ಸಮುದ್ರಕ್ಕೆ ಸಮುದ್ರವೇ ಹೇಗೆ ಸಾಟಿಯೋ, ಹಾಗೆ ಕೊಡಗಿಗೆ ಕೊಡಗೇ ಹೋಲಿಕೆ"[೨೬] ಎಂದು ಹೇಳುವುದನ್ನು ಇಲ್ಲಿ ನೆನೆಯಬಹುದು.

ಜಿ. ಪಿ. ರಾಜರತ್ನಂ ಅವರು ತಮ್ಮ 'ಮಡಿಕೇರಿ ಮೇಲ್ ಮಂಜು' ಎಂಬ ಪದ್ಯದಲ್ಲಿ ಮಡಿಕೇರಿಯೂ ಸೇರಿದಂತೆ ಕೊಡಗಿನ ಬೆಟ್ಟಗಳ ಮೇಲೆ ಹಾಸಿಕೊಳ್ಳುವ ದಟ್ಟವಾದ ಮಂಜಿನ ವಿವರಗಳನ್ನು ನೀಡುತ್ತಾರೆ. ಇಲ್ಲಿ ಸೂರ್ಯೋದಯವಾಗಿ ಎರಡು ಗಂಟೆ ಕಳೆದರೂ ದಟ್ಟವಾಗಿರುವ ಹಿಮ ಬೆಟ್ಟ ಹಾಗೂ ಕಣಿವೆಗಳನ್ನು ಮುಚ್ಚಿರುತ್ತದೆ. ಕೆಲವು ವರ್ಷಗಳ ಹಿಂದೆ (ಅಲ್ಲಲ್ಲಿ ಈಗಲೂ) ದಕ್ಷಿಣ ಕೊಡಗಿನ ಅನೇಕ ಕಛೇರಿಗಳಲ್ಲಿ ಮಳೆಗಾಲದ ಸಮಯದಲ್ಲಿ ಚಳಿಗೆ ಕೈಕಾಲುಗಳನ್ನು ಅಲುಗಾಡಿಸಲೂ ಸಾಧ್ಯವಾಗದಂತ ಪರಿಸ್ಥಿತಿ ನಿರ್ಮಾಣವಾದ ನಿದರ್ಶನಗಳಿವೆ. ಇಂಥ ಸಂದರ್ಭಗಳಲ್ಲಿ ಇದ್ದಿಲು ಬಳಸಿ ಬೆಂಕಿ ಹಾಕಿಕೊಂಡು ಅದರ ಸುತ್ತ ಕುಳಿತು ಕಾರ್ಯ ನಿರ್ವಹಿಸುತ್ತಿದ್ದರೆಂದು ನಾನು ಕೇಳಿದ್ದೇನೆ. "ಇಲ್ಲಿನ ಚಳಿಯಿಂದಾಗಿ ಲೇಖನಿಯಿಂದ ಬರೆಯುವುದಕ್ಕೆ ಮೊದಲೇ ನೀರುಗಡ್ಡೆಗಟ್ಟಿದ ಸಮುದ್ರದಲ್ಲಿ ಮುಳುಗಿಸಿದ್ದ ಹಾಗೆ ನಮ್ಮ ಸ್ಥಿತಿಯಾಗುತ್ತದೆ"[೨೭] ಎಂದು ಟಿಪ್ಪುವಿನ ಸೈನಿಕರು ಹೇಳುವ ಮಾತುಗಳು ಉತ್ಪ್ರೇಕ್ಷೆಯಾಗಲಾರವು.

### ೨.೧.೬. ಪ್ರಮುಖ ದೇವತೆಗಳು ಮತ್ತು ದೇವಸ್ಥಾನಗಳು

ಕೊಡಗು ಧಾರ್ಮಿಕ ಕ್ಷೇತ್ರವಾಗಿಯೂ ಪ್ರವಾಸಿಗರನ್ನು ಆಕರ್ಷಿಸಿದೆ. ಇಲ್ಲಿ ವಾಸಿಸುತ್ತಿರುವ ಜನರು ತಮ್ಮದೇ ಆದ ಧಾರ್ಮಿಕ ನಂಬಿಕೆಗಳನ್ನು ಅಳವಡಿಸಿಕೊಂಡಿದ್ದಾರೆ. ಕೊಡವರು ತಮ್ಮ ಆರಾಧ್ಯ ದೇವತೆಗಳಾಗಿ ಪೂಜಿಸುತ್ತಿರುವ ಪ್ರಮುಖ ದೇವತೆಗಳಾದ ಮಡಿಕೇರಿಯ ಓಂಕಾರೇಶ್ವರ ದೇವಾಲಯ, ತಲಕಾವೇರಿಯ ಕಾವೇರಿಮಾತೆ, ಭಾಗಮಂಡಲದ ಭಗಂಢೇಶ್ವರ ಮತ್ತು ಇಗ್ಗುತಪ್ಪ ದೇವಾಲಯಗಳು ಪ್ರಮುಖವಾದವುಗಳು. ಇವಲ್ಲದೆ ಪನ್ನಂಗಾಲ ತಮ್ಮೆ, ಪಾಲೂರಪ್ಪ, ಅಯ್ಯಪ್ಪ, ಭದ್ರಕಾಳಿ, ಭಗವತಿ, ಸುಬ್ರಮಣ್ಯ ಮೊದಲಾದ ದೇವರುಗಳನ್ನು ಆರಾಧಿಸುವವರಾಗಿದ್ದಾರೆ. ಕೊಡವರು ರೂಢಿಸಿಕೊಂಡು ಬರುತ್ತಿರುವ 'ಗುರುಕಾರೋಣ' ಎಂಬ ಕುಟುಂಬದ ಮೂಲ ಪುರುಷನಿಗೆ ಮನೆಯಲ್ಲಿಯೇ ಒಂದು ಕೋಣೆಯನ್ನು ನಿರ್ಮಿಸಿರುತ್ತಾರೆ. ಇವರಂತೆಯೇ ಇಲ್ಲಿನ ಗೌಡ ಜನಾಂಗ ಮತ್ತು ಕೆಂಬಟ್ಟಿಯರು ಇದನ್ನು ಅನುಸರಿಸಿಕೊಂಡು ಬರುತ್ತಿದ್ದಾರೆ. ಹಬ್ಬ ಜಾತ್ರೆಗಳಲ್ಲಿ ಕಟ್ಟುನಿಟ್ಟಿನಿಂದ ಭಾಗವಹಿಸುವ ಕೊಡಗರು ಧಾರ್ಮಿಕವಾಗಿ ಶ್ರದ್ಧೆ ಭಕ್ತಿಗಳನ್ನು ಮೆರೆಯುತ್ತಾರೆ.

**ಓಂಕಾರೇಶ್ವರ ದೇವಸ್ಥಾನ:** ಮಡಿಕೇರಿಯಲ್ಲಿರುವ ಪ್ರಸಿದ್ಧ ದೇವಾಲಯವಿದು. ಎರಡನೇ ಲಿಂಗರಾಜನಿಂದ ನಿರ್ಮಿಸಲ್ಪಟ್ಟ ದೇವಾಲಯ. ರಾಜರ ಆಳ್ವಿಕೆಯಲ್ಲಿ ಯಾವುದೋ ಘಟನೆಯ ಅಥವಾ ವ್ಯಕ್ತಿಯ ಕುರುಹುಗಳಾಗಿ ದೇವಾಲಯಗಳು, ಪಟ್ಟಣಗಳು ನಿರ್ಮಾಣವಾಗುತ್ತಿದ್ದವು. ಅಂಥಹ ಹಿನ್ನೆಲೆಯೊಂದಿಗೆ ಓಂಕಾರೇಶ್ವರ ದೇವಾಲಯವೂ ನಿರ್ಮಿಸಲ್ಪಟ್ಟಿದೆ. ಸುಳ್ಯದ ಕಡೆಯ ಬಡಬ್ರಾಹ್ಮಣನೊಬ್ಬ ತನ್ನೊಬ್ಬ ಮಗಳನ್ನು ರಾಜನಿಗೊಪ್ಪಿಸಿ ಅವರು ನೀಡಿದ ಹಣವನ್ನು ಪಡೆದುಕೊಂಡು ತನ್ನ ಬಡತನದ ತೀವ್ರತೆಯನ್ನು ಕಡಿಮೆ ಮಾಡಿಕೊಳ್ಳಲು ಮಡಿಕೇರಿಯ ಕಡೆಗೆ ಬರುತ್ತಾನೆ. ಇದನ್ನರಿತ ಸುಬ್ಬರಸಯ್ಯನೆಂಬ ಅರಮನೆಯ ಕರಣಿಕನು ತುಂಬಾ ಮರುಗುತ್ತಾನೆ. ಹೇಗಾದರು ಮಾಡಿ ಇವರನ್ನು ಇಂಥ ಸ್ಥಿತಿಯಿಂದ ಪಾರು ಮಾಡಬೇಕೆಂದು ಆಲೋಚಿಸಿ ರಾಜನಿಗೆ ವಿಷಯ ತಿಳಿಸದೆ ತನ್ನಲ್ಲಿದ್ದ ಒಡವೆಗಳನ್ನು ನೀಡಿ ಅವರನ್ನು ಹಿಂದಕ್ಕೆ ಕಳುಹಿಸುತ್ತಾನೆ. ಬೇಹುಗಾರರಿಂದ ವಿಷಯವರಿತುಕೊಂಡ ರಾಜ ಕೆಂಡಾಮಂಡಲವಾಗುತ್ತಾನೆ. ಸುಬ್ಬರಸಯ್ಯ ಮತ್ತು ಅವನ ಇಬ್ಬರು ಮಕ್ಕಳನ್ನು ಅರಮನೆಗೆ ಕರೆಸಿ ವಾಪಸ್ಸು ಕಳುಹಿಸಿದ ಬ್ರಾಹ್ಮಣನ ಮಗಳನ್ನು ಕರೆತಂದು ನನಗೊಪ್ಪಿಸಬೇಕೆಂದು ಪೀಡಿಸುತ್ತಾನೆ. ಇದ್ಯಾವುದಕ್ಕೂ ಜಗ್ಗದ ಸಾತ್ವಿಕ ಗುಣದ ಸುಬ್ಬರಸಯ್ಯನ ಮೇಲೆ ಕುಪಿತಗೊಂಡ ಲಿಂಗರಾಜ ಅರಸ ಸುಬ್ಬರಸಯ್ಯ ಹಾಗೂ ಇಬ್ಬರು ಮಕ್ಕಳನ್ನು ಕೊಲ್ಲುತ್ತಾನೆ. ಕೆಲವು ದಿನಗಳ ಬಳಿಕ ರಾಜ ಮನೋವ್ಯಾಕುಲಕ್ಕೆ ಒಳಗಾಗುತ್ತಾನೆ. ಬ್ರಾಹ್ಮಣ ಹತ್ಯೆಯೇ ಇವನ ಈ ಸ್ಥಿತಿಗೆ ಕಾರಣವೆಂದು ಅರಮನೆಯ ಜ್ಯೋತಿಷಿಗಳಿಂದ ತಿಳಿಯುತ್ತದೆ. ಇದರ ಪರಿಹಾರಾರ್ಥವಾಗಿ ಶಿವ ದೇವಾಲಯ ನಿರ್ಮಾಣದ ಮಾತು ಕೇಳಿ ಬರುತ್ತದೆ. ಅದರಂತೆ ದೇವಸ್ಥಾನ ನಿರ್ಮಿಸಿ, ಕಾಶಿಯಿಂದ ಶಿವಲಿಂಗವನ್ನು ತರಿಸಿ ಸುಬ್ಬರಸಯ್ಯ ವಾಸಿಸುತ್ತಿದ್ದ ನೆಲದಲ್ಲಿಯೇ ಪ್ರತಿಷ್ಠಾಪಿಸಿ ಪಾಪ ಪರಿಹರಿಸಿಕೊಳ್ಳುತ್ತಾನೆ. ಈ ದೇವಾಲಯ ಮೊಗಲ್ ಶೈಲಿಯಲ್ಲಿ ಸ್ಥಾಪಿಸಲ್ಪಟ್ಟಿರುವುದರಿಂದ ರಚನಾ ಕ್ರಮದಲ್ಲಿ ಇಸ್ಲಾಮಿಕ್ ಮತ್ತು ಗೋತಿಕ್ ಶೈಲಿಯನ್ನು ಹೊಂದಿದೆ.[೨೦೮] ಹಿಂದೂ-ಮುಸಲ್ಮಾನರ ವಾಸ್ತುಶೈಲಿಯಂತಿದ್ದು ನೋಡಲು ತಾಜ್‌ಮಹಲ್‌ನಂತೆ ಕಾಣುತ್ತದೆ. ದೇವಸ್ಥಾನದ ಮುಂಭಾಗದಲ್ಲಿ ವಿಶಾಲವಾದ ಆಕರ್ಷಕ ಕಲ್ಯಾಣಿಯೊಂದಿದೆ. ಕೊಡವರು ಹೆಚ್ಚಾಗಿ ಓಂಕಾರೇಶ್ವರ ದೇವಸ್ಥಾನಕ್ಕೆ ಬಂದು ಹೋಗುತ್ತಾರೆ. ಇಲ್ಲಿ ಯಾವುದೇ ಜಾತಿ, ಧರ್ಮ, ಭಾಷೆಗಳ ನಿರ್ಬಂಧಗಳಿಲ್ಲ. ಭಕ್ತಿ, ಭಾವುಕತೆಗಳು ಇಂದಿಗೂ ಕೊಡಗಿನ ಜನಸಮುದಾಯದಲ್ಲಿ ನೆಲೆಯೂರಿರುವುದು ಕಂಡುಬರುತ್ತದೆ.

**ಕಾವೇರಮ್ಮ:** ಕೊಡಗಿನ ಜನರ ಪಾಲಿಗೆ ಕಾವೇರಮ್ಮ ಕುಲದೇವತೆ. ಕಾವೇರಿ ಮಹಾತ್ಮೆಯಲ್ಲಿ ಕಾವೇರಿ ನದಿಯು ಉಗಮಿಸಿ ಕೊಡಗಿನ ಜನರ ಪಾಲಿಗೆ ದೇವತೆಯಾದ ರೀತಿಯನ್ನು ಹೀಗೆ ವಿವರಿಸುತ್ತಾರೆ. ಬ್ರಹ್ಮಗಿರಿ ವಾಸಿಯಾದ ಕವೇರ ಮುನಿಯು ಬ್ರಹ್ಮನ ಮಗಳಾದ ಲೋಪಾ ಮುದ್ರೆಯನ್ನು ತನ್ನ ಮಗಳಾಗಿ ಸ್ವೀಕರಿಸುತ್ತಾನೆ. ಜನೋಪಕಾರಿಯಾಗಿ ನದಿಯಾಗಿ ಹರಿಯುವೆನೆಂಬ ಈಕೆಯ ಇಚ್ಛೆಯಂತೆ ಕವೇರ ಮುನಿಯು ನಡೆದುಕೊಳ್ಳದೆ ಅಗಸ್ತ್ಯಮುನಿಗೆ ಮದುವೆ ಮಾಡಿಕೊಡುತ್ತಾನೆ. ಒಲ್ಲದ ಮದುವೆಯಿಂದ ಬೇಸರಿಸಿದ ಲೋಪಾಮುದ್ರೆ ಅಗಸ್ತ್ಯನಿಗೆ ಎಂದಿಗೂ ನನ್ನನ್ನು ಬಿಟ್ಟಿರಬಾರದೆಂದು ಷರತ್ತು ವಿಧಿಸುತ್ತಾಳೆ. ಆದರೆ ತನ್ನ ಪತ್ನಿಯನ್ನು ತನ್ನ

ಕಮಂಡಲದಲ್ಲಿ ಆವಾಹಿಸಿ ಅಗಸ್ತ್ಯನು ಸ್ನಾನಕ್ಕೆ ಹೋಗಿರಲು ಕಾವೇರಿಯು ಕಮಂಡಲದಿಂದ ಹೊರಬಂದು ತಲಕಾವೇರಿಯಲ್ಲಿ ಚಿಕ್ಕ ಕುಂಡಿಕೆಯಿಂದ ನದೀರೂಪದಲ್ಲಿ ಪ್ರವಹಿಸಲು ಆರಂಭಿಸಿದಳು. ಇಲ್ಲಿಂದ ಅಂತರ್ವಾಹಿನಿಯಾಗಿ ಮುಂದೆ ಭಾಗಮಂಡಲದಲ್ಲಿ ಕನ್ನಿಕೆ ಮತ್ತು ಸುಜ್ಯೋತಿ ನದಿಗಳೊಡನೆ ಸೇರಿಕೊಂಡು ಕಾವೇರಿಯಾಗಿ ಹರಿಯುತ್ತಾಳೆ. ಯಾರು ಕೇಳಿಕೊಂಡರು ತನ್ನ ನಿಲುವು ಬದಲಿಸದ ಲೋಪಾಮುದ್ರೆ ಜನೋಪಕಾರಿಯಾಗಿ ಹರಿಯುತ್ತಾಳೆ. "ಸಕಲ ಜೀವರಾಶಿಗಳಿಗೆ ನಾನು ಕೊಡುತಿರುವೆ ನೀರನ್ನು, ಉತ್ತಮರು ಅಧಮರೆಂಬ ಭಾವವದು, ಎನಗಿಲ್ಲ ಶತ್ರು ಮಿತ್ರರಿರಲಿ ಏಕರೀತಿಯಲಿ ವರ್ತಿಪೆನು ನಾನು, ಫಲಾಕಾಂಕ್ಷೆಯದು ಎನಗಿಲ್ಲವಿಂದು, ಕಾವೇರಿಯೆಂದೆಂಬ ಎನ್ನಯಾ ನಾಮವನು, ನಾಡೊಳಗೆ ಬೆಳಗುತಿಹುದು ಭಾರತದ ನದಿಗಳಲಿ ಮುತ್ತು ನಾನಿಹೆನು, ಓ ಪಥಿಕ ಸಾಕಿನ್ನು ತೆರಳುವೆನು, ಕಾಂತನೆನ್ನನು ಕರೆಯುತಿಹನು ಸೇರುವೆನು ಆತನೊಳು"[೨೭] ಎಂಬ ಪದ್ಯದಲ್ಲಿ ಲೋಪಾಮುದ್ರೆಯ ಉದ್ದೇಶ, ಸಹಕಾರ ಮನೋಭಾವವಿರುವುದರ ಜತೆಗೆ ಸಾಗರವನ್ನು ಸೇರುವ ಬಯಕೆಯೂ ವ್ಯಕ್ತವಾಗಿರುವುದನ್ನು ಕಾಣಬಹುದಾಗಿದೆ.

ಕೊಡಗಿನ ಜೀವನದಿಯೆಂದು ಕರೆಸಿಕೊಂಡಿರುವ ಈ ನದಿ ಕೊಡಗಿಗಿಂತ ಮೈಸೂರು ಮಂಡ್ಯ, ಬೆಂಗಳೂರು ಹಾಗೂ ತಮಿಳುನಾಡಿಗೆ ಹೆಚ್ಚು ಅನುಕೂಲವಾಗಿದೆ. ಕೊಡಗರಿಗೆ ಕಾವೇರಿ ಕೇವಲ ನದಿಯಾಗದೆ ದೇವತೆಯಾಗಿರುವುದು ಅಲ್ಲಿನ ಜನರ ನಂಬಿಕೆಗೆ ಸಾಕ್ಷಿಯಾಗಿದೆ. ಈಕೆಯ ಅನುಗ್ರಹದಿಂದಲೇ ನಮ್ಮ ಜೀವನ ಎಂಬುದು ಅಲ್ಲಿಯವರ ಬಲವಾದ ನಂಬಿಕೆ. ಪ್ರತಿ ವರ್ಷ ಅಕ್ಟೋಬರ್ ತಿಂಗಳ ಒಂದು ನಿರ್ಧಿಷ್ಟ ಸಮಯದಲ್ಲಿ ಕಾವೇರಿ ತೀರ್ಥವಾಗಿ ಉದ್ಭವಿಸುತ್ತಾಳೆ. ಈ ಸಮಯದಲ್ಲಿ ಕೊಡಗರಲ್ಲದೆ ಬೇರೆ ಬೇರೆ ಸ್ಥಳಗಳಿಂದ ಬಂದ ಭಕ್ತರು ಪವಿತ್ರ ಕಾವೇರಿಯಲ್ಲಿ ಮಿಂದು ಪುನೀತರಾಗುತ್ತಾರೆಂದು ಪ್ರತೀತಿ.

**ಭಗಂಡೇಶ್ವರ:** ಭಾಗಮಂಡಲದಲ್ಲಿರುವ ಭಗಂಡೇಶ್ವರ ಕೂಡ ಕೊಡವರ ಆರಾಧ್ಯ ದೈವವಾಗಿದೆ. ಈ ದೇವಾಲಯದಲ್ಲಿ ಭಗಂಡೇಶ್ವರ, ಸುಬ್ರಹ್ಮಣ್ಯ, ಮಹಾವಿಷ್ಣು ಮತ್ತು ಗಣಪತಿಯ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ದೇವಸ್ಥಾನವು ಕೇರಳದ ವಾಸ್ತುಶಿಲ್ಪವನ್ನು ಒಳಗೊಂಡಿದೆ. ಭಗಂಡ ಮುನಿ ಇಲ್ಲಿ ವಾಸವಿದ್ದು, ಸುಬ್ರಹ್ಮಣ್ಯನ ಕುರಿತು ತಪಸ್ಸು ಮಾಡಿ ಅನುಗ್ರಹ ಪಡೆದರೆಂದು ಪ್ರತೀತಿಯಿದೆ. ಭಗಂಡ ಮಹರ್ಷಿಗಳು ಇಲ್ಲಿ ಶಿವನ ಲಿಂಗವನ್ನು ಪ್ರತಿಷ್ಠಾಪಿಸಿದ್ದರಿಂದ ಈ ದೇವಾಲಯ ಭಗಂಡೇಶ್ವರವೆಂದು ಕರೆಸಿಕೊಳ್ಳುತ್ತದೆ. ದೇವಾಲಯದ ಸಮೀಪದಲ್ಲೇ ಕಾವೇರಿ ನದಿಯು ಹರಿದು ಬಂದು ಕನ್ನಿಕೆ, ಸುಜ್ಯೋತಿ ಎಂಬ ನದಿಗಳನ್ನು ಸೇರಿ ಸಂಗಮವನ್ನು ಸೃಷ್ಟಿಸಿದೆ. ಕೊಡವರು ತಲಕಾವೇರಿಗೆ ಬರುವ ಮುನ್ನ ಈ ತ್ರಿವೇಣಿ ಸಂಗಮದಲ್ಲಿ ಮಿಂದು, ಭಗಂಡೇಶ್ವರ ದೇಗುಲದಲ್ಲಿ ಪೂಜೆ ಸಲ್ಲಿಸುತ್ತಾರೆ. ಭಗಂಡೇಶ್ವರ ದೇವಾಲಯದಲ್ಲಿ ಫೆಬ್ರವರಿ ತಿಂಗಳಲ್ಲಿ ಮಹಾಶಿವರಾತ್ರಿಯ ಉತ್ಸವ ಹಾಗೂ ಏಪ್ರಿಲ್ ತಿಂಗಳಿನಲ್ಲಿ ಮೂರು ದಿನಗಳ ವಾರ್ಷಿಕ

ಉತ್ಸವ ನಡೆಯುತ್ತದೆ. ಅಲ್ಲದೆ ಸುಬ್ರಹ್ಮಣ್ಯ ಷಷ್ಠಿ ಮತ್ತು ಹುತ್ತರಿಯ ಸಂದರ್ಭದಲ್ಲಿ ಈ ದೇವಾಲಯದಲ್ಲಿ ವಿಶೇಷ ಪೂಜೆಗಳು ನಡೆಯುತ್ತವೆ.

**ಇಗ್ಗುತಪ್ಪ:** ವೀರರಾಜಪೇಟೆಯ ಅಮ್ಮಂಗೇರಿ ಎಂಬ ಗ್ರಾಮದಲ್ಲಿ ಇಗ್ಗುತಪ್ಪ ದೇವಾಲಯವಿದೆ. ಕೊಡಗಿನ ಜನರಿಗೆ ಮುಖ್ಯವಾಗಿ, ಕೊಡವರಿಗೆ ಇಗ್ಗುತಪ್ಪ ದೇವರು ಕಾವೇರಮ್ಮನಂತೆ ಪ್ರಮುಖ ದೇವರು. ತಮ್ಮ ಇಷ್ಟಾರ್ಥಗಳನ್ನು ನೆರವೇರಿಸಿಕೊಳ್ಳಲು ಇಗ್ಗುತಪ್ಪನಿಗೆ ಹರಕೆ ಹೊತ್ತುಕೊಳ್ಳುವುದನ್ನು ಈಗಲೂ ಕಾಣಬಹುದು. ಬೇಡಿದ ವರವನ್ನು ಈಡೇರಿಸಿಕೊಡುತ್ತಾನೆಂಬ ನಂಬಿಕೆ ಇಂದಿಗೂ ಇದೆ. ದೊಡ್ಡವೀರಪ್ಪ ಪ್ರಭುಗಳ ಅಂಗರಕ್ಷಕನಾಗಿದ್ದ ಚೆಂಗುಮಣಿ 'ಹುಲಿಯನ್ನು ಕೊಂದು ಪ್ರಭುಗಳ ಪ್ರಾಣ ರಕ್ಷಣೆ ಮಾಡಿದ್ದು ನನ್ನ ಕುಲದೇವತೆಯಾಗಿದ್ದ ಇಗ್ಗುತಪ್ಪ ದೇವರ ಅನುಗ್ರಹದಿಂದ'[೨೮] ಎಂದು ಹೆಮ್ಮೆ ಹಾಗೂ ಭಕ್ತಿಯಿಂದ ಹೇಳುವುದರಲ್ಲಿ ಕೊಡಗರು ಅಲ್ಲಿನ ದೇವತೆಗಳ ಬಗ್ಗೆ ಹೊಂದಿರುವ ಅಪಾರ ಭಕ್ತಿ, ನಂಬಿಕೆಯನ್ನು ಸೂಚಿಸುತ್ತದೆ.

ಇಗ್ಗುತಪ್ಪ ದೇವರ ಕುರಿತಾದ ಐತಿಹ್ಯವೊಂದು ಹೀಗಿದೆ. ಸಪ್ತ ಋಷಿಗಳು ಇಗ್ಗುತ್ತಪ್ಪ ಬೆಟ್ಟದಲ್ಲಿ ತಪಸ್ಸಿಗೆ ಕುಳಿತಿರುತ್ತಾರೆ, ಆಗ ಶಿವ ಪ್ರತ್ಯಕ್ಷನಾಗಿ ಋಷಿಗಳ ಸಮಸ್ಯೆಗಳನ್ನು ಪರಿಹರಿಸುವ ಮಾರ್ಗವನ್ನು ತಿಳಿಸಿಕೊಡುತ್ತಾನೆ. ಋಷಿಗಳಿಗೆ ಶಿವನ ದರ್ಶನ ಹೊಸತನವನ್ನು ನೀಡುವುದರ ಜೊತೆಗೆ ರೋಮಾಂಚನ ಉಂಟುಮಾಡುತ್ತದೆ. ಇದೇ ಅನುಭವ ಇಲ್ಲಿಗೆ ಬರುವ ಭಕ್ತಾಧಿಗಳಿಗೂ ಆಗಬೇಕೆಂದು ಇಲ್ಲಿ ಸದಾಕಲ ತೀರ್ಥ ದೊರೆಯುವ ಹಾಗೆ ಕರುಣಿಸುವಂತೆ ಶಿವನನ್ನು ಬೇಡಿ ಕೊಳ್ಳುತ್ತಾರೆ.[೨೯] ಇದರಂತೆ ಇಂದಿಗೂ ಇಗ್ಗುತಪ್ಪ ದೇವಸ್ಥಾನ ಕೊಡಗಿನ ಪುಣ್ಯಕ್ಷೇತ್ರ ಗಳಲ್ಲೊಂದಾಗಿದೆ. ಕೊಡಗು ಹಾಗೂ ನೆರೆಹೊರೆಯ ಪ್ರದೇಶಗಳಿಂದ ಇಲ್ಲಿಗೆ ಬಂದು ತುಲಾಭಾರ ಮತ್ತಿತರ ಹರಕೆಗಳನ್ನೊಪ್ಪಿಸುವುದು ಇಂದಿಗೂ ರೂಢಿಯಲ್ಲಿರುವುದನ್ನು ಕಾಣಬಹುದಾಗಿದೆ.

**ಪನ್ನಂಗಾಲ ತಮ್ಮೆ:** ಕೊಡಗಿನ ದೈವಶಕ್ತಿಯಾಗಿ ಕಾಣಿಸಿಕೊಳ್ಳುವ ದೇವತೆ. ಕೊಡವರ ಆರಾಧ್ಯ ದೈವ ಇಗ್ಗುತಪ್ಪನ ಸಹೋದರಿಯೇ ಈ ಪನ್ನಂಗಾಲತಮ್ಮೆ ಎನ್ನುತ್ತಾರೆ. ಆದರೆ ಈ ದೇವತೆಯನ್ನು ಹೆಚ್ಚು ಆರಾಧಿಸುವವರು ಇಲ್ಲಿನ ಕೆಂಬಟ್ಟಿ ಜನಾಂಗ. ಈ ದೇವತೆಗೆ ಈ ರೀತಿ ಹೆಸರು ಬರಲು ಕಾರಣವೇನೆಂದು ತಿಳಿಯಲು ಒಂದು ಕತೆ ಸಹಕಾರಿಯಾಗುತ್ತದೆ. ಮಳಯಾಳಂ ದೇಶದಿಂದ ಇಗ್ಗುತಪ್ಪ ತನ್ನ ತಂಗಿ ಮತ್ತು ಸಹೋದರರೊಡನೆ ಕೊಡಗಿನ ಕಡೆಗೆ ಪ್ರಯಾಣ ಬೆಳೆಸಿದರು. ದೂರ ಪ್ರಯಾಣದಿಂದ ಆಯಾಸಗೊಂಡು ಪರಿಹರಿಸಿಕೊಳ್ಳಲು ಒಂದು ಕಡೆ ನಿಲ್ಲುತ್ತಾರೆ. ಹಸಿವನ್ನು ನೀಗಿಸಿಕೊಳ್ಳಲು ಊಟವೂ ಆಗುತ್ತದೆ. ಊಟದ ನಂತರ ಎಲೆ ಅಡಿಕೆಯನ್ನೂ ಹಾಕಿಕೊಳ್ಳುತ್ತಾರೆ. ವಿನೋದಕ್ಕಾಗಿ ತಮ್ಮ ಬಾಯಲ್ಲಿರುವ ತಾಂಬೂಲ ಕೆಂಪಾಗಿದೆಯಾ ಎಂದು ತಿಳಿಯಲು ಕೈಗೆ ಹಾಕಿ ತೋರಿಸಿ ಅಣ್ಣಂದಿರೆಲ್ಲರೂ ಪುನ: ಬಾಯಿಗೆ ಹಾಕಿಕೊಳ್ಳುವರಂತೆ ನಟಿಸಿ ಬೆನ್ನ ಹಿಂದೆ ಹಾಕುತ್ತಾರೆ. ಇದನ್ನು ಸರಿಯಾಗಿ ಗಮನಿಸದ ತಂಗಿ ಬಾಯಿಗೇ ಹಾಕಿಕೊಳ್ಳುತ್ತಾಳೆ. ಈ ಪ್ರಕ್ರಿಯೆಯಿಂದ ಅವಳ ಜಾತಿ ವಿಹೀನಳಾದಳೆಂದು ಆಕೆಯನ್ನು ತಮ್ಮಿಂದ ದೂರ ಮಾಡುವ ಪ್ರಯತ್ನ ಮಾಡುತ್ತಾರೆ. ಭಯಗೊಂಡ ತಂಗಿ ತನಗೆ ಮುಂದೇನು ಗತಿಯೆಂದು ಇಗ್ಗುತಪ್ಪನನ್ನು

ಪ್ರಾರ್ಥಿಸಿದಾಗ ಪರಿಹಾರವೊಂದನ್ನು ಹೇಳುತ್ತಾನೆ. ಈ ಹಿಂದೆ ಪ್ರಯಾಣದಲ್ಲಿರುವಾಗ ತಮ್ಮ ತಮ್ಮ ಸಾಮರ್ಥ್ಯವನ್ನು ತಿಳಿಯಲು ಎಲ್ಲರೂ ಬಾಣ ಬಿಟ್ಟಿರುತ್ತಾರೆ. ತಂಗಿಯ ಬಾಣ ಪನ್ನಂಗಾಲವೆಂಬ ಸ್ಥಳದಲ್ಲಿ ನಾಟಿರುತ್ತದೆ. ಇಲ್ಲಿಗೆ ಹೋಗಿ ನೆಲೆಸು ಅಲ್ಲಿನ ಹೊಲೆಯರಿಂದ ನೀನು ಪೂಜಿಸಲ್ಪಡುತ್ತೀಯ ಎಂದು ಹರಸುತ್ತಾನೆ. ತಂಗಿ ಹಾಗೆಯೇ ಮಾಡುತ್ತಾಳೆ. ಈ ಕಾರಣದಿಂದ ಈಕೆಗೆ ಪನ್ನಂಗಾಲತಮ್ಮೆ ಎಂಬ ಹೆಸರು ನಿಂತಿತು. ಇಗ್ಗುತಪ್ಪನ ಅಣತಿಯಂತೆಯೇ ಕೆಂಬಟ್ಟಿ ಹೊಲೆಯರು ಈಕೆಯನ್ನು ಇಂದಿಗೂ ಪೂಜಿಸಿ ವರ್ಷಕ್ಕೊಂದು ದಿನ ಹಬ್ಬವನ್ನೂ ಮಾಡುತ್ತಾರೆ.

ಇಲ್ಲಿ ಗಮನಿಸಬೇಕಾದುದು ದೇವತೆ ಸ್ತ್ರೀಯಾಗಿರುವುದುರಿಂದ ಆಕೆಗೆ ಗಂಡಿನ ಸಮನಾಗಿ ಬದುಕಲು ಅವಕಾಶವಿಲ್ಲದಿರುವುದು. ದಲಿತರಿಗೊಂದು ದೇವತೆ ಮೀಸಲಾಗಿಟ್ಟು ಅದು ಇಂತಹವರೇ ಪೂಜಿಸಬೇಕೆಂಬ ಫರ್ಮಾನು ಹೊರಡಿಸುವುದು ಬಲಿಷ್ಟ ವರ್ಗದವರು. ಆದರೆ ಅದೆಲ್ಲವನ್ನು ಒಂದು ಸುಂದರ ಕತೆ ಕಟ್ಟುವ ಮೂಲಕ ತಮ್ಮ ಮೇಲೆ ಬರುವ ಆರೋಪಗಳಿಂದ ಮುಕ್ತರಾಗುವ ಪ್ರಯತ್ನ ಮಾಡಿರುವುದು ಗೊತ್ತಾಗುತ್ತದೆ.

### ೨.೧.೭. ಪ್ರಮುಖ ಪ್ರವಾಸಿ ತಾಣಗಳು

ಕೊಡಗು ಕರ್ನಾಟಕದ ದಕ್ಷಿಣ ಭಾಗದಲ್ಲಿದ್ದು ಪ್ರಕೃತಿಸಿರಿಯಿಂದ ಆಕರ್ಷಿತವಾಗಿದೆ. ಈ ಪ್ರದೇಶ ಭಿನ್ನ ಹವಾಮಾನ, ಬೆಟ್ಟಗುಡ್ಡ, ದಟ್ಟಕಾನನ, ಜಲಧಾರೆ, ಭತ್ತದ ಗದ್ದೆಗಳು, ಕಾಫಿ, ಕಿತ್ತಳೆ ತೋಟಗಳಿಂದ ಕೂಡಿರುವುದರಿಂದ ಜನಾಕರ್ಷಕವಾಗಿದೆ. ಕೊಡಗು ಋತುಮಾನದೊಂದಿಗೆ ಬೆಸೆದುಕೊಳ್ಳುವ ಕಾರಣದಿಂದ ಇಲ್ಲಿ ವರ್ಷಪೂರ್ತಿ ಆಹ್ಲಾದಕರ ವಾತಾವರಣದಿಂದ ಕೂಡಿದ್ದು, ನೋಡುವುದಕ್ಕೆ ಮಾತ್ರವಲ್ಲದೆ, ಚಾರಣಕ್ಕೂ ಹೇಳಿ ಮಾಡಿಸಿದಂತಿದೆ. ಇಲ್ಲಿನ ತಡಿಯಾಂಡುಮೋಳ್, ಪುಷ್ಪಗಿರಿ, ಬ್ರಹ್ಮಗಿರಿ, ಕುಂದಬೆಟ್ಟ ಮೊದಲಾದವುಗಳು ತನ್ನ ಐತಿಹಾಸಿಕ ಮತ್ತು ಪೌರಾಣಿಕ ವಿಚಾರಗಳಿಂದ ಕೂಡಿದ್ದು, ಚಾರಣ ಮಾಡುವವರಿಗೆ ಸೂಕ್ತವೆನಿಸುವಂತಿವೆ.

ಕೊಡಗಿನಲ್ಲಿ ಪ್ರವಾಸೋದ್ಯಮಕ್ಕೆ ವಿಪುಲ ಅವಕಾಶವಿದೆ. ಜಿಲ್ಲೆಯ ನೈಸರ್ಗಿಕ ಸೌಂದರ್ಯ ತಾಣಗಳಾದ ಕಾವೇರಿಯ ಉಗಮಸ್ಥಾನ ತಲಕಾವೇರಿ, ಭಾಗಮಂಡಲ, ಮಡಿಕೇರಿಯ ರಾಜಾಸೀಟ್, ಮಡಿಕೇರಿ ಕೋಟೆ, ಅಬ್ಬಿಫಾಲ್ಸ್, ಇರ್ಪು ಜಲಪಾತ, ಚೇಲಾವರ ಜಲಪಾತ ಮುಂತಾದ ಸ್ಥಳಗಳು ಪ್ರವಾಸಿಗರ ಮೆಚ್ಚಿನ ತಾಣಗಳಾಗಿವೆ. ಅಲ್ಲದೆ ಹಲವಾರು ಕವಿಗಳು ಕೊಡಗಿನ ನಿಸರ್ಗವನ್ನು ಹಾಡಿಹೊಗಳಿದ್ದಾರೆ. 'ಎಲ್ಲಿ ಭೂರಮೆ ದೇವ ಸನ್ನಿಧಿ ಬಯಸಿ ಬಿಮ್ಮನೆ ಬಂದಳೋ?' ಎಂಬ ಪಂಜೆ ಮಂಗೇಶರಾಯರ ಪದ್ಯ ಬಹಳ ಪ್ರಸಿದ್ಧವಾದದ್ದು. ಜಿ.ಪಿ ರಾಜರತ್ನಂ ಅವರ 'ಮಡಿಕೇರಿಲೀ ಮಂಜು', ಕುವೆಂಪುರವರ 'ಕೊಡಗಿನ ಪೂವಮ್ಮ' ಎಂಬ ಪದ್ಯಗಳು ಸಹ ಪ್ರಮುಖವಾಗುತ್ತವೆ.

**ರಾಜಾಸೀಟು:** ರಾಜಾಸೀಟು ಐತಿಹಾಸಿಕವಾಗಿ ಮಹತ್ವವನ್ನು ಪಡೆದಿದ್ದು, ಮಡಿಕೇರಿಯ ನಗರಪ್ರದೇಶಕ್ಕೆ ಹೊಂದಿಕೊಂಡಂತೆ ಇರುವ ಒಂದು ಪ್ರವಾಸಿ ಸ್ಥಳ. ರಾಜಾಸೀಟಿನಿಂದ ದಕ್ಷಿಣಕ್ಕೆ ಇಳಿಜಾರಾದ ಪ್ರದೇಶವಾಗಿದೆ. ಸುಂದರವಾದ ಪ್ರಕೃತಿಯ ಸೊಬಗನ್ನು ವೀಕ್ಷಿಸಲು ಸೂರ್ಯಾಸ್ತದ ಸಮಯ ಸೂಕ್ತವಾಗಿದೆ. ಜಿಲ್ಲಾಡಳಿತ ಇತ್ತೀಚೆಗೆ ಇದರ ನವೀಕರಣಮಾಡಿ ಇಲ್ಲಿಗೆ ಆಗಮಿಸುವ ಪ್ರವಾಸಿಗರಿಗೆ ಉತ್ತಮ ವ್ಯವಸ್ಥೆಯನ್ನು ಮಾಡಿಕೊಟ್ಟಿದೆ. ರಾಜಾಸೀಟು ನಿರ್ಮಾಣದ ಬಗೆಗೆ ಒಂದು ಕತೆ ಈ ರೀತಿಯಿದೆ. 'ಬಹಳ ಉದಾರಿಯಾದ ಕೊಡಗಿನ ರಾಜ ಲಿಂಗರಾಜನು ಪ್ರತಿದಿನ ಸಾಯಂಕಾಲದ ಸಮಯ ಪ್ರಕೃತಿಯ ವೀಕ್ಷಣೆಗಾಗಿ ಒಂದು ನಿಗದಿತ ಸ್ಥಳಕ್ಕೆ ಬಂದು ಕುಳಿತುಕೊಳ್ಳುತ್ತಿದ್ದನಂತೆ. ಈ ಸ್ಥಳವೇ ಮುಂದೆ 'ರಾಜಾಸೀಟು'[೩೦] ಎಂಬ ನಾಮಕರಣ ವಾಗಿದೆಯೆಂದು ಹೇಳುತ್ತಾರೆ. ಇಲ್ಲಿ ಕುಳಿತು ಆಯಾಸ ಪರಿಹರಿಸಿಕೊಳ್ಳುವುದರ ಜೊತೆಗೆ ಜನರ ಸಮಸ್ಯೆಗಳಿಗೆ ಸ್ಪಂದಿಸುತ್ತಿದ್ದನು ಎಂಬುದು ಮುಖ್ಯವಾಗುತ್ತದೆ. ನಾಲ್ಕು ಕಂಬಗಳ ಆಧಾರದಲ್ಲಿ, ನಾಲ್ಕು ದಿಕ್ಕಿಗೂ ತೆರೆದುಕೊಂಡಿರುವ ಈ 'ರಾಜಾಸೀಟ್'ನಿಂದ ಸುತ್ತ ವೀಕ್ಷಿಸಿದರೆ ಆಕಾಶಕ್ಕೆ ಒಡ್ಡಿಕೊಂಡಂತಿರುವ ಬೆಟ್ಟ-ಗುಡ್ಡಗಳು, ಆಳದಲ್ಲಿರುವಂತೆ ಭಾಸವಾಗುವ ಹಳ್ಳಿಗಳು, ಅಲ್ಲಿನ ಗದ್ದೆ-ತೋಟಗಳು ಕಾಣಿಸುತ್ತವೆ. "ರಾಜಾಸನದ ಕಟ್ಟೆಯ ಮೇಗಲಿ, ಕೇರಿಯ ತರುಣಿಯರು, ರಮ ರಮ ಝುಮ ಝುಮ ಸಂವಾದಗಳಾ, ಲೀಲೆಯೊಳ್ ಮುಳುಗುವರು, ಮರೆವರು ಸುತ್ತಲ ಲೋಕವನು"[೩೦ಎ] ಎಂಬ ಪದ್ಯದ ಸಾಲುಗಳು ಇಲ್ಲಿ ಕುಳಿತವರು ಸಮಯದ ಅರಿವನ್ನು ಮರೆಯುತ್ತಾರೆ ಎಂಬುದನ್ನು ಧ್ವನಿಸುತ್ತದೆ.

**ತಲಕಾವೇರಿ:** ಕೊಡಗಿನ ಜೀವನದಿ ಕಾವೇರಿಯ ಉಗಮಸ್ಥಾನ ಮತ್ತು ಪವಿತ್ರ ಪುಣ್ಯಕ್ಷೇತ್ರವೇ ತಲಕಾವೇರಿ. ಮಡಿಕೇರಿಯಿಂದ ಸುಮಾರು ೫೦ ಕಿ.ಮೀ ದೂರದಲ್ಲಿರುವ ಈ ಸ್ಥಳಕ್ಕೆ ಜಿಲ್ಲೆಯ ಇತರ ಭಾಗಗಳಿಂದಲೂ ಸಾರಿಗೆ ಸೌಲಭ್ಯವಿದೆ. ಬ್ರಹ್ಮಗಿರಿಯ ಇಳಿಜಾರಿನಲ್ಲಿರುವ ಈ ಸ್ಥಳಕ್ಕೆ ಭಾಗಮಂಡಲದಿಂದ ಐದೂವರೆ ಕಿ.ಮೀ ಕಾಲುದಾರಿಯೂ ಇದ್ದು ಕೆಲವರು ಇದರ ಮೂಲಕವೂ ತಲಕಾವೇರಿಗೆ ಬರುತ್ತಾರೆ. ಇದರ ಹೊರತು ಮಡಿಕೇರಿಯಿಂದ ತಲಕಾವೇರಿಯವರೆಗೆ ಯೋಗ್ಯವಾದ ರಸ್ತೆಗಳಿರುವುದರಿಂದ ಯಾತ್ರಾರ್ಥಿಗಳು ಪ್ರಯಾಣಕ್ಕೆ ಶ್ರಮಪಡುವಂತಿಲ್ಲ.

ತಲಕಾವೇರಿಯಲ್ಲಿ ಅಗಸ್ತ್ಯೇಶ್ವರ ದೇವಾಲಯ ಮತ್ತು ಗಣಪತಿ ದೇವಾಲಯಗಳಿವೆ. ಈ ದೇವಾಲಯಗಳ ಕೆಳಗೆ ಕಾವೇರಿ ಉದ್ಭವಿಸಿದ ಚಚ್ಚೌಕಾಕಾರದ ಚಿಕ್ಕ ಕೊಳವಿದ್ದು ಇದನ್ನು 'ಕುಂಡಿಕೆ' ಎಂದು ಕರೆಯುತ್ತಾರೆ. ಇದಕ್ಕೆ ಹೊಂದಿಕೊಂಡಂತೆ ಪವಿತ್ರಸ್ನಾನ ಮಾಡಲು ಒಂದು ದೊಡ್ಡ ಕೊಳವನ್ನು ನಿರ್ಮಿಸಲಾಗಿದೆ.

ತಲಕಾವೇರಿಯಲ್ಲಿ ಪ್ರತಿವರ್ಷ ಅಕ್ಟೋಬರ್ ತಿಂಗಳ ೧೭ ಅಥವಾ ೧೮ ರಂದು ಕಾವೇರಿ ತೀರ್ಥೋದ್ಭವವಾಗುತ್ತದೆಂಬ ನಂಬಿಕೆಯಿದೆ. ಕೊಡವರ ಆರಾಧ್ಯದೇವತೆ ಕಾವೇರಮ್ಮನೇ ಅಗಿರುವುದರಿಂದ ಕಾವೇರಿ ಸಂಕ್ರಮಣದ ದಿನದಂದು ಕೊಡವರು ಹೆಚ್ಚಿನ ಸಂಖ್ಯೆಯಲ್ಲಿ ಬಂದು ಸೇರುತ್ತಾರೆ. ಕೊಡವ ಪದ್ಧತಿಯಂತೆ ಕಾವೇರಿ ಸಂಕ್ರಮಣದ ದಿನದಂದು ಕೊಡವ ದಂಪತಿಗಳು

ಅತಿಭಕ್ತಿಯಿಂದ ತೆರಳಿ ಕಾವೇರಿ ಮಾತೆಯ ಆಶೀರ್ವಾದವನ್ನು ಪಡೆದರೆ ಒಳ್ಳೆಯದಾಗುತ್ತದೆ ಎಂಬುದು ಇಲ್ಲಿನವರ ನಂಬಿಕೆ. ಇಂತಹ ನಂಬಿಕೆಗಳ ಆಧಾರದಲ್ಲಿಯೇ ಇಲ್ಲಿನ ಎಷ್ಟೋ ಜನರು ತಮ್ಮ ಬದುಕನ್ನು ನಡೆಸುತ್ತಿದ್ದಾರೆ. ತುಲಾ ಸಂಕ್ರಮಣದಲ್ಲಿ ಭಾಗವಹಿಸಿದ ಭಕ್ತರು ಹಿಂತಿರುಗಿ ಬರುವಾಗ ಭಾಗಮಂಡಲದ ಭಗಂಡೇಶ್ವರ ದೇವರನ್ನು ಪೂಜಿಸುವುದು ಬಹಳ ಮುಖ್ಯ.

ಕೊಡವರು ಮಾತ್ರವಲ್ಲದೆ ಕೊಡಗಿನ ಸಮೀಪದ ಜಿಲ್ಲೆಗಳಿಂದಲೂ ಅನೇಕ ಯಾತ್ರಿಕರು ಬಂದು ದರ್ಶನ ಮಾಡಿ, ತೀರ್ಥಸ್ನಾನ ಮಾಡಿ ಪವಿತ್ರರಾಗುವುದನ್ನು ಕಾಣುತ್ತೇವೆ. ಮಂಡ್ಯ ಜಿಲ್ಲೆಗೆ ನೀರಿನ ಮೂಲವಾಗಿರುವ ತಲಕಾವೇರಿಗೆ ತೀರ್ಥೋದ್ಭವದ ದಿನ ಮಂಡ್ಯ ಜಿಲ್ಲೆಯ ಜನತೆಯಿಂದ ಅನ್ನ ಸಂತರ್ಪಣೆ ನಡೆಯುತ್ತದೆ.

**ಹಾರಂಗಿ:** ಹಾರಂಗಿ ಒಂದು ಊರಿನ ಹೆಸರಾದರೂ ಇಲ್ಲಿ ಕಾವೇರಿ ನದಿಗೆ ಅಡ್ಡಲಾಗಿ ಅಣೆಕಟ್ಟೆಯನ್ನು ನಿರ್ಮಿಸಲಾಗಿರುವುದರಿಂದ, ಹಾರಂಗಿ ಎಂದರೆ ಜಲಾಶಯ ಎಂಬಷ್ಟು ಪ್ರಸಿದ್ಧಿಯಾಗಿದೆ. ಈ ಜಲಾಶಯದಿಂದ ಹೊರ ಬರುವ ನೀರು ಸೋಮವಾರಪೇಟೆ ತಾಲೂಕಿನ ಕೂಡಿಗೆ ಎಂಬ ಸ್ಥಳದಲ್ಲಿ ಕಾವೇರಿ ನದಿಯನ್ನು ಕೂಡಿಕೊಳ್ಳುತ್ತದೆ. ಇದರ ನಿರ್ಮಾಣ ಕಾರ್ಯ ೧೯೭೦ರಲ್ಲಿ ಆರಂಭವಾಗಿ, ೧೯೮೨ರಲ್ಲಿ ಪೂರ್ಣಗೊಂಡು ಕೃಷಿಕರಿಗೆ ಉಪಯೋಗವಾಗಿದೆ.

**ಕಾವೇರಿ ನಿಸರ್ಗಧಾಮ:** ಕೊಡಗಿನ ಕೆಲವು ಅಪರೂಪದ ಪ್ರವಾಸಿ ತಾಣಗಳಲ್ಲಿ ಕುಶಾಲನಗರ ಮತ್ತು ಮಡಿಕೇರಿ ರಸ್ತೆಯಂಚಿನಲ್ಲಿ ನಿರ್ಮಿತವಾಗಿರುವ ಕಾವೇರಿ ನಿಸರ್ಗಧಾಮವೂ ಒಂದು. ಇದು ಕಾವೇರಿ ನದಿ ದಂಡೆಯಲ್ಲಿರುವ ಮಾನವ ನಿರ್ಮಿತ ಅರಣ್ಯ ವಸತಿ ಪ್ರದೇಶವೆಂದು ಹೇಳಬಹುದು. ೧೯೮೮ರಲ್ಲಿ ರಾಜ್ಯ ಅರಣ್ಯ ಇಲಾಖೆಯು 'ಇಕೋ ಟೂರಿಸಂ' ಯೋಜನೆಯಡಿಯಲ್ಲಿ ಇದನ್ನು ಅಭಿವೃದ್ಧಿ ಪಡಿಸಲಾಗಿದೆ. ಕಾವೇರಿ ನದಿಯ ಎರಡೂ ಬದಿಯಲ್ಲಿ ಬಿದಿರಿನ ಮೆಳೆಗಳಿದ್ದು, ಅಲ್ಲಲ್ಲಿ ತೇಗ, ಬೀಟೆ ಮೊದಲಾದ ಬೆಲೆಬಾಳುವ ಮರಗಳಿವೆ. ಇವುಗಳ ಮೇಲೆ ಸಣ್ಣದಾದ ಗುಡಿಸಲುಗಳನ್ನು ನಿರ್ಮಿಸಿ ಪ್ರವಾಸಿಗರಿಗೆ ಎತ್ತರದಿಂದ ಪ್ರಕೃತಿ ವೀಕ್ಷಣೆಗೆ ಹಾಗೂ ವಿಶ್ರಮಿಸಿಕೊಳ್ಳಲು ಅವಕಾಶ ಮಾಡಿಕೊಡಲಾಗಿದೆ. ಇದರ ನಡುವೆ ಹರಿಯುವ ಕಾವೇರಿ ನದಿಯನ್ನು ದಾಟಲು ಇತ್ತೀಚೆಗೆ ತೂಗು ಸೇತುವೆಯನ್ನು ನಿರ್ಮಿಸಲಾಗಿದೆ.

ಮಳೆಗಾಲದಲ್ಲಿ ಕೊಡಗಿನ ಯಾವ ರಸ್ತೆಯಲ್ಲಿ ಸಂಚರಿಸಿದರೂ ಹಲವು ಜಲಪಾತಗಳ ದರ್ಶನವಾಗುತ್ತದೆ. ಮಡಿಕೇರಿ ತಾಲೂಕಿನ ಅಬ್ಬಿಫಾಲ್ಸ್, ವಿರಾಜಪೇಟೆ ತಾಲೂಕಿನ ಇರ್ಪುಫಾಲ್ಸ್, ನಾಪೋಕ್ಲು ಬಳಿಯ ಚೇಲಾವರ ಫಾಲ್ಸ್ ಈ ಜಿಲ್ಲೆಯ ಪ್ರಮುಖ ಆಕರ್ಷಣೀಯ ತಾಣಗಳಾಗಿವೆ. ಇವಲ್ಲದೆ ಖಾಸಗಿ ಕಾಫಿ ತೋಟಗಳ ನಡುವೆ ಮಳೆಗಾಲದಲ್ಲಿ ಮೈದುಂಬಿ ಹರಿಯುತ್ತಿದ್ದರೂ ಅಲ್ಲಿಗೆ ತೆರಳಲು ಆ ಎಸ್ಟೇಟ್‌ನ ಮಾಲಕರ ನಿರ್ಬಂಧಗಳಿಂದ ಇನ್ನೂ ಎಷ್ಟೋ ಜಲಪಾತಗಳು ಅನಾಮಧೇಯವಾಗಿ ಉಳಿದಿವೆ.

**ಅಬ್ಬಿ ಜಲಪಾತ:** ಮಡಿಕೇರಿಯಿಂದ ಗಾಳಿಬೀಡು ಮಾರ್ಗವಾಗಿ ಆರೇಳು ಕಿ. ಮೀ ಪ್ರಯಾಣಿಸಿದರೆ ಅಬ್ಬಿ ಜಲಪಾತ ಸಿಗುತ್ತದೆ. ಇದನ್ನು ಅಬ್ಬೆ ಜಲಪಾತವೆಂದೂ ಕರೆಯುತ್ತಾರೆ. ಮುತ್ತರೆ ಮುಟ್ಟ ತೊರೆಯಿಂದ ನೈಸರ್ಗಿಕವಾಗಿ ಸೃಷ್ಟಿಯಾಗಿರುವ ಅಬ್ಬಿ ಜಲಪಾತ ಜನಾಕರ್ಷಕವಾಗಿದೆ. ಕೊಡವ ಭಾಷೆಯಲ್ಲಿ ಅಬ್ಬೆ ಎಂಬುದು ಅಬ್ಬಿ ಎಂದಾಗಿದೆ. 'ಅಬ್ಬಿ' ಎಂದರೆ 'ಜಲಪಾತ' ಎಂಬರ್ಥವಿದ್ದು ಅಬ್ಬಿ ಜಲಪಾತವೆಂದು ದ್ವಿರುಕ್ತಿ ರೂಪದಲ್ಲಿ ಬಳಕೆಯಾಗುತ್ತಿದೆ. ಸ್ವತಂತ್ರಪೂರ್ವದಲ್ಲಿ ಮಡಿಕೇರಿಯ ಚಾಪ್ಲಿನ್ ಆಗಿದ್ದವರ ಮಗಳು 'ಜೆಸ್ಸಿಯ ಸ್ಮರಣಾರ್ಥವಾಗಿ 'ಅಬ್ಬಿ ಜಲಪಾತ'ಕ್ಕೆ 'ಜೆಸ್ಸಿ ಜಲಪಾತ'[೩೧] ಎಂದು ಕರೆಯುತ್ತಿದ್ದುದು ತಿಳಿದು ಬರುತ್ತದೆ. ಈರಪ್ಪ ಎಂ ಕಂಬಳಿಯವರು ತಮ್ಮ 'ಅಬ್ಬೆಯ ಮಡಿಲಲ್ಲಿ ಚಾರಣ ಗೀರಣ' ಎಂಬ ಲೇಖನದಲ್ಲಿ ಕೊಡಗಿನ ಬೇಟಿಯಲ್ಲಿ ತಲಕಾವೇರಿ, ಭಾಗಮಂಡಲ, ಅಬ್ಬಿಫಾಲ್ಸ್‌ಗಳನ್ನು ಸ್ಪರ್ಷಿಸುವುದು ನಮ್ಮ ಘನ ಉದ್ಧೇಶವಾಗಿತ್ತು[೩೨] ಎಂಬ ಮಾತು ಕೊಡಗಿಗೆ ಬಂದ ಪ್ರವಾಸಿಗರು ಅಬ್ಬಿಜಲಪಾತವನ್ನು ನೋಡದೇ ಹೋಗಲಾರರು ಎಂಬುದನ್ನು ತಿಳಿಸಿಕೊಡುತ್ತದೆ. "ಜಗುಲ ಕಟ್ಟೆಯ ಕಡಿದಾದ ಗೋಡೆಗುಂಟ ಮೇಲಿಂದ ಧೋತರ ಇಳಿಬಿಟ್ಟಂತೆ ತೋರುವ ಧಾರಾಕಾರ ನೀರು. ಮೇಲುಗಡೆ ಅಗಣಿತ ಕಾಫಿ ತೋಟಗಳ ನಡುವೆ ನುಸುಳಿ ನುಗ್ಗಿ ಬಂದು ಇಲ್ಲಿ ನಾನಿಲ್ಲುವಳಲ್ಲ ಒಂದೇ ಕಡೆ ದಾರಿ ಬಿಡಿ" ಎನ್ನುವಂತೆ ದುಮ್ಮಿಕ್ಕುತ್ತಾಳೆ[೩೩] ಎಂಬ ಮಾತುಗಳು ಅಬ್ಬಿ ಜಲಪಾತದ ನಿರಂತರ ಭೋರ್ಗರೆಯುವಿಕೆಗೆ ಸಾಕ್ಷಿಯಾಗುತ್ತವೆ.

ಇಲ್ಲಿಗೆ ತೆರಳಲು ಕಾಫಿ ತೋಟದ ಕಾಲುದಾರಿಯಲ್ಲಿ ಕಾಲ್ನಡಿಗೆಯಲ್ಲಿಯೇ ಹೋಗಬೇಕು. ಕೆಲವು ಸಾಹಸ ಮನೋಪ್ರವೃತ್ತಿಯುಳ್ಳವರು ಕಡಿದಾದ ಕಲ್ಲುಬಂಡೆಗಳ ಮೇಲೆ ಹತ್ತಲು ಪ್ರಯತ್ನಿಸಿ ಸಾವಿಗೀಡಾಗಿರುವ ಉದಾಹರಣೆಗಳಿವೆ. ಆ ಕಾರಣದಿಂದಾಗಿ ಇತ್ತೀಚೆಗೆ ನೀರು ದುಮ್ಮಿಕ್ಕುವುದನ್ನು ದೂರದಿಂದಲೇ ನೋಡಿ ಆನಂದಿಸಲು ಒಂದು ಸೇತುವೆ ರೀತಿಯಲ್ಲಿ ಅಟ್ಟವೊಂದನ್ನು ನಿರ್ಮಿಸಿ, ದೂರದಿಂದಲೇ ನಿಂತು ನೋಡುವ ವ್ಯವಸ್ಥೆ ಮಾಡಲಾಗಿದೆ.

**ಇರ್ಪು ಜಲಪಾತ:** ದಕ್ಷಿಣ ಕೊಡಗಿನಲ್ಲಿ ಲಕ್ಷ್ಮಣ ತೀರ್ಥ ನದಿ ದಂಡೆಯ ಮೇಲಿರುವ ಹಾಗೂ ಶ್ರೀಮಂಗಲದಿಂದ ಎಂಟು ಕಿ. ಮೀ. ವಿರಾಜಪೇಟೆಯಿಂದ ನಲವತ್ತೆಂಟು ಕಿ. ಮೀ. ದೂರದಲ್ಲಿರುವ ಒಂದು ಪುಣ್ಯಕ್ಷೇತ್ರ ಇರ್ಪು. ಈ ಸ್ಥಳದಲ್ಲಿ ಶ್ರೀರಾಮನಿಂದ ಸ್ಥಾಪಿಸಲ್ಪಟ್ಟ ಒಂದು ದೇವಾಲಯವಿದೆ. ಹಾಗೆಯೇ ಲಕ್ಷ್ಮಣ ತೀರ್ಥ ನದಿಯಿಂದ ಸೃಷ್ಟಿಯಾದ ಒಂದು ಜಲಪಾತವಿದೆ. ಮಹಾಶಿವರಾತ್ರಿಯ ಶುಭದಿನದಲ್ಲಿ ಸುತ್ತಲ ಪ್ರದೇಶದ ಭಕ್ತರು ಬಂದು ಇಲ್ಲಿನ ನದಿಯಲ್ಲಿ ಮಿಂದು ಶಿವಪೂಜೆಮಾಡಿ ಪುನೀತರಾಗುತ್ತಾರೆ. ಇತ್ತೀಚೆಗೆ ಇರ್ಪುವಿಗೆ ಬೇಟಿ ನೀಡುವ ಪ್ರವಾಸಿಗರ ಸಂಖ್ಯೆ ಅಧಿಕವಾಗಿದ್ದು, ಪುಣ್ಯಕ್ಷೇತ್ರಕ್ಕಿಂತ ಹೆಚ್ಚಾಗಿ ಪ್ರವಾಸಿ ತಾಣವಾಗಿ ಮಾರ್ಪಾಟಾಗಿದೆ.

**ಚೇಲಾವರ ಜಲಪಾತ:** ಮಡಿಕೇರಿ ತಾಲೂಕಿನ ನಾಪೋಕ್ಲು ಸಮೀಪದಲ್ಲಿರುವ ಚೇಲಾವರ ಜಲಪಾತವೂ ಪ್ರಮುಖವಾದದ್ದು. ಮಡಿಕೇರಿಯಿಂದ ಚೆಯ್ಯಂಡಾಣೆಗೆ ತೆರಳಿ ಅಲ್ಲಿಂದ ಸುಮಾರು

ಐದು ಕಿ. ಮೀ. ಸ್ವಾಭಾವಿಕ ಅರಣ್ಯ ಮಾರ್ಗದಲ್ಲಿ ಮುಂದೆ ಸಾಗಿದರೆ ಈ ಜಲಧಾರೆ ಎದುರಾಗುತ್ತದೆ. ಮಳೆಗಾಲದಲ್ಲಿ ಮಾತ್ರ ಇದು ಭೋರ್ಗರೆದು ಹರಿಯುತ್ತದೆ.

**ತಡಿಯಾಂಡುಮೋಳ್ ಬೆಟ್ಟ:** ಕೊಡಗಿನಲ್ಲೇ ಅತ್ಯಂತ ಎತ್ತರವಾದ ಶಿಖರವೆಂದು ಗುರುತಿಸಿಕೊಂಡಿದೆ. ಕೊಡವ ಭಾಷೆಯಲ್ಲಿ ತಡಿಯಾಂಡುಮೋಳ್ ಎಂದರೆ ವಿಶಾಲವಾದ ಅಡಿಪಾಯ ಎಂದರ್ಥ(ತಡಿ–ವಿಶಾಲ, ಯಂಡ–ಸೇರಿದ್ದು, ಮೋಳ್–ಬೆಟ್ಟ). ಇದು ಸಮುದ್ರ ಮಟ್ಟದಿಂದ ೧೭೪೫ ಮೀ ಎತ್ತರದಲ್ಲಿದೆ. ಮಡಿಕೇರಿಯ ನಾಪೋಕ್ಲುವಿನಿಂದ ಸುಮಾರು ೧೬ ಕಿ.ಮೀ ದೂರದಲ್ಲಿದೆ. ಈ ಬೆಟ್ಟದ ಬುಡದಲ್ಲಿಯೇ ಪ್ರಸಿದ್ಧವಾದ ನಾಲ್ಕುನಾಡು ಅರಮನೆಯಿದೆ. ಬೆಟ್ಟದ ಮೇಲಿನ ಪ್ರದೇಶ ತುಂಬಾ ವಿಸ್ತಾರವಾಗಿದ್ದು, ಇಬ್ಬನಿ ವರ್ಷದ ಎಲ್ಲಾ ಕಾಲದಲ್ಲಿಯೂ ಮುಚ್ಚಿಕೊಂಡಿದ್ದು, ನೋಡುಗರಿಗೆ ಸುಂದರವಾಗಿ ಕಾಣಿಸುತ್ತದೆ. ಇಲ್ಲಿ ನಿಂತು ಸುತ್ತಲೂ ನೋಡಿದರೆ ಪಶ್ಚಿಮದ ಅರಬ್ಬಿ ಸಮುದ್ರ ಕಾಣಿಸುತ್ತದೆ. ಇದಲ್ಲದೆ ಕೊಡಗಿನ ಪೂರ್ಣಭಾಗ ಮತ್ತು ಪಕ್ಕದ ರಾಜ್ಯವಾದ ಕೇರಳದ ಕೆಲವು ಭಾಗಗಳ ಪಕ್ಷಿನೋಟ ದೊರೆಯುತ್ತದೆ.

**ಪುಷ್ಪಗಿರಿ ಬೆಟ್ಟ:** ಉತ್ತರ ಕೊಡಗಿನ ಸೋಮವಾರಪೇಟೆ ತಾಲೂಕಿನ ಕುಮಾರಹಳ್ಳಿಯ ಸಮೀಪವಿರುವ ಈ ಬೆಟ್ಟವನ್ನು ಕುಮಾರ ಪರ್ವತವೆಂದೂ ಕರೆಯಲಾಗುತ್ತದೆ. ಎತ್ತರದಲ್ಲಿ ತಡಿಯಂಡಮೋಳ್ ಪರ್ವತದ ನಂತರದ ಹಾಗೂ ಕರ್ನಾಟಕದ ಆರನೇ ಅತಿ ಎತ್ತರದ ಶಿಖರವಾಗಿದೆ. ಈ ಶಿಖರ ದಕ್ಷಿಣ ಕನ್ನಡ ಜಿಲ್ಲೆಯ ಸುಬ್ರಹ್ಮಣ್ಯ ಪ್ರದೇಶದ ವ್ಯಾಪ್ತಿಗೂ ಹೊಂದಿಕೊಂಡಿರುವುದರಿಂದ ಇದನ್ನು ಸುಬ್ರಹ್ಮಣ್ಯ ಬೆಟ್ಟ ಎಂದೂ ಕರೆಯಲಾಗಿದೆ. ಸಮುದ್ರ ಮಟ್ಟದಿಂದ ೫,೬೧೭ ಅಡಿ ಎತ್ತರವಿರುವ ಈ ಪರ್ವತ ಚಾರಣಕ್ಕೆ ಉತ್ತಮವಾಗಿದೆ.

## ೨.೨. ಐತಿಹಾಸಿಕ ಕೊಡಗು

ಭಾರತವು ಸೇರಿದಂತೆ ಜಗತ್ತಿನ ಹಲವಾರು ರಾಷ್ಟ್ರಗಳು ಅನೇಕ ರಾಜವಂಶಗಳ ಆಳ್ವಿಕೆಗೊಳಪಟ್ಟು ಬೆಳೆದು ಬಂದಿವೆ. ಅದು ಗತಕಾಲದ ಪರಿಸ್ಥಿತಿಯೂ ಆಗಿದೆ. ಸರ್ವಾಧಿಕಾರಿ ಧೋರಣೆಯನ್ನು ಅನುಸರಿಸಿರುವುದೇ ಆಳಿಕೆ ಮಾಡುವವರ ಅಲಿಖಿತ ನಿಯಮಗಳಾಗಿ ರೂಪಿತವಾಗಿವೆ. ದೇಶ ಒಬ್ಬರ ಆಳ್ವಿಕೆಯಲ್ಲಿದ್ದು, ದೇಶಾದ್ಯಂತ ತನ್ನ ಪ್ರತಿನಿಧಿತ್ವ ಸ್ಥಾಪಿಸಿ ಯಾವುದೇ ಟೀಕೆಗಳಿಗೆ ಗುರಿಯಾಗದೆ ಅಧಿಕಾರವನ್ನು ಅನುಭವಿಸಿರುವ ಅನೇಕ ನಿದರ್ಶನಗಳಿವೆ. ಕಾಲಕ್ರಮೇಣ ತಮ್ಮ ಸ್ವಾರ್ಥ ಹಿತಾಸಕ್ತಿಗಳಿಗೆ ದೇಶಗಳನ್ನು ಒಡೆದು ಕಟ್ಟುವ ನೀತಿಯನ್ನು ಅನುಸರಿಸಿ ಚಿಕ್ಕಚಿಕ್ಕ ಸಂಸ್ಥಾನಗಳನ್ನಾಗಿ ರಚಿಸಿ ಪ್ರಭುತ್ವವನ್ನು ಸಾಧಿಸಲಾಗಿದೆ. ಹೀಗೆ ರೂಪಿತಗೊಂಡ ಸಣ್ಣಸಣ್ಣ ಸಂಸ್ಥಾನಗಳಲ್ಲಿ ಸಾಮಾನ್ಯ ಜನತೆಗೆ ಒಪ್ಪಿತವಲ್ಲದ ಕಟ್ಟುಪಾಡುಗಳನ್ನು ಹೊರಿಸಿ ಒತ್ತಾಯಪೂರ್ವಕವಾಗಿ ಅನುಸರಿಸುವಂತೆ ಮಾಡುವಲ್ಲಿಯೂ ಯಶಸ್ವಿಯಾಗಿದ್ದಾರೆ. ಸಾಹಿತ್ಯ, ಸಂಸ್ಕೃತಿ, ಭಾಷೆ, ಆಚಾರ–ವಿಚಾರಗಳಲ್ಲಿ ತಮ್ಮದೇ ಆದ ಸಾರ್ವಭೌಮತ್ವವನ್ನು ಹೇರಿ, ಪ್ರಜೆಗಳೆಲ್ಲರು ತಮ್ಮನ್ನು ಅನುಕರಣೆ ಮಾಡಬೇಕು ಎಂಬ ಶಾಸನಗಳನ್ನು ವಿಧಿಸಿದ್ದಾರೆ.

ಘೋರಶಿಕ್ಷೆ, ಸಾವುನೋವುಗಳ ಭಯದಿಂದ ಬದುಕಬೇಕಾದ ಜನರಿಗೆ ಇದು ಅನಿವಾರ್ಯವಾಗಿದ್ದರಿಂದ ಪ್ರತಿಭಟಿಸಲಾಗದ ಮನಸ್ಥಿತಿಯಿಂದ ಹೊಂದಿಕೊಂಡಿದ್ದಾರೆ.

ಇಂಥ ಹಲವು ಕಾರಣಗಳಿಂದ ಸ್ಥಾಪಿಸಲ್ಪಟ್ಟ ಭಾರತದ ಅನೇಕ ರಾಜ್ಯಗಳು ಪ್ರಮುಖ ರಾಜವಂಶಗಳಾದ ಸುಲ್ತಾನರು, ಮೊಗಲರು, ರಾಷ್ಟ್ರಕೂಟರು, ಚಾಲುಕ್ಯರು, ಚೋಳರು ಮುಂತಾದವರ ಆಳ್ವಿಕೆಗೊಳಪಟ್ಟಿರುವುದನ್ನು ಕಾಣಬಹುದು. ಉತ್ತರ ಭಾರತದಿಂದ ತಮ್ಮ ರಾಜ್ಯವನ್ನು ವಿಸ್ತರಿಸಿಕೊಂಡು ದಕ್ಷಿಣದ ಕಡೆಗೆ ಬಂದು ಆಡಳಿತ ನಡೆಸಿರುವುದು ತಿಳಿಯುತ್ತದೆ. ಬೇರೆಬೇರೆ ರಾಜಮನೆತನಗಳ ಆಡಳಿತವನ್ನು ಮೊಟಕುಗೊಳಿಸಿ ಇಡೀ ಭಾರತವನ್ನು ತಮ್ಮ ನಿಯಂತ್ರಣದಲ್ಲಿಟ್ಟುಕೊಂಡಿದ್ದುದು ಇತಿಹಾಸ.

ಲಿಖಿತ ದಾಖಲೆಗಳಲ್ಲಿ ಮೂಡಿಬಂದಿರುವ ವಿಚಾರಗಳಿಂದ ಒಂದು ರಾಜ್ಯದ, ಪ್ರದೇಶದ ಇತಿಹಾಸವನ್ನು ಅರಿಯುವಂತದ್ದು ರೂಢಿಯಲ್ಲಿರುವುದು ಸರಿಯಷ್ಟೆ. ಅದರಲ್ಲಿ ಯಾರು ಏನೇ ಬರೆದರೂ ಅದೇ ಅಂತಿಮ ಎನ್ನುವ ನಂಬಿಕೆ ನಮ್ಮಲ್ಲಿದೆ. "ಯಾವ ಐತಿಹಾಸಿಕ ಕಾದಂಬರಿಯೂ ಇತಿಹಾಸವನ್ನು ಅದು ಇರುವಂತೆ ಕಟ್ಟಿಕೊಡುವುದಿಲ್ಲ; ಹಾಗೆ ನೋಡುವುದೇ ಆದರೆ, ಅಪ್ಪಟ ಇತಿಹಾಸವೆಂದು ಕರೆಯಬಹುದಾದ ಕೃತಿಯೂ ವಾಸ್ತವವಾಗಿ ನಡೆದಿರುವುದರ ಸ್ಪಷ್ಟ ದಾಖಲೆಯಾಗಿರುತ್ತದೆ ಎಂದು ಹೇಳಲಾರೆವು"[೩೪] ಎಂದು ಹೇಳುವ ಮಾತುಗಳನ್ನು ಗಮನಿಸಿದರೆ ನಮಗೆ ನಿಜವಾದ ಇತಿಹಾಸವನ್ನು ತಿಳಿಯುವುದು ಕಷ್ಟಸಾಧ್ಯವಾಗುತ್ತದೆ. ಯಾವುದೇ ದೇಶ, ಪ್ರದೇಶ, ಸ್ಥಳಗಳು ಚರಿತ್ರೆಯಿಂದ ಹೊರಗುಳಿದಿಲ್ಲ. ಒಂದು ಪ್ರದೇಶದ ಚರಿತ್ರೆ ಕಾಲಾನುಕ್ರಮದಲ್ಲಿ ಬದಲಾವಣೆ ಹೊಂದಲು ಸಾಧ್ಯವಿಲ್ಲವೆಂಬ ಮಾತು ಸಾರ್ವಕಾಲಿಕ ಸತ್ಯ. ಆದರೆ ಮೂಲ ಇತಿಹಾಸವನ್ನೇ ಬದಲಾಯಿಸಿ ದೇಶದ ಆಂತರಿಕ ಕಲಹಗಳಿಗೆ ಕಾರಣವಾಗಿರುವ, ಕಾರಣವಾಗುತ್ತಿರುವ ಸಂಗತಿಗಳು ಇಂದಿಗೂ ಕಂಡುಬರುತ್ತಿವೆ. ಕೆಲವು ಮೂಲಗಳ ಪ್ರಕಾರ ಭಾರತದ ಇತಿಹಾಸದಲ್ಲಿಯೇ ಹಲವಾರು ಮಹತ್ವದ ಬದಲಾವಣೆಗಳಾಗಿವೆ ಎಂದು ವಾದಿಸುವವರೂ ಇದ್ದಾರೆ. ಇಂಥ ಸಂದರ್ಭದಲ್ಲಿ ನಮ್ಮ ಮುಂದಿರುವ, ನಾವು ಅಧ್ಯಯನ ಮಾಡುತ್ತಿರುವ ಕೃತಿಗಳೇ ನಮ್ಮ ಮುಂದಿನ ನಿಲುವು ಮತ್ತು ನಿರ್ಧಾರಗಳಾಗಿ ಮುಂದುವರೆಯುತ್ತವೆ.

ಬಹಳಷ್ಟು ಇತಿಹಾಸಕಾರರು ತಮ್ಮ ಅಧ್ಯಯನಗಳಿಗೆ, ಸಂಶೋಧನೆಗಳಿಗೆ ಬರವಣಿಗೆಯಲ್ಲಿ ದಾಖಲಾಗಿರುವ ಮೂಲಗಳನ್ನು ಆಧಾರವಾಗಿಟ್ಟುಕೊಳ್ಳುತ್ತಾರೆ. ನಿಜವಾಗಿಯೂ ಘಟಿಸಿದ ಅನೇಕ ಘಟನೆಗಳಿಗೆ ಲಿಖಿತ ದಾಖಲೆಗಳಿಲ್ಲದೆ ಮೌಖಿಕ ಆಕರಗಳಿದ್ದರೂ ಅವು ಮರೆಯಾಗಿ ಉಳಿಯುವ ಸಾಧ್ಯತೆಗಳಿವೆ. ಅನೇಕ ಲಾವಣಿಗಳು, ಜನಪದ ಹಾಡುಗಳು ಒಂದು ದೇಶದ, ಸ್ಥಳದ ಅದ್ಭುತ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ.

"ಯಾವುದೇ ಪ್ರದೇಶದ ಐತಿಹಾಸಿಕ ಹಿನ್ನೆಲೆಯನ್ನು ಅಧ್ಯಯನ ಮಾಡುವಾಗ ಈ ಕೆಳಗಿನ ಅಂಶಗಳನ್ನು ಆಧಾರವಾಗಿಟ್ಟುಕೊಳ್ಳಬೇಕಾಗುತ್ತದೆ. ಅವುಗಳೆಂದರೆ, ೧) ಪರಂಪರಾಗತವಾಗಿ ಹಿರಿಯರಿಂದ ಕಿರಿಯರಿಗೆ ಹೇಳಲ್ಪಟ್ಟ ಪುರಾಣ ಕಥೆ, ವೀರರ ಕಥೆ ಮತ್ತು ವಂಶಾವಳಿ ಪಟ್ಟಿಗಳಲ್ಲಿ ಹುದುಗಿರುವ ಚರಿತ್ರಾಂಶಗಳು, ೨) ಭೂಮಿಯನ್ನು ಅಗೆಯುವಾಗ ಸಿಕ್ಕ ನಗನಾಣ್ಯಗಳು, ಪಾತ್ರೆ ಪದಾರ್ಥ, ಕಟ್ಟಡ ಅವಶೇಷ ಮೊದಲಾದವುಗಳಿಂದ ದೊರೆಯಬಹುದಾದ ಅಂಶಗಳು, ೩) ನೆರೆದೇಶಗಳ ಸಾಹಿತ್ಯಗಳಲ್ಲಿ ಅಥವಾ ಪರದೇಶಗಳ ರಾಯಭಾರಿಗಳು ಇಲ್ಲವೇ ಯಾತ್ರಿಕರ ಗ್ರಂಥಗಳಲ್ಲಿ ಉಲ್ಲೇಖವಾಗಿರುವ ವಿವರಗಳು, ೪) ಹಿಂದಿನರಾಜರು ಅಥವಾ ಜನರು ಕಲ್ಲಿನ ಮೇಲೆ, ತಾಮ್ರದ ತಗಡಿನ ಮೇಲೆ ಮತ್ತು ಕಬ್ಬಿಣದ ಕಂಬಗಳ ಮೇಲೆ ಬರೆಸಿಟ್ಟ ಶಾಸನಗಳು."[೩೫]

ಕರ್ನಾಟಕದ ಒಂದು ಜಿಲ್ಲೆಯಾಗಿದ್ದು ಬೇರೆಬೇರೆ ಕಾರಣಗಳಿಂದ ದೇಶದ ಗಮನಸೆಳೆದಿರುವ ಕೊಡಗು ವಿಸ್ತೀರ್ಣದಲ್ಲಿ ಚಿಕ್ಕದಾಗಿದ್ದರೂ, ಇದನ್ನು ಹಲವು ರಾಜರುಗಳು, ನಾಯಕರು ಪಾಳೆಯಗಾರರು ಈ ನಾಡನ್ನು ಕಟ್ಟಿ ಆಳಿರುವುದನ್ನು ಕಾಣಬಹುದಾಗಿದೆ. ಕೊಡಗು ಜಿಲ್ಲೆಯ ಇತಿಹಾಸವನ್ನು ಹೇಳುವುದು ಈ ಅಧ್ಯಯನದ ಉದ್ದೇಶವಾಗಿರುವುದರಿಂದ ಡಿ. ಎನ್. ಕೃಷ್ಣಯ್ಯನವರ ಈ ಮೇಲಿನ ಅಂಶಗಳ ಗಮನದಲ್ಲಿಟ್ಟುಕೊಂಡು ರಚಿತಗೊಂಡಿರುವ ಪಠ್ಯಗಳನ್ನಾಧರಿಸಿ ಕೊಡಗಿನ ಇತಿಹಾಸವನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

## ೨.೨.೧. ಹಾಲೇರಿ ಅರಸರ ಆಳ್ವಿಕೆ

ಕೊಡಗಿನ ಉಲ್ಲೇಖ ಕ್ರಿ. ಶ. ಎರಡನೇ ಶತಮಾನದಲ್ಲಿ ತಮಿಳಿನ ಸಂಘಂ ಸಾಹಿತ್ಯದಲ್ಲಿ ಕಂಡುಬರುತ್ತದೆ. ಮಾಸ್ತಿಯವರು ತಮ್ಮ ಚಿಕವೀರರಾಜೇಂದ್ರ ಕಾದಂಬರಿಯ ಪ್ರಾಸ್ತಾವಿಕ ಬರೆಹದಲ್ಲಿ 'ಹಿರಿಯದೆನ್ನಿಸಿಕೊಳ್ಳಬಹುದಾದ ಇತಿಹಾಸವನ್ನು ಹೊಂದಿರುವ ಒಂದು ಕಿರಿದಾದ ಭೂಪ್ರದೇಶ ಕೊಡಗು' ಎಂದು ಹಾಗೂ ಭಾರತದ ವೈಸ್‌ರಾಯ್ ಆಗಿದ್ದ ಲಾರ್ಡ್ ಹಾರ್ಡಿಂಗ್ ಅವರ 'ಕೊಡಗು ಸಣ್ಣನಾಡು, ಆದರೆ ಇದರ ಇತಿಹಾಸ ಮಹತ್ವಪೂರ್ಣವಾದುದು'[೩೫೬] ಎಂಬ ಮಾತುಗಳು ಸಮಂಜಸವೆನಿಸುತ್ತವೆ. ಈ ಭೂಪ್ರದೇಶ ಕ್ರಿ. ಶ. ನಾಲ್ಕನೇ ಶತಮಾನದಿಂದ ಹನ್ನೊಂದನೇ ಶತಮಾನದವರೆಗೆ ತಲಕಾಡು ಎಂಬಲ್ಲಿಂದ ಆಳಲ್ಪಡುತ್ತಿತ್ತು. ಗಂಗರಸರು ನೇರವಾಗಿ ಆಳದಿದ್ದರೂ ಅವರ ಅಧೀನ ರಾಜನಾಗಿ ಚೆಂಗಾಳ್ವರೆಂಬುವವರು ಕೊಡಗಿನ ದಕ್ಷಿಣ ಭಾಗದದಲ್ಲಿರುವ ಪಾಲ್ಪರೆಯನ್ನು ತಮ್ಮ ರಾಜಧಾನಿಯಾಗಿ ಮಾಡಿಕೊಂಡು ಕೊಡಗನ್ನು ಆಳುತ್ತಿದ್ದರು. ಆನಂತರ ಚೋಳರಾಜರು ಗಂಗರಸರನ್ನು ಸೋಲಿಸಿ ಕೊಡಗನ್ನು ತಮ್ಮ ಸಾರ್ವಭೌಮತ್ವದೊಳಗೆ ತಂದುಕೊಳ್ಳುತ್ತಾರೆ. ಹನ್ನೆರಡನೇ ಶತಮಾನದ ಹೊತ್ತಿಗೆ ಹಾಸನ ಜಿಲ್ಲೆಯಲ್ಲಿ ಆಳ್ವಿಕೆ ಮಾಡುತ್ತಿದ್ದ ಹೊಯ್ಸಳರು ಕನ್ನಡ ಸೀಮೆಯಿಂದ ಚೋಳರನ್ನು ಹೊಡೆದೋಡಿಸಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದರು. ಹೊಯ್ಸಳರ ನಂತರ ಸುಮಾರು ನೂರು ವರ್ಷಗಳವರೆಗೆ ಕೊಡಗು ಸಣ್ಣ ಭಾಗಗಳಾಗಿ ಮಾರ್ಪಟ್ಟು ಸ್ಥಳೀಯ ನಾಯಕರಿಂದ

ಆಳಲ್ಪಡುತ್ತದೆ. ಕೊಡಗನ್ನು ಆಳಿದ ನಾಯಕರಲ್ಲಿ ಕೆಲವರು ಮಾತ್ರ ಜನರ ನೆನಪಿನಲ್ಲಿ ಉಳಿದು ನಂತರ ರಚಿಸಲ್ಪಟ್ಟ ಚರಿತ್ರೆಯಲ್ಲಿ ಉಲ್ಲೇಖವಾಗಿರುವುದು ಕಂಡುಬರುತ್ತದೆ. ಅವರುಗಳಲ್ಲಿ ಕಿಗ್ಗಟ್ಟುನಾಡಿನ ಅಚ್ಚುನಾಯಕ ಮತ್ತು ತಾವುನಾಡಿನ ಕರ್ಣೇಂಬಾಹು ಪ್ರಮುಖರಾಗುತ್ತಾರೆ

ಹದಿನಾರನೇ ಶತಮಾನದ ಸಮಯಕ್ಕೆ ಕೊಡಗಿನಲ್ಲಿ ನಾಯಕರ ಒಳಜಗಳ ಪ್ರಾರಂಭವಾಗಿ ಸುಭದ್ರ ಆಡಳಿತ ಮರೆಯಾಗುತ್ತದೆ. ಈ ಕಾರಣ ಹಾಗೂ ಸಮಯವನ್ನು ಅರಿತುಕೊಂಡ ಶಿವಮೊಗ್ಗದ ಕಡೆಯ ಇಕ್ಕೇರಿ ರಾಜವಂಶದ ತರುಣನೊಬ್ಬ ಕೊಡಗಿಗೆ ಬಂದು ಇಲ್ಲಿಯೇ ನೆಲೆಸಿ ರಾಜ್ಯವನ್ನು ಕಟ್ಟುತ್ತಾನೆ. ಇವರು ನೆಲೆಸಿದ ಸ್ಥಳ ಮಡಿಕೇರಿಯಿಂದ ಸುಮಾರು ಏಳು ಮೈಲುಗಳ ದೂರದಲ್ಲಿರುವ ಹಾಲೇರಿಯಾದುದರಿಂದ ಇವರಿಗೆ ಹಾಲೇರಿ ಅರಸರೆಂದೂ ಕರೆಯುತ್ತಾರೆ. ಹಾಲೇರಿ ಅರಸರು ಇಕ್ಕೇರಿಯಿಂದ ಬಂದವರೆಂದು ಹೇಳಲು ಈ ವಂಶದ ಅರಸ ದೊಡ್ಡವೀರರಾಜೆಂದ್ರನು ಬರೆಸಿರುವ 'ರಾಜೇಂದ್ರನಾಮೆ'ಯಲ್ಲಿ ಆಧಾರ ದೊರೆಯುತ್ತದೆಂದು ಹೇಳಲಾಗಿದೆ.[೩೬] ಹೀಗೆ ಇಕ್ಕೇರಿಯಿಂದ ಬಂದು ಹಾಲೇರಿಯಲ್ಲಿ ನೆಲೆಸಿದ ರಾಜವಂಶದ ಅರಸರು ಕೊಡಗನ್ನು ಹದಿನಾರನೇ ಶತಮಾನದಿಂದ ಹದಿನೆಂಟನೇ ಶತಮಾನದ ಕೊನೆಯ ಭಾಗದವರೆಗೂ ಸರಿಸುಮಾರು ಇನ್ನೂರು(೨೦೦) ವರ್ಷಗಳವರೆಗೆ ಆಳುತ್ತಾರೆ.

**ವೀರರಾಜೇಂದ್ರ:** ವೀರರಾಜೆಂದ್ರ ಕೊಡಗನ್ನು ಆಳಿದ ಹಾಲೇರಿ ವಂಶದ ಮೊದಲಿಗ. ಈತ ತನ್ನ ಬುದ್ಧಿವಂತಿಕೆಯನ್ನು ಪ್ರಯೋಗ ಮಾಡಿ ಹಾಲೇರಿಗೆ ವೀರಪ್ಪಸ್ವಾಮಿ ಎಂಬ ಜಂಗಮ ವೇಷಧಾರಿಯಾಗಿ ಬಂದು ಯಾರ ಗಮನಕ್ಕೂ ಬಾರದ ಹಾಗೆ ಒಂದು ಆಲದ ಮರದ ಕೆಳಗೆ ತಪಸ್ಸು ಮಾಡುತ್ತಿರುವಂತೆ ಕುಳಿತಿರುತ್ತಾನೆ.[೩೭] ಧ್ಯಾನ ಸ್ಥಿತಿಯಲ್ಲಿದ್ದುಕೊಂಡೆ ಅ ಪ್ರದೇಶದ ಸುತ್ತಮುತ್ತ ನಡೆಯುವ ಎಲ್ಲ ಕ್ರಿಯಾ ಚಟುವಟಿಕೆಗಳನ್ನು ಅರಿಯುತ್ತಿರುತ್ತಾನೆ. ಈತನ ಮುಖದಲ್ಲೊಂದು ವೀರಕಳೆಯಿದ್ದು ಜಂಗಮರ ಸಾತ್ವಿಕ ಕಳೆಗಿಂತ ಬೇರೆಯಾಗಿತ್ತು. ಸಹಜವಾಗಿ ಅಲ್ಲಿನ ನಿವಾಸಿಗಳು ಕುತೂಹಲದಿಂದ ಆತನಲ್ಲಿಗೆ ಬಂದು ಮಾತನಾಡಿಸಿ, ಆತ ಇಕ್ಕೇರಿಯಿಂದ ಬಂದಿರುವ ರಾಜವಂಶದವನೆಂದು ತಿಳಿಯುತ್ತಾರೆ. ಜಂಗಮನ ವೀರತ್ವವನ್ನು ಸೂಕ್ಷ್ಮವಾಗಿ ಅರಿತು ಹಾಲೇರಿಯ ನಾಯಕನನ್ನಾಗಿ ಒಪ್ಪಿಕೊಳ್ಳಲು ಸಿದ್ಧರಾಗುತ್ತಾರೆ. ಆ ಸಮಯಕ್ಕೆ ತಾವುನಾಡಿನ ನಾಯಕ ಕರ್ಣೇಂಬಾಹುವಿಗೆ ಇದರ ಸುಳಿವು ಸಿಕ್ಕಿ ಮುಂದೆ ತನಗೇನಾದರೂ ತೊಂದರೆಯಾಗಬಹುದೆಂದು ಊಹಿಸಿ ತಡೆಯಲು ಪ್ರಯತ್ನಿಸಿ ಹಾಲೇರಿಯ ಜನರಿಂದ ಸೋಲುತ್ತಾನೆ. ನಂತರ ಅಲ್ಲಿನ ಜನರು ವೀರಪ್ಪಸ್ವಾಮಿಯನ್ನು ಹಾಲೇರಿಯ ವೀರರಾಜ ಎಂದು ಕರೆದು ಸಂಭ್ರಮಿಸುತ್ತಾರೆ. ಅಂದು ವಿಶಾಲ ಕೊಡಗಿಗೆ ಒಬ್ಬ ಸಮರ್ಥ ರಾಜನ ನೇಮಕವಾಗುತ್ತದೆ. ಹಾಲೇರಿಯನ್ನು ಕೊಡಗಿನ ರಾಜಧಾನಿಯನ್ನಾಗಿ ಮಾಡಿಕೊಂಡು ಅಧಿಕಾರ ನಡೆಸುತ್ತಾನೆ. ಈತನಿಂದಲೇ ಇವನ ವಂಶದವರಿಗೆ 'ಹಾಲೇರಿ ಅರಸರು' ಎಂದು ಪ್ರಸಿದ್ಧವಾಗುತ್ತದೆ. ವೀರರಾಜ ಹಾಲೇರಿಯ ಮೂಲಪುರುಷನಾದರೂ ಅವನು ಎಷ್ಟು ವರ್ಷಗಳ

ಕಾಲ ಅಡಳಿತ ಮಾಡಿದ, ಯಾವಾಗ ಮರಣ ಹೊಂದಿದ ಎಂಬ ಬಗ್ಗೆ ಖಚಿತ ಮಾಹಿತಿ ತಿಳಿದುಬರುವುದಿಲ್ಲ.[೩೮]

**ಅಪ್ಪಾಜಿರಾಜ:** ವೀರರಾಜನ ಮರಣಾನಂತರ ಹಾಲೇರಿ ಸಂಸ್ಥಾನಕ್ಕೆ ಅಪ್ಪಾಜಿರಾಜ ಎಂಬುವವನು ಎರಡನೆಯ ಅರಸನಾಗುತ್ತಾನೆ. ರಾಜೇಂದ್ರನಾಮೆಯಲ್ಲಿ ಹಾಲೇರಿ ಅರಸರಲ್ಲಿ ಮೊದಲನೆಯ ಇಬ್ಬರು ವೀರರಾಜ ಮತ್ತು ಅಪ್ಪಾಜಿರಾಜ ಎಂದು ಕೊಟ್ಟಿದೆಯಲ್ಲದೆ, ಅವರು ಆಳಿದ ಕಾಲ ಮತ್ತು ಆಳ್ವಿಕೆಯ ಕಾಲದಲ್ಲಿ ನಡೆದ ಸಂಗತಿಗಳು ಯಾವುದನ್ನೂ ಕೊಟ್ಟಿರುವುದಿಲ್ಲ.

**ಮದ್ದುರಾಜ:** ಅಪ್ಪಾಜಿರಾಜನ ಮರಣಾನಂತರ ಮುದ್ದುರಾಜ ಹಾಲೇರಿ ಸಂಸ್ಥಾನಕ್ಕೆ ಅಧಿಕಾರಕ್ಕೆ ಬರುತ್ತಾನೆ. ಈ ರಾಜನಿಗೆ ಹಲವು ವರ್ಷಗಳವರೆಗೆ ಮಕ್ಕಳಾಗದೆ ಚಿಂತಿತನಾಗುತ್ತಾನೆ. ಹಲವು ವ್ರತಾಚರಣೆಯ ನಂತರ ಒಬ್ಬ ಮಗ ಹುಟ್ಟುತ್ತಾನೆ. ಅವನೇ ದೊಡ್ಡವೀರಪ್ಪ. ಮುಂದೆ ದೊಡ್ಡವೀರಪ್ಪ ಕೊಡಗಿನ ಅರಸನಾಗುತ್ತಾನೆ. ದಾಯಾದಿಗಳಿಲ್ಲದ್ದರಿಂದ ಹಾಗೂ ಸ್ವಭಾವತ: ಸೌಮ್ಯಗುಣವನ್ನು ಹೊಂದಿದ್ದರಿಂದ ಅವನ ಅಧಿಕಾರಕ್ಕೆ ಯಾವುದೇ ತೊಂದರೆಯಿರಲಿಲ್ಲ. ಹಾಗಾಗಿ ಸುಮಾರು ಐವತ್ನಾಲ್ಕು ವರ್ಷಗಳ ಕಾಲ ರಾಜ್ಯಭಾರ ಮಾಡುತ್ತಾನೆ. ಈತನ ಆಳ್ವಿಕೆಯಲ್ಲಿಯೇ ಮಡಿಕೇರಿ ಎಂದು ನಾಮಕರಣವಾಗುತ್ತದೆ. ಮಡಿಕೇರಿಯೆಂದು ಕರೆಯಲ್ಪಡುವ ಮುದ್ದುರಾಜಕೇರಿಯ ಸ್ಥಳ ಮಹಿಮೆಯನ್ನು ತಿಳಿದುಕೊಂಡು ಇಲ್ಲಿ ಒಂದು ಕೋಟೆಯನ್ನು ಕಟ್ಟಿಸಿ, ಹಾಲೇರಿಯಿಂದ ಮಡಿಕೇರಿಗೆ ತನ್ನ ಅಡಳಿತ ಯಂತ್ರವನ್ನು ವರ್ಗಾಯಿಸಿಕೊಳ್ಳುತ್ತಾನೆ. ಅಲ್ಲದೆ ಆಡಳಿತದ ದೃಷ್ಟಿಯಿಂದ ಕೊಡಗನ್ನು ಬೇರೆಬೇರೆ ನಾಡುಗಳನ್ನಾಗಿ ವಿಂಗಡಿಸಿಕೊಂಡು ಅತ್ಯಂತ ವ್ಯವಸ್ಥಿತವಾಗಿ ಆಳ್ವಿಕೆ ಮಾಡುತ್ತಾನೆ. ದೊಡ್ಡವೀರಪ್ಪನ ನಂತರ ಮುದ್ದುರಾಜನಿಗೆ ಅಪ್ಪಾಜಿ ಮತ್ತು ನಂದ ಎಂಬ ಇನ್ನಿಬ್ಬರು ಗಂಡು ಮಕ್ಕಳು ಹುಟ್ಟುತ್ತಾರೆ. ಇವರಿಗೆ ಅನುಕೂಲವಾಗಲೆಂದು ಹೊರಮಲೆನಾಡೆಂಬ ಮತ್ತೊಂದು ಜನವಸತಿ ಪ್ರದೇಶವನ್ನು ನಿರ್ಮಿಸಿಕೊಟ್ಟು, ತಾನು ವಿಶ್ರಾಂತಿ ಬಯಸಿ ತನ್ನ ಹಿರಿಯ ಮಗನಾದ ದೊಡ್ಡವೀರಪ್ಪನಿಗೆ ಆಡಳಿತ ಸೂತ್ರವನ್ನು ವಹಿಸುತ್ತಾನೆ.

**ದೊಡ್ಡ ವೀರಪ್ಪ:** ಕೊಡಗು ಒಂದು ರಾಜ್ಯವಾಗಿ ವಿಸ್ತರಣೆಗೊಂಡಿದ್ದು ದೊಡ್ಡವೀರರಾಜರ ಕಾಲದಲ್ಲಿ. ಇಕ್ಕೇರಿ ಸಂಸ್ಥಾನದೊಡನೆ ಭಾಂದವ್ಯ ಗಟ್ಟಿಮಾಡಿಕೊಂಡು ತಮ್ಮ ಅಧಿಕಾರದ ವ್ಯಾಪ್ತಿಯನ್ನು ನೀಲೇಶ್ವರದವರೆಗೆ ವಿಸ್ತರಿಸುತ್ತಾನೆ. ಅಷ್ಟು ಸುವ್ಯವಸ್ಥಿತವಾದ ಆಳ್ವಿಕೆ ಮಾಡಿದ 'ದೊಡ್ಡವೀರರಾಜನ ಕೊನೆಯ ವರ್ಷಗಳಲ್ಲಿ ಅವನ ವೈಯಕ್ತಿಕ ಬದುಕಿನಲ್ಲಿ ದುರಂತವೊಂದು ಮಗ ಅಪ್ಪಾಜಿರಾಜನಿಂದಾಗಿ ಸಂಭವಿಸುತ್ತದೆ'.[೩೯] ಕೆಲವು ಸಲ ಯೋಗ್ಯರಿಗೆ ಹೀಗೆ ಆಕಸ್ಮಿಕವಾಗಿ ಅವರ ವ್ಯಕ್ತಿತ್ವದ ಮೇಲೆ ಕಪ್ಪು ಚುಕ್ಕೆ ಬೀಳುವುದು ಅವರ ಕುಟುಂಬದಿಂದಲೇ ಎಂಬುದು ಇತಿಹಾಸದಿಂದ ಹಿಡಿದು ಇಂದಿನವರೆಗೂ ಕಾಣಬರುತ್ತದೆ.

ಮಗ ಅಪ್ಪಾಜಿರಾಜನ ದುಷ್ಕೃತ್ಯಕ್ಕೆ ಬೇಸತ್ತು ಕುಪಿತಗೊಂಡು ಅಪ್ಪಾಜಿರಾಜ ಹಾಗೂ ಆತನ ಪಟ್ಟದರಾಣಿ ನೀಲಾಂಬಿಕೆಯ ಮಗ ಚಿಕ್ಕವೀರಪ್ಪನನ್ನು ಸೆರೆಮನೆಗೆ ಹಾಕಿಸುತ್ತಾನೆ. ಹೀಗೆ

ಸೆರೆಮನೆಯಲ್ಲಿರುವಾಗಲೆ ಅಪ್ಪಾಜಿರಾಜ ಅನಾರೋಗ್ಯದಿಂದ ಸಾಯುತ್ತಾನೆ. ಕಾಲಕ್ರಮೇಣ ದೊಡ್ಡವೀರಪ್ಪ ಮರಣ ಹೊಂದಿದ ನಂತರ ಸೆರೆಮನೆಯಿಂದ ಬಿಡುಗಡೆಯಾದ ಚಿಕ್ಕವೀರಪ್ಪ ಕೊಡಗಿನ ಐದನೇ ರಾಜನಾಗುತ್ತಾನೆ. ಸೆರೆಮನೆಯಲ್ಲಿಯೇ ಬಾಲ್ಯವನ್ನು ಕಳೆದಿದ್ದ ಈತನಲ್ಲಿ ರಾಜಸಂಸ್ಕಾರ ಮರೆಯಾಗಿತ್ತು. ಅಲ್ಲದೆ ದುರ್ಬಲ ಮನಸ್ಸಿನಿಂದ ಕೂಡಿದ್ದು, ರೋಗ ಪೀಡಿತನಾಗಿದ್ದು, ಕಾಲಾನಂತರದಲ್ಲಿ ಮರಣಹೊಂದುತ್ತಾನೆ

ಚಿಕವೀರಪ್ಪನಿಗೆ ಮಕ್ಕಳಿಲ್ಲದಿದ್ದರಿಂದ 'ಕೊಡಗನ್ನು ಒಟ್ಟಾಗಿ ಆಳಿದವರು ಎರಡನೇ ಮುದ್ದುರಾಜ ಮತ್ತು ಹೊರಮಲೆನಾಡಿನ ಮುದ್ದಯ್ಯರಾಜ. ಇವರು ದೊಡ್ಡವೀರಪ್ಪರಾಜರ ಸಹೋದರ ಮಕ್ಕಳು'.[೪೦] ಇವರೀರ್ವರು ಕೇವಲ ನಾಲ್ಕು ವರ್ಷಗಳಷ್ಟೇ ಆಡಳಿತ ನಡೆಸುತ್ತಾರೆ. ಆನಂತರದಲ್ಲಿ ಕೊಡಗಿನ ಪಟ್ಟಕ್ಕಾಗಿ ಹೊರಮಲೆನಾಡಿನ ದೇವಪ್ಪರಾಜ ಮತ್ತು ಹಾಲೇರಿಯ ಲಿಂಗರಾಜೇಂದ್ರರ ನಡುವೆ ಪೈಪೋಟಿ ಪ್ರಾರಂಭವಾಗುತ್ತದೆ. ಇದರಲ್ಲಿ ಅಪಾರ ಜನಬೆಂಬಲವಿದ್ದ ದೇವಪ್ಪರಾಜ ಪಟ್ಟವೇರುತ್ತಾನೆ. ಅಪಮಾನಕ್ಕೊಳಗಾದ ಲಿಂಗರಾಜೇಂದ್ರ ಕುಟುಂಬ ಸಮೇತನಾಗಿ ಅಲ್ಲಿಂದ ಪಲಾಯನ ಮಾಡುತ್ತಾನೆ.

ಸೋತು ಹತಾಶನಾಗಿ ಅವಮಾನಿತನಾಗಿದ್ದ ಲಿಂಗರಾಜನಿಗೆ ಏನಾದರೂ ಮಾಡಿ ದೇವಪ್ಪನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂಬ ಉದ್ದೇಶದಿಂದ ಸಹಾಯ ಬೇಡಿ ಹೈದರಾಲಿಗೆ ಪತ್ರ ಬರೆದು, ಬೇಟಿ ಮಾಡುತ್ತಾನೆ. ಹೈದರಾಲಿಗೆ ಇದು ಅನುಕೂಲವೇ ಆಗಿತ್ತು. ಏಕೆಂದರೆ ಅದುವರೆಗೂ ಮೈಸೂರು ಸಂಸ್ಥಾನದವರಿಗೆ ಕೊಡಗಿನ ಮೇಲೆ ದಂಡೆತ್ತಿ ಹೋದಾಗ ಗೆಲುವು ದೊರೆತಿರಲಿಲ್ಲ. ಈಗ ಸ್ಥಳೀಯರ ನೆರವಿನಿಂದಲೆ ಕೊಡಗನ್ನು ಗೆಲ್ಲಬಹುದೆಂದು ಭಾವಿಸಿದ್ದನು. 'ಕೊಡಗಿಗೆ ಹಾಲೇರಿಯ ಅರಸರೇ ನ್ಯಾಯಬದ್ಧ ಹಕ್ಕುದಾರರು ಹೊರತು ಹೊರಮಲೆ ನಾಡಿನವರಲ್ಲ' ಎಂಬುದು ಲಿಂಗರಾಜೇಂದ್ರನ ತೀರ್ಮಾನವಾಗಿತ್ತು.

ಅದರಂತೆ ಮೈಸೂರಿನ ನವಾಬ ಹೈದರಾಲಿಯ ಸಹಕಾರದಿಂದ ಯುದ್ಧ ಮಾಡಲು ಸನ್ನದ್ದನಾಗಿ ಕೊಡಗನ್ನು ವಿವಿಧ ದಿಕ್ಕಿನಿಂದ ಪ್ರವೇಶಿಸಲು ತೀರ್ಮಾನಿಸಿ ಮುನ್ನುಗ್ಗಿದರು. ಇದರ ಸುಳಿವು ಪಡೆದುಕೊಂಡ ದೇವಪ್ಪರಾಜ ಯುದ್ಧವನ್ನು ಗೆಲ್ಲಲು ಸಾಧ್ಯವಾಗದೆ ಕೊಡಗಿನಿಂದ ಪಲಾಯನ ಮಾಡಿದ. ಕೊನೆಗೆ ಸಿಕ್ಕಿಬಿದ್ದ ದೇವಪ್ಪರಾಜನನ್ನು ಕೊಡಗಿಗೆ ಕರೆತಂದು ಅವನನ್ನೂ ಸೇರಿದ ಹಾಗೆ ಇಡೀ ಕುಟುಂಬವನ್ನು ಲಿಂಗರಾಜೇಂದ್ರ ಕೊಲ್ಲುತ್ತಾನೆ. ಇದರೊಂದಿಗೆ ಹೊರಮಲೆ ನಾಡು ವಂಶ ಅಂತ್ಯವಾಗುತ್ತದೆ.

**ಲಿಂಗರಾಜೇಂದ್ರ:** ಮುಂದೆ ಹೈದರಾಲಿಯ ಆದೇಶದಂತೆ ಲಿಂಗರಾಜೇಂದ್ರ ಕೊಡಗಿನ ರಾಜನಾಗುತ್ತಾನೆ. ಹೈದರ್ ಮತ್ತು ಲಿಂಗರಾಜೇಂದ್ರನ ನಡುವೆ ಮೈಸೂರು ಕೊಡಗು ಸಂಸ್ಥಾನಗಳು ಮಿತ್ರತ್ವದಿಂದಿರಬೇಕೆಂಬ ಒಪ್ಪಂದವಾಯಿತು. ಅಧಿಕಾರದ ರುಚಿ ಹತ್ತಿದ ಮೇಲೆ ಕೆಲವರ ವರ್ತನೆಗಳೇ ಬದಲಾಗುತ್ತವೆ. ಅದರಂತೆ ಲಿಂಗರಾಜನು ಅನೇಕ ಕ್ರೌರ್ಯಗಳಿಗೆ

ಕಾರಣಕರ್ತನಾಗುತ್ತಾನೆ. ಕೇವಲ ಐದು ವರ್ಷಗಳ ಅಧಿಕಾರ ನಡೆಸಿದ ಲಿಂಗರಾಜ ತನ್ನ ಮಕ್ಕಳು ಚಿಕ್ಕವರಿರುವಾಗಲೇ ಮರಣ ಹೊಂದುತ್ತಾನೆ.

ಲಿಂಗರಾಜೇಂದ್ರನ ಮರಣಾ ನಂತರ ಕೊಡಗು ನೇರವಾಗಿ ಹೈದರಾಲಿಯ ನಿಯಂತ್ರಣಕ್ಕೆ ಬರುತ್ತದೆ. ಈ ಸಮಯದಲ್ಲಿ ಸುಗಮವಾದ ಆಡಳಿತಕ್ಕೆ ಹೈದರಾಲಿಯು ಸುಬ್ಬರಸಯ್ಯನನ್ನು ಕೊಡಗಿನ ಅಮಲ್ದಾರನನ್ನಾಗಿ ನೇಮಿಸುತ್ತಾನೆ. ಆದರೆ ಇವನು ಮನಬಂದಂತೆ ವರ್ತಿಸುವ ಸರ್ವಾಧಿಕಾರಿಯಾಗಿ ಅನೇಕ ದುಷ್ಪಕಾರ್ಯಗಳನ್ನು ಮಾಡುತ್ತಾನೆ. ಇವನ ಈ ದುಷ್ಕೃತ್ಯಗಳ ಕುರಿತು ಹೈದರಾಲಿಗೆ ದೂರುಗಳು ಹೋದ ಮೇಲೆ ತಾನೇ ತನ್ನ ಸೈನ್ಯದೊಂದಿಗೆ ಕೊಡಗಿಗೆ ಬಂದು ಕೊಡಗಿನ ಅರಸ ನಾನೇ ಎಂದು ಸಾರುತ್ತಾನೆ. ಆದರೂ ಸುಬ್ಬರಸಯ್ಯನನ್ನೇ ಅಮಲ್ದಾರನಾಗಿ ಮುಂದುವರೆಸಿ ಅವನ ಕೈಕೆಳಗೆ ಕೆಲವು ಅಧಿಕಾರಿಗಳನ್ನು ನೇಮಿಸುತ್ತಾನೆ. ನಂತರ ಸುಬ್ಬರಸಯ್ಯ ಮತ್ತಷ್ಟೂ ಕ್ರೂರಿಯಾದ ಸರ್ವಾಧಿಕಾರಿಯಾಗುತ್ತಾನೆ. ಇದರಿಂದ ಕೆರಳಿದ ಕೊಡಗಿನ ಜನ ಇವನ ವಿರುದ್ಧ ದಂಗೆ ಏಳುತ್ತಾರೆ. ಇದರಿಂದ ಕುಪಿತಗೊಂಡ ಹೈದರಾಲಿಯು ಇದಕ್ಕೆಲ್ಲಾ ಕಾರಣ ಲಿಂಗರಾಜನ ಹೆಂಡತಿ ಮತ್ತು ಮಕ್ಕಳು ಕಾರಣರೆಂದು ತಿಳಿದು ಅವರನ್ನು ಬಂಧಿಸಿ ಶ್ರೀರಂಗಪಟ್ಟಣದಲ್ಲಿ ಸೆರೆಯಲ್ಲಿಟ್ಟು ಸುಬ್ಬರಸಯ್ಯನೆಂಬ ಪರಮನೀಚನು, ಪ್ರಜಾಕಂಟಕನನ್ನು ಅಮಲ್ದಾರನಾಗಿ ಮುಂದುವರೆಸುತ್ತಾನೆ. ಮುಂದೆ ಈತನ ಮಾತುಗಳಿಗೆ ಕೊಡಗಿನ ಯಾವ ಪ್ರಜೆಯೂ ಬೆಲೆ ಕೊಡದೆ ಇದ್ದುದರಿಂದ ಅರಾಜಕತೆ ಉಂಟಾಯಿತು.[೪೧] ಹೈದರಾಲಿ ಅರ್ಕಾಟಿನಲ್ಲಿ ವರ್ಷಗಟ್ಟಲೇ ಯುದ್ಧ ಮಾಡಬೇಕಾಗಿ ಬರುತ್ತದೆ. ಯುದ್ಧದಲ್ಲಾದ ಬೆನ್ನಿನ ಗಾಯಗಳಿಂದ ಚೇತರಿಸಿಕೊಳ್ಳಲಾಗದ ಹೈದರಾಲಿ ಮರಣ ಹೊಂದುತ್ತಾನೆ. ಹೈದರಾಲಿಯ ನಂತರದಲ್ಲಿ ಇವನ ಮಗ ಟಿಪ್ಪು ಮೈಸೂರಿನ ರಾಜನಾದ ಮೇಲೆ ಕೊಡಗಿಗೆ ಆಗಾಗ ಬಂದು ಹೋಗಿರುತ್ತಾನೆ. ಕೊಡಗಿನ ಪ್ರಾಕೃತಿಕ ಲಕ್ಷಣಗಳನ್ನು ಮೆಚ್ಚಿ ಮಡಿಕೇರಿಯ ಹಳೆಯ ಕೋಟೆಯನ್ನು ಪುನರ್ನಿರ್ಮಿಸುವ ಕಾರ್ಯಕ್ಕೆ ಮುಂದಾಗುತ್ತಾನೆ. ಇಂದಿಗೂ ಮಡಿಕೇರಿ ಕೋಟೆ ಆಕರ್ಷಣೀಯವಾದ ಕಟ್ಟಡವಾಗಿರುವುದನ್ನು ಗಮನಿಸಬಹುದು.

ಲಿಂಗರಾಜೇಂದ್ರನ ಹಿರಿಯ ಮಗ ದೊಡ್ಡವೀರರಾಜನನ್ನು ಪಿರಿಯಾಪಟ್ಟಣದ ಸೆರೆಮನೆಯಿಂದ ಬಿಡಿಸಿಕೊಂಡು ಬಂದವರು ಈತನನ್ನು ಮುಂದಿಟ್ಟುಕೊಂಡು ಟಿಪ್ಪುವಿನ ದಂಡನ್ನು ಓಡಿಸಲು ಎಲ್ಲ ಯೋಜನೆಗಳನ್ನು ರೂಪಿಸಿ ಯಶಸ್ವಿಯಾದರು. ಅಂದಿನಿಂದ ದೊಡ್ಡವೀರರಾಜ ಅಧಿಕಾರಕ್ಕೆ ಬಂದ ಮೇಲೆ ದೊಡ್ಡ ಪಡೆಯನ್ನೆ ಕಟ್ಟಿದ್ದ. ಆದರೆ ಮಡಿಕೇರಿ ಮಾತ್ರ ಟಿಪ್ಪುವಿನ ಅಧೀನದಲ್ಲಿಯೇ ಇತ್ತು. ಮೈಸೂರಿನಿಂದ ಮಂಗಳೂರಿಗೆ ಪ್ರಯಾಣ ಮಾಡಲು ಮಡಿಕೇರಿಯ ಮೂಲಕವಾದುದರಿಂದ ಮಡಿಕೇರಿ ಟಿಪ್ಪುವಿಗೆ ಬಹಳ ಮುಖ್ಯವಾಗಿತ್ತು. ಟಿಪ್ಪು ಮತ್ತು ದೊಡ್ಡವೀರರಾಜ ಸಂಬಂಧದಲ್ಲಿ ಭಾವಮೈದುನರಾಗುತ್ತಾರೆ. ಇದನ್ನೇ ಅಸ್ತ್ರವನ್ನಾಗಿಟ್ಟುಕೊಂಡು ಟಿಪ್ಪು ದೊಡ್ಡವೀರರಾಜನ ಸ್ನೇಹ ಹಸ್ತ ಚಾಚಿದನು. ಆದರೆ ಯಶಸ್ಸು ಸಿಗಲಿಲ್ಲ. ದೊಡ್ಡವೀರರಾಜ ಅಧಿಕಾರದಲ್ಲಿರುವಾಗ ಅನೇಕ ಪಾಪಕಾರ್ಯಗಳನ್ನು ಮಾಡಿದ್ದೇನೆಂಬ

ಭಾವನೆ ಮನಸ್ಸಿನಲ್ಲಿದ್ದುದರಿಂದ ಮಾನಸಿಕ ಕ್ಷೋಭೆಗೊಳಗಾಗಬೇಕಾಗಿ ಬಂತು. ಇದು ಯಾವ ವೈದ್ಯಕೀಯ ಚಿಕಿತ್ಸೆಗೂ ನಿಯಂತ್ರಣಕ್ಕೆ ಬಾರದೆ ಸಾಯುತ್ತಾನೆ. ಸಾಯುವಾಗ ತನ್ನ ಮಗಳು ದೇವಮ್ಮಾಜಿಯನ್ನು ಕೊಡಗಿನ ರಾಣಿಯನ್ನಾಗಿ ಮಾಡಬೇಕೆಂದು ಕಂಪೆನಿ ಸರ್ಕಾರವನ್ನು ಕೇಳಿಕೊಳ್ಳುತ್ತಾನೆ. ಅವನ ಆಸೆಯಂತೆ ದೇವಮ್ಮಾಜಿ ರಾಣಿಯಾಗುತ್ತಾಳೆ ದೊಡ್ಡವೀರರಾಜನ ತಮ್ಮ ಎರಡನೇ ಲಿಂಗರಾಜ ಅಧಿಕಾರದ ಕನಸನ್ನು ಕಂಡು ಕುತಂತ್ರದಿಂದ ದೇವಮ್ಮಾಜಿಯನ್ನು ಕೆಳಗಿಳಿಸಿ ತಾನೇ ಕೊಡಗಿನ ಅರಸನಾಗುತ್ತಾನೆ.

**ಎರಡನೇ ಲಿಂಗರಾಜ:** ಈತ ಅಧಿಕಾರ ವಹಿಸಿಕೊಂಡಮೇಲೆ ವಿರೋಧಿಗಳೆಂದು ಕಂಡು ಬಂದರೆ ಅವರನ್ನು ಕ್ರೂರವಾಗಿ ಶಿಕ್ಷಿಸುವುದರೊಂದಿಗೆ ಸಾಮಾನ್ಯ ಜನರಿಗೆ ಹಾಗೂ ರೈತರಿಗೆ ಅನುಕೂಲಕರವಾದ ರೀತಿಯಲ್ಲಿ ಆಡಳಿತ ನಡೆಸುತ್ತಾನೆ. ಕವಿಯೂ ಸಂಸ್ಕೃತ ಪಂಡಿತನೂ ಅಗಿದ್ದ ಈತ ಕೊಡಗಿನ ಆಡಳಿತ ಇತಿಹಾಸ ಮುಂತಾದವುಗಳ ಕುರಿತು 'ಹುಕುಂನಾಮೆ'ಗಳನ್ನು ಬರೆಸಿದ್ದಾನೆ. ಇವನ ಕಾಲದಲ್ಲಿ ಕೊಡಗಿನಲ್ಲಿ ಯುದ್ಧಗಳೇ ನಡೆಯಲಿಲ್ಲ. 'ಹುಕುಂನಾಮೆ'ಗಳ ಮೂಲಕ ಆಡಳಿತವನ್ನು ಮತ್ತು ಕಂದಾಯ ವ್ಯವಸ್ಥೆಯನ್ನು ಸುಧಾರಿಸುತ್ತಾನೆ. ಅವನ ಭೂಕಂದಾಯ ಕ್ರಮವು 'ಲಿಂಗರಾಜನ ಶಿಸ್ತು' ಎಂದೇ ಪ್ರಸಿದ್ಧವಾಗುತ್ತದೆ.[೪೨] ಹೀಗಿದ್ದ ರಾಜ ಮುಂದೊಂದು ದಿನ ಕೊಲೆ ಮಾಡುವಂತಹ ದುಷ್ಟ ಕಾರ್ಯಕ್ಕೂ ಮುಂದಾಗುವುದು ಅಚ್ಚರಿ ಹುಟ್ಟಿಸುತ್ತದೆ.

ಸಾಮಾನ್ಯ ಜನರ ಮನಸ್ಸಿನಲ್ಲಿ ನೆಲೆನಿಂತಿದ್ದ ಲಿಂಗರಾಜೇಂದ್ರ ಮಡಿಕೇರಿಯ ಸುಬ್ಬರಸಯ್ಯ ಮಾಡಿದ ಒಂದು ಉತ್ತಮ ಕಾರ್ಯವನ್ನು ವಿರೋಧಿಸಿ, 'ರಾಜನ ಗಮನಕ್ಕೆ ತಾರದೆ ನೀನು ರಾಜವಿರೋಧಿಯಾಗಿ ವರ್ತಿಸಿದ್ದೀಯ' ಎಂದು ಆತನ ಜೊತೆ ಅವನ ಮಕ್ಕಳನ್ನೂ ಕೊಲ್ಲಿಸುತ್ತಾನೆ. ಇದಾದ ಕೆಲವೇ ದಿನಗಳಲ್ಲಿ ರಾಜ ಅನೇಕ ಸಮಸ್ಯೆಗಳಿಗೊಳಗಾಗುತ್ತಾನೆ. ಈ ಎಲ್ಲಾ ಸಮಸ್ಯೆಗಳಿಗೆ ಹಿಂದೆ ಮಾಡಿ ಹೀನಕೃತ್ಯಗಳೇ ಕಾರಣವೆಂದು ಬಣ್ಣಿಸಲಾಗುತ್ತದೆ. ಮುಂದೆ ಮತಿಭ್ರಮಣೆಗೂ ಒಳಗಾದ ರಾಜ ಯಾವುದೇ ಚಿಕಿತ್ಸೆ ಹಾಗೂ ದೈವಿಕ ಶಕ್ತಿಗೂ ಸ್ಪಂದಿಸಲಿಲ್ಲ. ಪರಿಹಾರಾರ್ಥವಾಗಿ ಶಿವದೇವಾಲಯ ನಿರ್ಮಾಣದ ಪ್ರಸ್ತಾಪ ರಾಜಪುರೋಹಿತರಿಂದ ತಿಳಿಯಲ್ಪಡುತ್ತದೆ. ಈ ಕಾರಣದಿಂದ ಲಿಂಗರಾಜನ ಕಾಲದಲ್ಲಿಯೇ ಮಡಿಕೇರಿಯ ಪ್ರಸಿದ್ಧ ಓಂಕಾರೇಶ್ವರ ದೇವಾಲಯವೂ ಸ್ಥಾಪನೆಯಾಗುತ್ತದೆ. ಆದರೂ ರಾಜನ ಮನೋರೋಗ ವಾಸಿಯಾಗದೆ ಕೊನೆಯುಸಿರೆಳೆಯುತ್ತಾನೆ.

**ಚಿಕವೀರರಾಜ:** ಎರಡನೇ ಲಿಂಗರಾಜನ ನಿಧನಾನಂತರ ಇವನ ಮಗ ಚಿಕ್ಕವೀರರಾಜ ಕೊಡಗಿನ ಅರಸನಾಗಿ ಅಧಿಕಾರದ ಚುಕ್ಕಾಣಿಯನ್ನು ಹಿಡಿಯುತ್ತಾನೆ. ಈತನೇ ಕೊಡಗಿನ ಕೊನೆಯ ಅರಸ. ಇವನ ನಂತರ ಕೊಡಗಿನಲ್ಲಿ ಬ್ರಿಟೀಷರ ಆಳ್ವಿಕೆ ಶುರುವಾಗುತ್ತದೆ. ಚಿಕವೀರರಾಜ ಕೊಡಗಿಗೆ ಕೀರ್ತಿತರಲಿಲ್ಲವೆಂದು ಹೇಳಲಾಗುತ್ತದೆ.[೪೩] ಚಿಕ್ಕವೀರರಾಜ ಅತ್ಯಂತ ದುರಹಂಕಾರಿಯೂ, ಕ್ರೂರಿಯೂ, ಅಸೂಯಾಪರನು ಆಗಿದ್ದನು ಎನ್ನಲಾಗಿದೆ.[೪೪] ತನ್ನ ತಂದೆಯ ಆಸ್ಥಾನದಲ್ಲಿದ್ದಂತಹ

ಕೆಲವು ಕೀಳುಮಟ್ಟದ ಜನರು ಇವನೊಂದಿಗೂ ಇದ್ದರು. ಈತನು ಪಟ್ಟವೇರಿದ ಮೇಲೆಯೂ ಅಂಥವರಿಂದಲೇ ಸುತ್ತುವರಿಯಲ್ಪಟ್ಟಿದ್ದನು. ಹಾಗಾಗಿ ಇಂಥಹ ಸ್ವಭಾವ ಚಿಕ್ಕವೀರರಾಜನಲ್ಲಿ ಸಹಜವಾಗಿ ಬಂದಿರಬಹುದು. ಅಥವಾ ತಾನು ರಾಜನಾಗಿ ಏನು ಮಾಡಿದರೂ ಆಗುತ್ತದೆ ಎಂಬ ಪರಂಪರೆಯ ಅರಿವಿರಬಹುದು. ಐ.ಮಾ ಮುತ್ತಣ್ಣನವರ ಗೌರಮ್ಮ ಕವನದಲ್ಲಿ ಚಿಕವೀರರಾಜನ ಆಡಳಿತದ ವೈಭವ, ಆತ ಎದುರಿಸಿದ ಸಂಕಷ್ಟಗಳು, ದೌರ್ಬಲ್ಯ, ಪತನ, ಪತನಾನಂತರ ಗಡಿಪಾರು, ಕಾಶಿವಾಸ ಹಾಗೂ ಇಂಗ್ಲೆಂಡ್ ವಾಸ ಮೊದಲಾದವುಗಳನ್ನು ಕಟ್ಟಿಕೊಡಲಾಗಿದೆ.[೪೪೨]

ಮುಂದೆ ತನ್ನ ಸ್ಥಾನಕ್ಕೆ ಕುತ್ತು ಬರಬಹುದೆಂದು ಭಾವಿಸಿ ತನ್ನ ಕುಟುಂಬದ ಸದಸ್ಯರೆಲ್ಲರನ್ನು ಕೊಲ್ಲಿಸುತ್ತಾನೆ. ಅತ್ಯಂತ ಕ್ರೌರ್ಯದ ಪರಮಾವದಿಯನ್ನು ತಲುಪಿ ವಿಚಿತ್ರ ನಡವಳಿಕೆಗೆ ಪ್ರಸಿದ್ಧಿಯಾಗುತ್ತಾನೆ. ಚಿಕವೀರರಾಜ ದುರಾಸೆ, ಅತಿಕಾಮುಕತನ ಹೊಂದಿದ್ದು, ಅವನ ದುರಂತಕ್ಕೆ ಕಾರಣವಾಗಿರಬಹುದು. ಅಲ್ಲದೆ ತಾನು ತನ್ನ ಮಂತ್ರಿಯಾಗಿ ಕುಂಟಬಸವನೆಂದೇ ಖ್ಯಾತಿಪಡೆದಿದ್ದ ಕುತಂತ್ರ ಮಂತ್ರಿಯನ್ನು ನೇಮಿಸಿಕೊಳ್ಳುತ್ತಾನೆ. ಚಿಕವೀರರಾಜನ ಎಲ್ಲಾ ದುರಾಚಾರಗಳಿಗೆ ಕುಮ್ಮಕ್ಕು ನೀಡಿದವನು ಕುಂಟಬಸವನೆಂದು ತಿಳಿದು ಬರುತ್ತದೆ. ಕುಂಟಬಸವನೆಂಬ ಒಬ್ಬ ಕೆಳಜಾತಿಯ ಮನುಷ್ಯನನ್ನು ಮಂತ್ರಿ ಮಾಡಿದ್ದು ಆ ಕಾಲಕ್ಕೆ ಚಿಕ್ಕವೀರರಾಜನ ಔದಾರ್ಯವೇ ಆಗುತ್ತದೆ. 'ದಿವಾನನಾಗಿದ್ದ ಕುಂಟಬಸವ ಅನ್ಯಾಯ, ಅಕ್ರಮಗಳನ್ನು ಮಾಡುತ್ತಿದ್ದುದೇ ರಾಜರ ಒಳಿತಿಗಾಗಿ, ಅದರೆ ಅದು ಕೆಡುಕಾಗಿ ಪರಿಣಮಿಸುತ್ತಿತ್ತು'.[೪೫] ಕೊಡಗಿಗೆ ಬ್ರಿಟೀಷರು ಚಿಕ್ಕವೀರರಾಜನ ಅತಿಥಿಗಳಾಗಿ ಬೇಟೆಗೆಂದು ಆಗಾಗ ಕೊಡಗಿಗೆ ಬರುತ್ತಿದ್ದರು. ಆಗ ಕೊಡಗಿನ ಹಿತಕರವಾದ ತಂಪು ಹವೆ, ಕಾಫಿ ಬೆಳೆಗೆ ಅನುಕೂಲವಾದ, ಫಲವತ್ತಾದ ಮಣ್ಣು ಇವುಗಳನ್ನು ಕಂಡಾಗ ಅವರಿಗೆ ಕೊಡಗನ್ನು ತಮ್ಮ ವಶಕ್ಕೆ ತೆಗೆದುಕೊಳ್ಳಬೇಕೆಂಬ ಬಯಕೆ ಹುಟ್ಟಿರಬಹುದು. ಅಲ್ಲದೆ ಕುಂಟಬಸವನ ಕುತಂತ್ರಗಳಿಂದಾಗಿ ರಾಜನ ಮೇಲೆ ಸ್ಥಳೀಯರಿಂದ ಬ್ರಿಟೀಷರಿಗೆ ದೂರುಗಳು ಹೋಗುತ್ತಿದ್ದವು. ಇದು ರಾಜನಲ್ಲಿ ಭೀತಿಯನ್ನುಂಟುಮಾಡಿತು. ಇದನ್ನು ಅರಿತ ರಾಜ ಯಾವ ಸಮಯದಲ್ಲಾದರೂ ನಮ್ಮ ಮೇಲೆ ದಾಳಿ ನಡೆಯಬಹುದೆಂದು ತಿಳಿದು ಸೇನೆಯನ್ನು ಸದಾ ಸಿದ್ಧವಿಟ್ಟಿರುತ್ತಿದ್ದನು. ರಾಜನ ನಿರೀಕ್ಷೆಯಂತೆಯೆ ಕರ್ನಲ್ ಪ್ರೇಸರನ ನೇತೃತ್ವದಲ್ಲಿ ಕೊಡಗಿನ ಮೇಲೆ ದಾಳಿ ನಡೆಯುತ್ತದೆ.

ಕೊಡಗಿನಿಂದ ಎಷ್ಟೇ ಪ್ರತಿರೋಧವಿದ್ದರೂ ಕಂಪೆನಿ ಸರ್ಕಾರ ಕೊಡಗನ್ನು ನಾಲ್ಕೂ ದಿಕ್ಕಿನಿಂದ ಆಕ್ರಮಿಸಿತು. ಸುಮಾರು ಅರು ಸಾವಿರ ಸೈನಿಕರು ಏಕಕಾಲದಲ್ಲಿ ಕೊಡಗಿನ ಸುತ್ತಲೂ ಆಕ್ರಮಣ ಮಾಡಿದರು. ಕೊನೆಗೆ ಸೋಲಿನ ಭೀತಿಯಿಂದ ಹಾಗೂ ಕುಂಟಬಸವನ ತಂತ್ರದಿಂದ ಚಿಕ್ಕವೀರರಾಜ ರಾಜಿಸಂಧಾನಕ್ಕೆ ಮುಂದಾಗುತ್ತಾನೆ. ಸಂಧಾನಕ್ಕೊಪ್ಪಿದ ಬ್ರಿಟೀಷರು ಚಿಕ್ಕವೀರರಾಜ ಕೊಡಗಿನಲ್ಲಿಯೇ ಇದ್ದರೆ ಕೊಡಗರು ರಾಜನ ಪರವಾಗಿ ದಂಗೆಯೇಳುವ ಸಾಧ್ಯತೆಯಿದೆ ಎಂದು ಅರಿತು ಚಿಕ್ಕವೀರರಾಜನನ್ನು ಕಾಶಿಗೆ ಕಳುಹಿಸುವ ಏರ್ಪಾಡು ಮಾಡುತ್ತಾರೆ. ಕೆಲವು ವರ್ಷಗಳ ಕಾಶೀವಾಸದ ನಂತರ ಚಿಕ್ಕವೀರರಾಜ ತನ್ನ ಕುಟುಂಬದೊಂದಿಗೆ ಇಂಗ್ಲೆಂಡ್‌ಗೆ ಹೋಗಿ ನೆಲೆಸಿ

ಅಲ್ಲಿಯೇ ಮರಣ ಹೊಂದುತ್ತಾನೆ. ಅವನ ಬಯಕೆಯಂತೆಯೇ ರಾಜನ ಶವವನ್ನು ಕಾಶಿಗೆ ತಂದು ಸಂಸ್ಕಾರ ಮಾಡಲಾಗುತ್ತದೆ.

### ೨.೨.೨. ಬ್ರಿಟೀಷರ ಆಳ್ವಿಕೆ

ಚಿಕವೀರರಾಜನ ಸೈನ್ಯ ಬ್ರಿಟೀಷರೊಡನೆ ಹೋರಾಡಲು ಶಕ್ತವಾಗಿರಲಿಲ್ಲದ್ದರ ಜೊತೆಗೆ ಈ ಯುದ್ಧಕ್ಕೆ ಕೊಡಗಿನ ಪ್ರಜೆಗಳ ಒಮ್ಮತವಿಲ್ಲದಿದ್ದುದು ರಾಜನಿಗೆ ತಿಳಿದಿತ್ತು ಎನಿಸುತ್ತದೆ. ಕೊಡಗಿನ ಮೇಲೆ ಇಂಗ್ಲೀಷರ ಸೇನೆ ಮುತ್ತಿಗೆ ಹಾಕಿದಾಗ ಚಿಕ್ಕವೀರರಾಜನು ತಾನು ಸೋತರೆ ಅದು ನನಗೆ ಅವಮಾನವೆಂಬುದನ್ನು ಅರಿತು ಮತ್ತು ಆತನಿಗೆ ಯುದ್ಧಕ್ಕಿಂತ ಜೀವ ಉಳಿಸಿಕೊಳ್ಳುವುದೇ ಮುಖ್ಯವಾಗಿದ್ದುದರಿಂದ ಸಂಧಾನ ಮಾಡಿಕೊಳ್ಳುವಲ್ಲಿ ಯಶಸ್ವಿಯಾಗುತ್ತಾನೆ. ಚಿಕ್ಕವೀರರಾಜನ ಪದಚ್ಯುತಿಯ ನಂತರ ೧೮೩೪ರಲ್ಲಿ ಇಡೀ ಕೊಡಗು ಬ್ರಿಟೀಷರ ನಿಯಂತ್ರಣಕ್ಕೆ ಒಳಪಡುತ್ತದೆ. ಇವರ ಕಾಲದಲ್ಲೂ ಹಿಂದೆ ರಾಜರ ಕಾಲದಲ್ಲಿದ್ದಂತೆ ಭೂಹಿಡುವಳಿಗಳು ಮುಂದುವರೆದವು. ಬ್ರಿಟೀಷರು ಅಧಿಕಾರಕ್ಕೆ ಬಂದ ನಂತರ ಮೊದಲು ಮಾಡಿದ ಮುಖ್ಯ ಕೆಲಸವೆಂದರೆ ಕೊಡಗಿನಲ್ಲಿ ಅದುವರೆಗಿದ್ದ ಕೆಲಸದಾಳುಗಳ ಗುಲಾಮಗಿರಿಯನ್ನು ನಿಷೇಧಿಸಿದುದು. ಚಿಕವೀರರಾಜನ ಕಾಲದಲ್ಲೇ ಸುಮಾರು ಆರು ಸಾವಿರಕ್ಕೂ ಹೆಚ್ಚು ಜಮ್ಮದಾಳುಗಳಿದ್ದರು ಎಂದು ತಿಳಿದು ಬರುತ್ತದೆ.[೪೫೨]

ಜನರಲ್ ಫ್ರೇಸರನು ಕೊಡಗಿನಲ್ಲಿ ಕಂಪೆನಿ ಸರ್ಕಾರದ ಮುಖ್ಯ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಾನೆ. ಕಂಪೆನಿ ಸರ್ಕಾರದ ಅಧಿಕಾರಿಯಾಗಿ ಬ್ರಿಟೀಷರೇ ನೇಮಕಗೊಂಡಿದ್ದರೂ, ದಿವಾನರಾಗಿ 'ಕೊಡವರೇ' ನೇಮಕಗೊಂಡಿದ್ದರು. ಸ್ಥಳೀಯರ ಸಹಕಾರವಿಲ್ಲದೆ ಆಡಳಿತ ನಡೆಸಲು ಸಾಧ್ಯವೇ ಇಲ್ಲ ಎಂಬ ಅರಿವು ಬ್ರಿಟೀಷರಿಗಿತ್ತು. ಕೊಡವರು ಬ್ರಿಟೀಷರ ಅಣತಿಯಂತೆ ಕರ್ತವ್ಯ ನಿರ್ವಹಿಸಿ ಅವರ ನಂಬಿಕೆಯನ್ನು ಗಳಿಸಿದರು.

ಕೊಡಗು ಬ್ರಿಟೀಷರ ಆಳ್ವಿಕೆಗೊಳಪಟ್ಟಿದ್ದು ಕೆಲವು ಸ್ಥಳೀಯರಿಗೆ ಅಸಮಾಧಾನವುಂಟು ಮಾಡಿತು. ಆದರೂ ಅನಿವಾರ್ಯವಾಗಿ ಅವರೊಂದಿಗೆ ಅನುಸರಿಸಿಕೊಂಡು ಜೀವನ ನಡೆಸಿಕೊಂಡು ಹೋಗುತ್ತಿದ್ದರು. ಇಂಥ ಸಂದರ್ಭದಲ್ಲಿ ಕೊಡಗು, ಸುಳ್ಯ, ಮಾಗಣೆ ಮೊದಲಾದ ಸ್ಥಳಗಳಲ್ಲಿ ಕಾಣಿಸಿಕೊಳ್ಳುತ್ತಿದ್ದ ಹಾಗೂ ದೊಡ್ಡವೀರಪ್ಪನ ಮಕ್ಕಳು ಎಂದು ಹೇಳಲ್ಪಡುತ್ತಿದ್ದ ಅಪರಂಪಾರ ಸ್ವಾಮಿ ಮತ್ತು ಕಲ್ಯಾಣ ಸ್ವಾಮಿಯೆಂಬ ವೀರರು ಕೊಡಗನ್ನು ಬ್ರಿಟೀಷರಿಂದ ಮುಕ್ತಿಗೊಳಿಸಿಕೊಡಬೇಕೆಂದು ಹಂಬಲಿಸುತ್ತಿದ್ದರು. ಅದಕ್ಕೆ ಬೇಕಾದ ಎಲ್ಲಾ ರೀತಿಯ ಯೋಜನೆಗಳನ್ನು ರಹಸ್ಯವಾಗಿ ಮಾಡುತ್ತಿದ್ದರು. ಅಪರಂಪಾರ ಮತ್ತು ಕಲ್ಯಾಣ ಸ್ವಾಮಿಯ ಉದ್ದೇಶ ಕೊಡಗಿನಿಂದ ಇಂಗ್ಲೀಷರನ್ನು ಓಡಿಸಿ ಮತ್ತೆ ಹಾಲೇರಿ ವಂಶಸ್ಥರಿಗೆ ಅಧಿಕಾರ ವಹಿಸಿಕೊಡುವುದೇ ಆಗಿತ್ತು. ಆ ನಿಟ್ಟಿನಲ್ಲಿ ಇವರಿಬ್ಬರೂ ಜಂಗಮವೇಷಧಾರಿಗಳಾಗಿ ಕೊಡಗಿನ

ಜನರನ್ನು ಸಂಘಟಿಸುವುದರ ಜೊತೆಗೆ ಬ್ರಿಟೀಷರು ಕೊಡಗಿಗೆ ಮಾಡಿರುವ, ಮಾಡುತ್ತಿರುವ ಅನ್ಯಾಯದ ಬಗ್ಗೆ ಮನದಟ್ಟು ಮಾಡುತ್ತಾರೆ.

ಬ್ರಿಟೀಷರ ಕಾಲದಲ್ಲಿ ಕೊಡಗಿನ ದಿವಾನನಾಗಿದ್ದ ಬೋಪು 'ಕೊಡಗನ್ನು ಹರಿವಾಣದಲ್ಲಿಟ್ಟು ಇಂಗ್ಲೀಷರಿಗೆ ಕೊಟ್ಟು ಬಿಟ್ಟ ಎಂದು ಕಲ್ಯಾಣಪ್ಪ ನೊಂದುಕೊಂಡಿದ್ದ'[೪೬] ಬ್ರಿಟೀಷರನ್ನು ಎದುರಿಸಲು ಕೊಡಗಿನಲ್ಲಿ ಕೆಲವು ವಿಧ್ವಂಸಕ ಕೃತ್ಯಗಳನ್ನು ಎಸಗುತ್ತಾರೆ. ಇವರ ಹೋರಾಟದ ಮಹತ್ವವನ್ನು ಅರಿಯದ ಕೊಡಗರು ನಂಬಿಕೆ ಕಳೆದು ಕೊಳ್ಳುತ್ತಾರೆ. ಅಪರಂಪಾರ ಮತ್ತು ಕಲ್ಯಾಣಸ್ವಾಮಿ ಬ್ರಿಟೀಷರ ವಿರುದ್ಧ ಜನರನ್ನು ಎತ್ತಿಕಟ್ಟುತ್ತಿರುವ ವಿಷಯ ತಿಳಿದ ಅವರು ಇವರಿಬ್ಬರ ಮೇಲೆ ಕಣ್ಣಿಟ್ಟಿದ್ದರು. ಹಾಗಾಗಿ ಬೋಪುವಿನ ಸೈನಿಕರು ಇವರಿಬ್ಬರ ಬೇಟೆಗೆ ಹೊರಟರು. ದಾರಿಯಲ್ಲಿ ಸಿಕ್ಕಸಿಕ್ಕ ಜಂಗಮ ವೇಷಧಾರಿಗಳನ್ನು ಬಂಧಿಸುವ ಮೂಲಕ ಇವರನ್ನೂ ಸೆರೆಹಿಡಿದರು. ಅಪರಂಪಾರ ಮತ್ತು ಕಲ್ಯಾಣ ಸ್ವಾಮಿಯ ಹೋರಾಟಕ್ಕೆ ಕೊಡಗಿನಲ್ಲಿ ಉತ್ತಮ ಬೆಂಬಲ ದೊರೆಯದಿದ್ದುದೇ ಅವರ ಸೋಲಿಗೆ ಕಾರಣವಾಯ್ತು. ಕಲ್ಯಾಣಸ್ವಾಮಿಯನ್ನು ಮಂಗಳೂರಿನಲ್ಲಿ ಕೊಲ್ಲುತ್ತಾರೆ. ಅಪರಂಪಾರ ಮೈಸೂರಿಗೆ ಕರೆತರುವಾಗ ಮಾರ್ಗಮಧ್ಯ ಮರಣಹೊಂದುತ್ತಾನೆ.

ಬ್ರಿಟೀಷರ ಆಳ್ವಿಕೆಯಲ್ಲಿ ಕೊಡಗಿನಲ್ಲಿ ಶೈಕ್ಷಣಿಕವಾಗಿ, ಸಾಮಾಜಿಕವಾಗಿ ಸಾಕಷ್ಟು ಬದಲಾವಣೆಗಳಾಗುತ್ತವೆ. ಅಲ್ಲಿಯವರೆಗೆ ರಾಜರುಗಳು ತಮ್ಮ ಮಕ್ಕಳಿಗೆ ವಿದ್ಯಾಭ್ಯಾಸ ಹೇಳಿಕೊಡಲು ಮೌಲ್ವಿಗಳನ್ನು ನೇಮಿಸಿಕೊಂಡಿದ್ದರು. ೧೮೩೪ರಲ್ಲಿ ಜನರಲ್ ಪ್ರೇಸರನು ತನ್ನ ಸ್ವಂತ ಖರ್ಚಿನಲ್ಲಿ ಅಂದಿನ ಪ್ರೇಸರ್ ಪೇಟೆ(ಕುಶಾಲನಗರ)ಯಲ್ಲಿ ಒಂದು ಕನ್ನಡ ಶಾಲೆಯನ್ನು ಪ್ರಾರಂಭಿಸಲು ಏರ್ಪಾಡು ಮಾಡಿದ್ದನು. ಅದೇ ವರ್ಷದಲ್ಲಿ ವೀರರಾಜಪೇಟೆಯಲ್ಲಿ ಕನ್ನಡ ಮತ್ತು ಇಂಗ್ಲೀಷ್ ಕಲಿಯಲು ಅನುಕೂಲವಾಗುವಂತೆ ಪ್ರಾಥಮಿಕ ಶಾಲೆಗಳನ್ನೂ ಹಾಗೂ ಹುದಿಕೇರಿಯಲ್ಲಿ ಒಂದು ಕನ್ನಡ ಶಾಲೆಯನ್ನು ಸರಕಾರದ ವತಿಯಿಂದಲೇ ಸ್ಥಾಪಿಸಿರುವುದು ತಿಳಿದುಬರುತ್ತದೆ.[೪೭] ಹಲವು ಶೈಕ್ಷಣಿಕ ಸಂಸ್ಥೆಗಳು ಸ್ಥಾಪನೆಯಾಗಿ ಕಲಿಯುವ ಹುಮ್ಮಸ್ಸಿರುವವರಿಗೆ ಅನುಕೂಲವಾಯಿತು, ಬಹುಶಃ ಬ್ರಿಟೀಷರು ಭಾರತದಲ್ಲಿ ಶಿಕ್ಷಣದ ಸಾರ್ವತ್ರೀಕರಣ ಮಾಡಿದ್ದರಿಂದ ಈ ಸಮಯದಲ್ಲಿ ಎಲ್ಲಾ ವರ್ಗದ ಜನರು ಶಿಕ್ಷಣವನ್ನು ಪಡೆಯುವಂತಾಯಿತು. "ಬ್ರಿಟೀಷರ ಆಳ್ವಿಕೆಯಲ್ಲಿ ಕೊಡಗಿನಲ್ಲಿ ವಿದ್ಯಾಪ್ರಚಾರ ಚೆನ್ನಾಗಿ ನಡೆಯಿತು. ವಿದ್ಯೆಯನ್ನು ಕಲಿಯಬೇಕೆಂಬ ಉತ್ಸಾಹ ಜನರಲ್ಲಿ ಹೆಚ್ಚಾದುದಲ್ಲದೆ, ಇಲ್ಲಿರುವ ಬಹುತೇಕ ವಿದ್ಯಾಸಂಸ್ಥೆಗಳು ಆ ಸಮಯದಲ್ಲಿ ಜನರ ಉದಾರತೆಯಿಂದ ರೂಪುಗೊಂಡವು."[೪೮] ಇದರ ಪ್ರಯೋಜನವನ್ನು ಪಡೆದವರಲ್ಲಿ ಕೊಡವರೇ ಹೆಚ್ಚು. ಇಂಗ್ಲೀಷ್ ಶಿಕ್ಷಣವನ್ನು ಪಡೆದು ಬ್ರಿಟೀಷರ ಕೈಕೆಳಗೆ ಅಧಿಕಾರಿಗಳಾಗಿ ದುಡಿಯುವ ಅವಕಾಶಗಳನ್ನು ಪಡೆದುಕೊಂಡು ಸ್ವಾಮಿನಿಷ್ಠೆಯನ್ನೂ ಪ್ರದರ್ಶಿಸಿದರು. ಆದರೂ ಕೊಡವ ಉದ್ಯೋಗಸ್ಥರು ಹೆಚ್ಚು ಶಾಲೆಗಳನ್ನು ತೆರೆಯುವುದರ ವಿರೋಧವಿದ್ದರು ಎಂದು ತಿಳಿದು ಬರುತ್ತದೆ. ಬಹುಶ: ಎಲ್ಲರೂ ಶಿಕ್ಷಣ ಪಡೆದರೆ ನಮ್ಮ ನೌಕರಿಗೆ

ಕುತ್ತು ಬೀಳಬಹುದು ಎಂಬ ಭಯವೋ ಅಥವಾ ಬೇರೆಯವರು ವಿದ್ಯಾವಂತರಾದರೆ ನಮ್ಮ ಮಾತನ್ನು ಕೇಳುವುದಿಲ್ಲವೆಂಬ ಅನುಮಾನವೋ ಇದ್ದಿರಬಹುದು. ಆ ಕಾರಣಕ್ಕಾಗಿಯೆ ೧೮೫೫ರಲ್ಲಿ ಮಡಿಕೇರಿಯಲ್ಲಿ ಸ್ಥಾಪಿಸಿದ ಲೋವರ್ ಸೆಕೆಂಡರಿ ಶಾಲೆಗೆ ವಿರೋಧ ವ್ಯಕ್ತಪಡಿಸಿದರು. ಆದರೂ ಇವರೆಲ್ಲರ ವಿರೋಧದ ನಡುವೆಯೂ ಕೊಳುವಂಡ ಕಾರ್ಯಪ್ಪ ಎಂಬ ಹುಡುಗ ಶಾಲೆಗೆ ಸೇರುತ್ತಾನೆ. ವಿದ್ಯಾಭ್ಯಾಸದ ನಂತರ ಕೊಡಗಿನ ಸರಕಾರದಲ್ಲಿ ಉನ್ನತ ಪದವಿಯನ್ನು ಪಡೆಯುತ್ತಾನೆ.[೪೯]

ಕೊಡಗಿನಲ್ಲಿ ಬ್ರಿಟೀಷರ ಆಳ್ವಿಕೆ ೧೮೩೪ರಿಂದ ೧೯೪೭ ರವರೆಗೂ ಇರುತ್ತದೆ. ಬ್ರಿಟೀಷರು ನಿರ್ಗಮಿಸಿದ ಮೇಲೆ ಭಾರತ ಸ್ವತಂತ್ರವಾಗುತ್ತದೆ. ಅಂದು ಕೊಡಗೂ ಸಹ ಪ್ರತ್ಯೇಕ ರಾಜ್ಯವಾಗಿ ಮುಂದುವರೆಯುತ್ತದೆ. ೧೯೫೧ರಲ್ಲಿ ಕೊಡಗು 'ಸಿ' ವರ್ಗದ ರಾಜ್ಯವಾಗಿ ಘೋಷಿಸಲ್ಪಟ್ಟು, ೧೯೫೬ರಲ್ಲಿ ವಿಶಾಲ ಕರ್ನಾಟಕದಲ್ಲಿ ವಿಲೀನವಾಗುವವರೆಗೂ ಈ ಮಾನ್ಯತೆ ಇತ್ತು. ೧೯೫೨ರಲ್ಲಿ ಮೊದಲ ಸಾರ್ವತ್ರಿಕ ಚುನಾವಣೆ ನಡೆದು ಕೊಡಗಿನ ಪ್ರಥಮ ಸರ್ಕಾರ ರಚಿಸುವ ಅವಕಾಶ ದೊರೆಯುತ್ತದೆ. ಸಿ.ಎಂ. ಪೂಣಚ್ಚ ಎಂಬುವವರು ಕೊಡಗಿನ ಮೊದಲ ಮುಖ್ಯಮಂತ್ರಿಯಾಗುತ್ತಾರೆ. ಕ್ರಮೇಣ ರಾಜ್ಯ ಪುನರ್ನಿರ್ಮಾಣದ ಹಿನ್ನೆಲೆಯಲ್ಲಿ ೧೯೫೬ರ ನವೆಂಬರ್ ೧ರಂದು ಕೊಡಗು ಹೊಸ ಮೈಸೂರು ರಾಜ್ಯದಲ್ಲಿ ವಿಲೀನವಾಗಿ ರಾಜ್ಯದ ಚಿಕ್ಕ ಜಿಲ್ಲೆಯಾಗಿ ಮುಂದುವರೆಯುತ್ತದೆ.[೫೦]

## ಕೊನೆ ಟಿಪ್ಪಣಿಗಳು

೧. **ಕೊಡಗಿನ ಸುಮಗಳು,** ೧೯೯೩, ಜಿ. ಟಿ. ನಾರಾಯಣ ರಾವ್, ಅತ್ರಿ ಬುಕ್ ಸೆಂಟರ್, ಮಂಗಳೂರು, ಪುಟ-೫೦

೨. **ಕಾವೇರಿ ವೈಭವ,** ೧೯೭೮, ಎದುರ್ಕಳ ಕೆ. ಶಂಕರನಾರಾಯಣ ಭಟ್ಟ, ಶ್ರೀ ರಾಮಕೃಷ್ಣ ಪ್ರಕಾಶನ, ಭಾಗಮಂಡಲ, ಪುಟ-೪೧೭

೩. **ಕೊಡಗಿನ ಭೌಗೋಳಿಕ ಸಮೀಕ್ಷೆ,** ೧೯೭೪, ವಿ. ಎನ್. ನಾಯಕ್, ದೀಪಕ್ ಪ್ರಕಾಶನ, ಗೋಣಿಕೊಪ್ಪಲು, ಪುಟ-೧

೪. **ಕರ್ನಾಟಕ ರಾಜ್ಯ ಗೆಜೆಟಿಯರ್-ಕೊಡಗು ಜಿಲ್ಲೆ,** ೧೯೯೨, ಸಂ. ಸೂರ್ಯನಾಥ ಯು. ಕಾಮತ್, ಲಿಪಿ ಮುದ್ರಣ, ಬೆಂಗಳೂರು, ಪುಟ-೨

೫. **ಕೊಡಗಿನ ಇತಿಹಾಸ,** ೧೯೭೪, ಕೃಷ್ಣಯ್ಯ ಡಿ. ಎನ್., ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಪುಟ-೨೩

೬. **ಕೊಡವರು,** ೨೦೧೪, ರಾಮಾನುಜಂ ಪಿ. ಎಸ್., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ-೧೧

೭. **ತರಂಗ**(ವಾರ ಪತ್ರಿಕೆ)ದಲ್ಲಿ ಪ್ರಕಟಗೊಂಡ ಲೇಖನ, ಸೆಪ್ಟೆಂಬರ್ ೨೦೧೬, ಕೊಡಗು, ಯಶೋದಾ ಮುತ್ತಣ್ಣ, ಪುಟ-೨೦

೮. **ಕೊಡವ ರಂಗಭೂಮಿ,** ೨೦೦೬, ತೀತೀರ ರೇಖಾ ವಸಂತ, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಪುಟ-೧೩

೯. **ಕೊಡವರು,** ೨೦೧೪, ರಾಮಾನುಜಂ ಪಿ. ಎಸ್., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ-೧೩

೧೦. **ಕೊಡವ ರಂಗಭೂಮಿ,** ೨೦೦೬, ತೀತೀರ ರೇಖಾ ವಸಂತ, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಪುಟ-೧೪

೧೧. **ಕೊಡವರ ಸಂಸ್ಕಾರಗಳು: ಸಮಾಜೋ-ಸಾಂಸ್ಕೃತಿಕ ಅಧ್ಯಯನ** (ಪಿಎಚ್.ಡಿ. ಮಹಾಪ್ರಬಂಧ), ೨೦೧೪, ಕಾವೇರಿ ಎನ್. ಪಿ., ಮೈಸೂರು ವಿಶ್ವವಿದ್ಯಾಲಯ, ಪುಟ-೨೫

೧೨. **ನದಿ ಎರಡರ ನಡುವೆ,** ೨೦೦೯, ಪ್ರಭಾಕರ ಶಿಶಿಲ ಬಿ., ವಸಂತ ಪ್ರಕಾಶನ, ಬೆಂಗಳೂರು, ಪುಟ-೩೦

೧೩. **ಅದೇ;**

೧೪. **ಅದೇ;**

೧೫. **ಅದೇ;**

೧೬. **ಅದೇ;**

೧೭. **ಎರವರ ಸಂಸ್ಕೃತಿ,** ೧೯೯೩, ಹರೀಶ್ ಪಿ. ಎನ್., ಕರ್ನಾಟಕ ಸಾಹಿತ್ಯ ಅಕಡೆಮಿ,

೧೮. **ನದಿ ಎರಡರ ನಡುವೆ,** ೨೦೦೯, ಪ್ರಭಾಕರ ಶಿಶಿಲ ಬಿ., ವಸಂತ ಪ್ರಕಾಶನ, ಬೆಂಗಳೂರು, ಪುಟ-೨೩

೧೯. **ಅದೇ;**

೨೦. **ವಿಧಿವಿಲಾಸ,** ೨೦೧೪, ಕೂತಂಡ ಪಾರ್ವತಿ ಪೂವಯ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ-೭

೨೧. **ಅದೇ;**

೨೨. **ನದಿ ಎರಡರ ನಡುವೆ,** ೨೦೦೯, ಪ್ರಭಾಕರ ಶಿಶಿಲ ಬಿ., ವಸಂತ ಪ್ರಕಾಶನ, ಬೆಂಗಳೂರು, ಪುಟ-೭೪

೨೩. **ಅದೇ;**

೨೪. **ಕೊಡಗಿನ ಇತಿಹಾಸ,** ೧೯೭೪, ಕೃಷ್ಣಯ್ಯ ಡಿ. ಎನ್., ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಪುಟ-೧೫೨

೨೫. **ಕೊಡಗಿನ ಇತಿಹಾಸ ಪುಟಗಳಿಂದ,** ೧೯೮೩, ಗಣಪತಿ ಬಿ. ಡಿ., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ-೫೭

೨೬. **ಕೊಡಗಿನ ಸಾಂಪ್ರದಾಯಿಕ ಬೆಳೆಗಳು,** ಮಾರ್ಚ್ ೨೦೧೬, ನಿರಂತರ ಪ್ರಗತಿ(ಮಾಸ ಪತ್ರಿಕೆ), ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆ, ಧರ್ಮಸ್ಥಳ, ಪುಟ-೨೦, ೨೧

೨೬ಎ.**ಪ್ರಜಾವಾಣಿ,** ೭-೦೧-೨೦೧೪, (೭೧ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನ, ಮಡಿಕೇರಿಯಲ್ಲಿ ಮಾಡಿದ ಭಾಷಣ) ಪುಟ-೩

೨೭. **ಕೊಡಗಿನ ಇತಿಹಾಸ,** ೧೯೭೪, ಕೃಷ್ಣಯ್ಯ ಡಿ. ಎನ್., ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಪುಟ-೧೬

೨೭ಎ.ದೇವಸ್ಥಾನದ ಎದುರು ಮಾಹಿತಿ ಫಲಕದಲ್ಲಿದೆ

೨೭ಬಿ.**ಕೊಡಗಿನ ಶತಮಾನ ಕಾವ್ಯ,** ೨೦೧೧, ಸಂ. ಕವಿತಾ ರೈ ಮತ್ತು ಆನಂದ ಕೋಡಿಂಬಾಳ, ಕನ್ನಡ ಸಂಘ, ಕ್ರೈಸ್ಟ್ ಯೂನಿವರ್ಸಿಟಿ, ಬೆಂಗಳೂರು, ಪುಟ-೪

೨೮. **ಹುಲಿಯ ಹಾಲಿನ ಮೇವು,** ೨೦೦೮, ಭಾರತೀಸುತ, ರವೀಂದ್ರ ಪುಸ್ತಕಾಲಯ, ಸಾಗರ, ಪುಟ-೧೧

೨೯. **ಹರದಾಸ ಅಪ್ಪಚ್ಚ ಕವಿಯ ನಾಲ್ಕು ನಾಟಕಗಳು,** ೨೦೦೧, ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ, ಮಡಿಕೇರಿ, ಪುಟ-೩೭೫-೩೭೬

೩೦. **ಕೊಡಗಿನ ಸುಮಗಳು,** ೧೯೯೩, ನಾರಾಯಣ ರಾವ್ ಜಿ. ಟಿ., ಅತ್ರಿ ಬುಕ್ ಸೆಂಟರ್, ಮಂಗಳೂರು, ಪುಟ-೫೦

೩೦ಎ.**ಕೊಡಗಿನ ಶತಮಾನದ ಕಾವ್ಯ,** ೨೦೧೧, ಸಂ. ಕವಿತಾ ರೈ ಮತ್ತು ಆನಂದ ಕೋಡಿಂಬಾಳ, ಕನ್ನಡ ಸಂಘ, ಕ್ರೈಸ್ಟ್ ಯೂನಿವರ್ಸಿಟಿ, ಬೆಂಗಳೂರು, ಪುಟ-೫೨

೩೧. **ಕರ್ನಾಟಕ ರಾಜ್ಯ ಗೆಜೆಟಿಯರ್-ಕೊಡಗು ಜಿಲ್ಲೆ,** ೧೯೯೨, ಸಂ. ಸೂರ್ಯನಾಥ ಯು. ಕಾಮತ್, ಲಿಪಿ ಮುದ್ರಣ, ಬೆಂಗಳೂರು, ಪುಟ-೮೧೨

೩೨. **ಯಲಬುರ್ಗಿಯಿಂದ ಹಿಮಗಿರಿವರೆಗೆ,** ೨೦೧೪, ಈರಪ್ಪ ಎಂ. ಕಂಬಳಿ, ಬೆರಗು ಪ್ರಕಾಶನ, ಕೊಪ್ಪಳ, ಪುಟ-೬೮

೩೩. **ಅದೇ,** ಪುಟ-೭೧

೩೪. **ಚಿಕವೀರರಾಜೇಂದ್ರ** (ಅವಲೋಕನ), ೨೦೧೧, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್, ಬೆಂಗಳೂರು, ಪುಟ-೧೦

೩೫. **ಕೊಡಗಿನ ಇತಿಹಾಸ,** ೧೯೭೪, ಕೃಷ್ಣಯ್ಯ ಡಿ. ಎನ್., ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಪುಟ-೨೪

೩೫ಎ.**ಮಡಿಕೇರಿ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ,** ೧೯೯೧, ಸಂ. ಹಂ. ಪ. ನಾಗರಾಜಯ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ-೨೧೪

೩೬. **ಅದೇ,** ಪುಟ-೭೪

೩೭. **ನದಿ ಎರಡರ ನಡುವೆ,** ೨೦೦೯, ಪ್ರಭಾಕರ ಶಿಶಿಲ ಬಿ., ವಸಂತ ಪ್ರಕಾಶನ, ಬೆಂಗಳೂರು, ಪುಟ-೧೧

೩೮. **ಅದೇ,** ಪುಟ-೨೧-೨೨

೩೯. **ಅದೇ,** ಪುಟ-೩೫

೪೦. **ಅದೇ,** ಪುಟ-೪೦

೪೧. **ಅದೇ,** ಪುಟ-೫೧

೪೨. **ಕೊಡಗಿನ ಇತಿಹಾಸ,** ೧೯೭೪, ಕೃಷ್ಣಯ್ಯ ಡಿ. ಎನ್., ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಪುಟ-೩೯೦

೪೩. **ಚಿಕವೀರರಾಜೇಂದ್ರ,** ೨೦೧೧, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್, ಬೆಂಗಳೂರು, ಪುಟ-೬

೪೪. **ಕೊಡಗಿನ ಇತಿಹಾಸ,** ೧೯೭೪, ಕೃಷ್ಣಯ್ಯ ಡಿ. ಎನ್., ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಪುಟ-೪೫೨

೪೪ಎ.**ಕೊಡಗಿನ ಶತಮಾನದ ಕಾವ್ಯ,** ೨೦೧೧, ಸಂ. ಕವಿತಾ ರೈ ಮತ್ತು ಆನಂದ ಕೋಡಿಂಬಾಳ, ಕನ್ನಡ ಸಂಘ, ಕ್ರೈಸ್ಟ್ ಯೂನಿವರ್ಸಿಟಿ, ಬೆಂಗಳೂರು, ಪುಟ-೨೯-೪೨

೪೫. **ನದಿ ಎರಡರ ನಡುವೆ**, ೨೦೦೯, ಪ್ರಭಾಕರ ಶಿಶಿಲ ಬಿ., ವಸಂತ ಪ್ರಕಾಶನ, ಬೆಂಗಳೂರು, ಪುಟ-೧೫೭

೪೫ಎ. **ಕೊಡಗಿನ ಇತಿಹಾಸ**, ೧೯೭೪, ಕೃಷ್ಣಯ್ಯ ಡಿ. ಎನ್., ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಪುಟ-೫೭೯

೪೬. **ಅದೇ**, ಪುಟ-೧೯೧

೪೭. **ಕೊಡಗಿನ ಇತಿಹಾಸ**, ೧೯೭೪, ಕೃಷ್ಣಯ್ಯ ಡಿ. ಎನ್., ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಪುಟ-೫೮೨

೪೮. **ಕೊಡಗು ಮತ್ತು ಕೊಡವರು**, ೧೯೬೨, ಗಣಪತಿ ಬಿ. ಡಿ., ಉಷಾ ಪ್ರೆಸ್, ಮೈಸೂರು, ಪುಟ-೩೯೪

೪೯. **ಕೊಡಗಿನ ಇತಿಹಾಸ**, ೧೯೭೪, ಕೃಷ್ಣಯ್ಯ ಡಿ. ಎನ್., ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಪುಟ-೫೮೩

೫೦. **ಆಧುನಿಕ ಕೊಡಗು**, ೨೦೧೪, ತಂಬಂಡ ವಿಜಯ್ ಪೂಣಚ್ಚ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೧೮

# ಅಧ್ಯಾಯ - ಮೂರು

## ಕೊಡಗಿನ ಸಾಹಿತ್ಯ ಪರಂಪರೆ

೩.೧. ಶಾಸನ ಸಾಹಿತ್ಯ

೩.೨. ಜನಪದ ಸಾಹಿತ್ಯ

೩.೩. ಪ್ರಾಚೀನ ಸಾಹಿತ್ಯ

೩.೪. ಆಧುನಿಕ ಸಾಹಿತ್ಯ

೩.೫. ಪತ್ರಿಕಾ ಸಾಹಿತ್ಯ

# ಅಧ್ಯಾಯ – ಮೂರು

## ಕೊಡಗಿನ ಸಾಹಿತ್ಯ ಪರಂಪರೆ

ಕನ್ನಡ ಸಾಹಿತ್ಯಕ್ಕೆ ಎರಡು ಸಾವಿರಕ್ಕೂ ಹೆಚ್ಚು ವರ್ಷಗಳ ಇತಿಹಾಸವಿದೆ. ಕ್ರಿ.ಶ. ನಾಲ್ಕನೇ ಶತಮಾನದ ನಂತರದಲ್ಲಿ ದೊರೆತ ಶಾಸನಗಳ ಮೂಲಕ ಕನ್ನಡ ಸಾಹಿತ್ಯ ಬೆಳೆದು ಬಂದಿರುವುದನ್ನು ಕಾಣಬಹುದು. ಕೇವಲ ಕಾವ್ಯ ಪ್ರಧಾನವಾಗಿದ್ದ ಕನ್ನಡ ಸಾಹಿತ್ಯ ಕಾಲಾನಂತರದಲ್ಲಿ ಸಾಹಿತ್ಯದ ಬೇರೆ ಬೇರೆ ಪ್ರಕಾರಗಳಿಗೆ ವಿಸ್ತರಿಸಿಕೊಂಡು ಕತೆ, ಕಾದಂಬರಿ, ನಾಟಕ, ಪ್ರಬಂಧ, ವಿಮರ್ಶೆ ಮುಂತಾದ ಪ್ರಕಾರಗಳಲ್ಲಿ ಕಾಣಿಸಿಕೊಂಡಿತು.

ಕನ್ನಡ ಆಳರಸರ ರಾಜಾಶ್ರಯದಲ್ಲಿ ನಾಡಿನ ಸಂಸ್ಕೃತಿ ಮತ್ತು ಸಾಹಿತ್ಯ ಉತ್ತುಂಗ ಶಿಖರವನ್ನು ತಲುಪಿ ಇಂದಿಗೂ ಬೆಳೆಯುತ್ತಾ ಬಂದಿದೆ. ಪ್ರಾಚೀನ ಕಾಲದಿಂದಲೂ ಇಂತಹದೊಂದು ಪರಂಪರೆ ನಿರಂತರವಾಗಿ ಬೆಳೆದು ಬಂದಿದೆ. ಇದಕ್ಕೆ ಆಧಾರವೆಂಬಂತೆ ಗಂಗರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು ವಿಜಯನಗರದ ಅರಸರು ಹಾಗೂ ಮೈಸೂರು ಅರಸು ಮನೆತನಗಳು ಸಾಹಿತ್ಯ ಪೋಷಣೆಗೆ ರಾಜಾಶ್ರಯ ನೀಡಿರುವುದನ್ನು ಗಮನಿಸಬಹುದು. ಅಲ್ಲದೇ ಕೆಲವು ಅರಸರು ಸ್ವತಃ ಕೃತಿಗಳನ್ನು ರಚಿಸಿರುವುದೂ ಕಂಡುಬರುತ್ತದೆ.

ಕೊಡಗು ಕಾಡು ಬೆಟ್ಟಗಳಿಂದ ಕೂಡಿರುವ ನಾಡು. ಸುಗಮ ರಸ್ತೆಗಳಿಲ್ಲದೆ ಸಂಚಾರಕ್ಕೆ ಅಡಚಣೆಯಾಗುತ್ತಿದ್ದ ಕಾಲದಲ್ಲೂ ಕವಿಗಳು ಸಾಹಿತಿಗಳಿದ್ದರೇ, ಇದ್ದರೂ ಅವರು ಕನ್ನಡದಲ್ಲಿ ಕಾವ್ಯರಚನೆ ಮಾಡುತ್ತಿದ್ದರೇ ಎಂಬ ಸಂದೇಹ ಮೂಡುತ್ತದೆ. ಆದರೂ ಕರ್ನಾಟಕದ ಇತರ ಭಾಗಗಳಲ್ಲಿ ಇದ್ದಷ್ಟು ಬಹುಸಂಖ್ಯೆಯಲ್ಲಿ ಕವಿಗಳು, ಸಾಹಿತಿಗಳು ಕೊಡಗಿನಲ್ಲಿ ಇರಲಿಲ್ಲವಾದರೂ ಕೊಡಗಿನವರು ಅಥವಾ ಕನ್ನಡಿಗರು ಸಮಾಧಾನ ಪಟ್ಟುಕೊಳ್ಳುವಷ್ಟು ಕನ್ನಡ ಸಾಹಿತ್ಯದ ಲಭ್ಯತೆ ಕೊಡಗಿನಲ್ಲಿದೆ ಎಂದು ಹೇಳಬಹುದು.

ಕೊಡಗಿನ ಸಾಹಿತ್ಯವೆಂದರೆ ಕೇವಲ ಕೊಡಗು ಮೂಲದ ಸಾಹಿತಿಗಳಿಂದ ಕೊಡವ ಭಾಷೆಯಲ್ಲಿ ಬರೆದ ಕೃತಿಗಳೆಂದು ಮಾತ್ರ ಪರಿಗಣಿಸದೆ, ಹೊರಗಿನ ಯಾವುದೇ ಭಾಗದ ವ್ಯಕ್ತಿಯು ಕೊಡಗಿನ ಪರಿಸರ, ಜೀವ ವೈವಿಧ್ಯತೆಯನ್ನು ಕುರಿತು ಇತರ ಭಾಷೆಗಳಲ್ಲಿಯೂ ಬರೆದ ಎಲ್ಲಾ ಕೃತಿಗಳನ್ನು ಕೊಡಗಿನ ಸಾಹಿತ್ಯ ಕೃತಿಗಳೆಂದು ಪರಿಗಣಿಸಬಹುದು. ಆದರೆ ಇವುಗಳಲ್ಲಿ ಕನ್ನಡ ಸಾಹಿತ್ಯ ಕೃತಿಗಳನ್ನು ಮಾತ್ರ ಪ್ರಸ್ತುತ ಅಧ್ಯಯನದ ಆಕರ ಗ್ರಂಥಗಳಾಗಿ ಬಳಸಿಕೊಳ್ಳಲಾಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟೀಷ್ ಅಧಿಕಾರಿಗಳಾದ ಕರ್ನಲ್ ಮೆಕೆಂಜಿ, ಹರ್ಮನ್ ಮೊಗ್ಲಿಂಗ್ ಮೊದಲಾದವರು ಕೊಡಗನ್ನು ತಮ್ಮದೇ ದೃಷ್ಟಿಯಲ್ಲಿ ಗಮನಿಸಿ ಅನೇಕ ಕೃತಿಗಳನ್ನು ರಚನೆ ಮಾಡಿರುತ್ತಾರೆ. ಇಂತಹ ಕೃತಿಗಳನ್ನು ಈ ಅಧ್ಯಯನಕ್ಕೆ ಪೂರಕವಾಗಿ ಬಳಸಿ ಕೊಳ್ಳಲಾಗಿದೆ.

ಕೊಡಗಿನ ಸಾಹಿತಿಗಳೆಂದರೆ ಯಾರು ಎಂಬುದರ ಕುರಿತು ಡಿ. ಬಿ. ರಾಮಚಂದ್ರಾಚಾರ್ ಅವರು ನಾಲ್ಕು ವಿಭಾಗಗಳನ್ನು ಮಾಡುತ್ತಾರೆ. ಅವುಗಳೆಂದರೆ, ೧, ಕೊಡಗಿನಲ್ಲಿ ಹುಟ್ಟಿ, ಇಲ್ಲೇ ಬೆಳೆದು, ಇಲ್ಲೇ ನೆಲೆಸಿರುವವರು. ೨, ಕೊಡಗಿನಲ್ಲಿ ಹುಟ್ಟಿ, ಇಲ್ಲೇ ಬೆಳೆದು, ಜೀವನ ನಿರ್ವಹಣೆಗಾಗಿ ದೂರ ಹೋಗಿರುವವರು ೩, ಬೇರಡೆಯಿಂದ ಜೀವನ ನಿರ್ವಹಣೆಗಾಗಿ ಈ ಜಿಲ್ಲೆಗೆ ಬಂದು ಸಾಹಿತ್ಯ ರಚನೆಯಲ್ಲಿ ತೊಡಗಿದವರು. ೪, ಬೇರೆಡೆ ಹುಟ್ಟಿ ಬೆಳೆದು ಜೀವನಕ್ಕಾಗಿ ಕೊಡಗಿಗೆ ಬಂದು ಹತ್ತಾರು ವರ್ಷಗಳು ಇಲ್ಲಿದ್ದು ಕೃತಿಗಳನ್ನು ರಚಿಸಿ ಈಗ ದೂರದಲ್ಲಿರುವವರು[೧]. ಕೆ. ರಾಮಕೃಷ್ಣ ಉಡುಪ ಅವರು ಮತ್ತೊಂದು ರೀತಿಯ ವಿಭಾಗ ಕ್ರಮಗಳನ್ನು ಅನುಸರಿಸಿ ಕೊಡಗಿನ ಸಾಹಿತ್ಯವೆಂದರೆ ಯಾವುದು ಎಂಬುದರ ವಿವರಗಳನ್ನು ನೀಡುತ್ತಾರೆ. ಅವರ ಪ್ರಕಾರ ಕೊಡಗಿನ ಸಾಹಿತ್ಯವೆಂದರೆ, ಕೊಡಗಿನ ಮೇಲಿನ ಸಾಹಿತ್ಯ, ಅಂದರೆ ಕುವೆಂಪು, ರಾಜರತ್ನಂ, ಡಿ.ವಿ.ಜಿ. ಮುಂತಾದ ಹಿರಿಯ ಕವಿಗಳು ಸೃಷ್ಟಿಸಿದ ಸಾಹಿತ್ಯ, ಎರಡನೆಯದು ಕೊಡಗಿನ ಕವಿಗಳು ರಚಿಸಿದ ಸಾಹಿತ್ಯ, ಅಂದರೆ ಹಲವಾರು ಹೆಸರಾಂತ ಸಾಹಿತಿಗಳು ಕೊಡಗಿನಲ್ಲೇ ಹುಟ್ಟಿ ಬೆಳೆದು ಉತ್ತಮ ಸಾಹಿತ್ಯಕ ಕೊಡುಗೆ ನೀಡಿರುವವರು. ಮೂರನೆಯದಾಗಿ ಕೊಡಗಿನ ಪ್ರಮುಖ ಭಾಷೆಯಾಗಿರುವ ಕೊಡವ ಭಾಷೆಯಲ್ಲಿ ಕೊಡಗರು, ವಿಶೇಷವಾಗಿ ಕೊಡವರು ರಚಿಸಿರುವ ಕತೆ, ಕಾದಂಬರಿ, ನಾಟಕ ಇತ್ಯಾದಿಗಳು. ನಾಲ್ಕನೆಯದಾಗಿ, ಇಂದಿನ ಯುವ ಜನಾಂಗ ಶಾಲಾ ಕಾಲೇಜುಗಳಲ್ಲಿ ಓದುತ್ತಿರುವ ವಿದ್ಯಾರ್ಥಿಗಳು, ಅಧ್ಯಾಪಕರು ಹಾಗೂ ಅದ್ಯಾಪಕೇತರರು ಸಾಹಿತ್ಯ ಪ್ರೇಮ ತೋರುತ್ತಿರುವುದು ಸಮಕಾಲೀನವಾಗಿ ಕಂಡುಬರುತ್ತಿದೆ. ಈ ಎಲ್ಲಾ ಅಂಶಗಳನ್ನು ಮುಖ್ಯವಾಗಿಟ್ಟುಕೊಂಡು ಕೊಡಗಿನ ಸಾಹಿತ್ಯದ ಪರಿಚಯ ಮಾಡಬಹುದು ಎಂದು ಹೇಳುತ್ತಾರೆ.[೨]

ಕೊಡಗಿನ ಪರಿಸರದ ಚೆಲುವನ್ನು ಕಂಡು ಅದನ್ನು ಸುಂದರವಾಗಿ ಮತ್ತು ಅರ್ಥಪೂರ್ಣವಾಗಿ ತಮ್ಮ ಕವಿತೆಗಳ ಮೂಲಕ ಪ್ರಕಟಗೊಳಿಸಿರುವ ಪ್ರತಿಭಾನ್ವಿತ ಕವಿ, ಕವಯಿತ್ರಿಯರಿದ್ದಾರೆ. ಪ್ರಾಚೀನ ಕಾವ್ಯ ಕೃತಿಗಳ ಉತ್ಕೃಷ್ಟತೆಯ ಕಂಪಿನೊಡನೆ ಆಧುನಿಕ ವಿಚಾರ ಸಾಹಿತ್ಯದ ಹಿರಿಮೆ ಸದಾ ಬೆರೆತಿದ್ದು, ಎಲ್ಲಾ ತಲೆಮಾರುಗಳ ಸಾಹಿತ್ಯದ ಹರಿಯುವಿಕೆ ಸುಮಾರು ೬೦೦-೭೦೦ ವರ್ಷಗಳಿಂದ ಕೊಡಗಿನಲ್ಲಿ ಸಾಗುತ್ತಾ ಬಂದಿದೆ. ಅಖಿಲ ಭಾರತ ಮತ್ತು ಜಿಲ್ಲಾ ಮಟ್ಟದ ಕನ್ನಡ ಸಾಹಿತ್ಯ ಸಮ್ಮೇಳನಗಳು ಇಲ್ಲಿ ಜರಗಿರುವುದನ್ನು ಗಮನಿಸಿದರೆ ಕೊಡಗಿನ ಜನಸಮುದಾಯಗಳ ಸಾಹಿತ್ಯ ಪ್ರೀತಿ ಮೆಚ್ಚುವಂತದ್ದು. ಇದಲ್ಲದೆ ಕಲೆ, ವಾಸ್ತುಶಿಲ್ಪ, ನಾಟಕ ರಚನೆ ಮತ್ತು ಪ್ರದರ್ಶನಗಳು ನಿರಂತರವಾಗಿ ಸಾಗಿಬಂದಿರುವುದನ್ನು ಗಮನಿಸಬಹುದು. ಜಾನಪದ ಸೊಗಡಿನಿಂದ ಕೂಡಿರುವ ಇಲ್ಲಿಯ ಭಾಷೆ ಮತ್ತು ಸಾಹಿತ್ಯಗಳಿಂದ ಕನ್ನಡ ಸಾಹಿತ್ಯ ಕ್ಷೇತ್ರವು ಶ್ರೀಮಂತವಾಗಿದೆ. ಕನ್ನಡ ಮತ್ತು ಕೊಡವ ಭಾಷೆಗಳಲ್ಲಿ ರಚಿತವಾಗಿರುವ ಕೃತಿಗಳಷ್ಟೇ ಇಂಗ್ಲೀಷ್ ಭಾಷೆಯಲ್ಲಿ ಸೃಷ್ಟಿಯಾದ ಸಾಹಿತ್ಯ ಕೃತಿಗಳೂ ವಿಪುಲವಾಗಿವೆ. ಕೊಡಗಿನ ಸಾಹಿತ್ಯದ ಪ್ರಭಾವವು ರಂಗಭೂಮಿಯ ಮೇಲೆ ಆಗಿದ್ದು, ಕೊಡವ ಮತ್ತು ಕನ್ನಡ ಭಾಷೆಯ ನಾಟಕಗಳು ಕೊಡಗು ಮತ್ತು ಬೇರೆ ಕಡೆಗಳಲ್ಲಿಯ ರಂಗ ಭೂಮಿಗಳಲ್ಲಿ ಪ್ರದರ್ಶಿತಗೊಂಡು ಪ್ರಸಿದ್ಧಿ

ಪಡೆದಿವೆ. ಇಂತಹ ನಾಟಕಗಳು ಮುಖ್ಯವಾಗಿ ಕೊಡಗಿನ ಪೌರಾಣಿಕ ಹಾಗೂ ಚಾರಿತ್ರಿಕ ವಸ್ತುಗಳನ್ನೂ ಜನಜೀವನದ ಅಂಶಗಳನ್ನೂ ಅವಲಂಬಿಸಿರುವುದು ವ್ಯಕ್ತವಾಗುತ್ತದೆ. ದೇಶ, ಭಾಷೆ, ಜನಾಂಗ, ಪ್ರಕೃತಿ, ಸಾಹಿತ್ಯ, ಸಂಸ್ಕೃತಿ ಇತ್ಯಾದಿಗಳ ರಕ್ಷಣೆ ಮತ್ತು ಬೆಳವಣಿಗೆಯಲ್ಲಿ ಈ ಜಿಲ್ಲೆಯಲ್ಲಿ ಪ್ರಸಾರವಾಗುವ ವೃತ್ತಪತ್ರಿಕೆಗಳ ಪಾತ್ರವೂ ಬಹಳ ಮುಖ್ಯವಾದುದು. ಈ ಎಲ್ಲಾ ಪ್ರಕಾರದ ಸಾಹಿತ್ಯದ ಹೊಳಹುಗಳನ್ನು ಮುಖ್ಯವಾಗಿಟ್ಟುಕೊಂಡು ಪ್ರಸ್ತುತ ಅಧ್ಯಾಯವನ್ನು ಜನಪದ ಸಾಹಿತ್ಯ, ಶಾಸನ ಸಾಹಿತ್ಯ, ಪ್ರಾಚೀನ ಸಾಹಿತ್ಯ, ಆಧುನಿಕ ಸಾಹಿತ್ಯ, ಪತ್ರಿಕಾ ಸಾಹಿತ್ಯ ಮತ್ತು ಸಂಶೋಧನೆ ಎಂದು ವಿಭಾಗ ಮಾಡಿಕೊಂಡು ಪರಿಚಯಾತ್ಮಕ ವಿವರಗಳನ್ನು ನೀಡಲಾಗಿದೆ.

## ೩.೧. ಶಾಸನ ಸಾಹಿತ್ಯ

ಶಾಸನಗಳು ಸಾಹಿತ್ಯಕ ಅಂಶಗಳಿಗಿಂತ ಅವು ಕೊಡುವ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕವಾದ ವಿವರಗಳು ಬಹಳ ಪ್ರಮುಖವೆನಿಸುತ್ತದೆ. ಶಾಸನಗಳಷ್ಟು ಪ್ರಾಚೀನವಾದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ವಿವರಗಳನ್ನು ಕೊಡುವ ಬೇರೆ ಆಕರಗಳಿಲ್ಲವೆಂದೇ ಹೇಳಬಹುದು. ಸಾಹಿತ್ಯಕ ಕೃತಿಗಳಾಗಲಿ, ವಿದೇಶಿ ವಿದ್ವಾಂಸರ ಗ್ರಂಥಗಳಾಗಲಿ ಶಾಸನಗಳ ಜೊತೆಗೆ ಹೋಲಿಸಿದಾಗ ಅವು ತಂಬಾ ಇತ್ತೀಚಿನವುಗಳು ಎನಿಸುತ್ತವೆ.

ಕೊಡಗಿನಲ್ಲಿ ಸುಮಾರು ಐದನೆಯ ಶತಮಾನದಿಂದಲೇ ಸಾಹಿತ್ಯಕ ಶಾಸನಗಳು ದೊರೆತಿದ್ದು, ಸುಮಾರು ನೂರ ಆರು ಶಾಸನಗಳು ಉಪಲಬ್ಧವಿರುವುದಾಗಿ ತಿಳಿದುಬರುತ್ತದೆ.[೩] ಪಂಡಿತದೇವನೆಂಬ ಜೈನ ಯತಿಯನ್ನು ರೂಪಕಾಲಂಕಾರದಲ್ಲಿ ವರ್ಣಿಸಲ್ಪಟ್ಟಿರುವ ಅಂಜನ ಗಿರಿಯ ಜೈನ ಬಸದಿಯಲ್ಲಿರುವ ಶಿಲಾ ಶಾಸನ ಇಲ್ಲಿನ ಸಾಹಿತ್ಯಕ್ಕೆ ಆಧಾರವಾಗುತ್ತದೆ. ಅಲ್ಲದೆ ಮದೋನ್ಮತ್ತ ಆನೆಗಳ ಸಮೂಹದಿಂದ ಕೂಡಿದ ಅರಣ್ಯವನ್ನು ಹೊಕ್ಕ ವೀರರಾಜೇಂದ್ರ ತನ್ನ ಪರಾಕ್ರಮದಿಂದ ಅವುಗಳ ಹಾವಳಿಯನ್ನು ನಿಯಂತ್ರಿಸಿದುದನ್ನು ಕಾವ್ಯಮಯವಾಗಿ ವರ್ಣಿಸಿರುವ ಮತ್ತೊಂದು ಶಾಸನ ಮಡಿಕೇರಿಯಲ್ಲಿ ದೊರೆತ ವೀರರಾಜೇಂದ್ರನ ಕಾಲದ್ದಾಗಿದ್ದು ಗದ್ಯದ ಚೆಲುವನ್ನು ಹೇಳಬಲ್ಲ ಶಾಸನವಾಗಿದೆ.[೩೨]

"ಈ ಜಿಲ್ಲೆಯ ಕೆಲವು ಶಾಸನ ಪಾಠಗಳನ್ನು ರಚಿಸಿರುವ ಪ್ರಾಚೀನ ಕವಿಗಳಲ್ಲಿ ಚಂದನಂದಯ್ಯ(ಶಾಸನ ಸಂ. ೯೮), ಧರ್ಮಶೆಟ್ಟಿ(ಶಾಸನ ಸಂ. ೭೨), ಬೊಮ್ಮದೇವ(ಶಾಸನ ಸಂ. ೬೨), ಸೇನಬೋವ ಜಿನಯ್ಯ(ಶಾಸನ ಸಂ.೬೦), ಬೊಮ್ಮರಸಯ್ಯ(ಶಾಸನ ಸಂ. ೮೮) ಮೊದಲಾದವರ ಹೆಸರುಗಳು ಶಾಸನ ಪಾಠಗಳಲ್ಲಿ ಕಂಡುಬರುವಂತಹವುಗಳು. ಶಾಸನ ಕವಿಗಳಲ್ಲಿ ಹಾಲೇರಿ ಅರಸರ ಕಾಲದಲ್ಲಿದ್ದ ಖಾಸಾ ರಹಸ್ಯದ ಶರಭೈಯನೆಂಬುವವನು ಮುಖ್ಯನೆನಿಸಿದ್ದಾನೆ. ಈತನು ಕ್ರಿ.ಶ. ೧೭೯೬ರ ಅಬ್ಬಿ ಮಠಕ್ಕೆ ಸಂಬಂಧಿಸಿದ ತಾಮ್ರ

ಶಾಸನದಲ್ಲಿಯೆ ಕೆಲವು ಸಂಸ್ಕೃತ ಶ್ಲೋಕಗಳನ್ನು, ಶಾಸನ ಪದ್ಯಗಳನ್ನು ರಚಿಸಿರುವನು. ಈತನು ಕೆಲವು ಗ್ರಂಥಗಳನ್ನು ರಚಿಸಿದ್ದಿರಬಹುದು ಎಂಬ ಊಹೆಯನ್ನು ಮಾಡಲಾಗಿದೆ"[೪]

## ೩.೨. ಜನಪದ ಸಾಹಿತ್ಯ

ಮಾನವನ ಪುರಾತನ ಸಂಸ್ಕೃತಿಯ ಹಾಗೂ ಸಂಪ್ರದಾಯದ ಮೇಲೆ ಹೆಚ್ಚು ಬೆಳಕು ಬೀರಬಲ್ಲ ಜಾನಪದ ಪ್ರಕಾರಗಳಲ್ಲಿ ಜನಪದ ಹಾಡುಗಳು ಪ್ರಮುಖ ಸ್ಥಾನವನ್ನು ವಹಿಸುತ್ತವೆ. ಕೊಡಗಿನಲ್ಲಿ ಜನಪದ ಮಹಾಕಾವ್ಯಗಳು ಕಂಡುಬರದಿದ್ದರು ಇಲ್ಲಿನ ಜನಪದ ಸಾಹಿತ್ಯ ವಿಫುಲವಾಗಿದ್ದು ಸ್ಥಳೀಯ ಜನಜೀವನದ ವಿವಿಧ ಮುಖಗಳ ಅನನ್ಯ ಚಿತ್ರಣ ಕೆಲವು ಜನಪದ ಹಾಡುಗಳ ಮೂಲಕ ದೊರೆಯುತ್ತದೆ. ಮಾನವನ ಜೀವನದ ವಿವಿಧ ಘಟ್ಟಗಳಿಗೆ ಸಂಬಂಧಿಸಿದ ಹಾಡುಗಳು ಕೊಡವರ ಮೂಲವನ್ನು ಕುರಿತ ಪದಗಳು, ಕಾವೇರಿಯ ಮಹಾತ್ಮೆ, ಇಕ್ಕೇರಿ ಅರಸು ಮನೆತನವನ್ನು ಕುರಿತ ಹಾಡುಗಳು, ಆಂಗ್ಲೇಯರ ಆಳ್ವಿಕೆಯನ್ನು ಚಿತ್ರಿಸುವ ಪದಗಳು, ಲಾಲಿ ಹಾಡುಗಳು, ಕೊಡವ ಮನೆತನದ ಮೂಲ ಪುರುಷರ ಪದಗಳು, ಮದುವೆ ಹಾಡುಗಳು, ಬೇಸಾಯದ ಹಾಡುಗಳು, ಸ್ಥಳೀಯ ದೇವತೆಗಳನ್ನು ಕುರಿತ ಹಾಡುಗಳು ಮೊದಲಾದ ವೈವಿಧ್ಯಮಯ ಹಾಡುಗಳನ್ನು ಇಲ್ಲಿನ ಜಾನಪದ ಪರಂಪರೆಯಲ್ಲಿ ಕಾಣಬಹುದು.

ಕೊಡಗಿನ ಜನಪದದಲ್ಲಿ ಮಹಾಕಾವ್ಯಗಳು ವಿರಳವೆಂದೇ ಹೇಳಬಹುದು. ಹಾಗೆ ನೋಡಿದರೆ ೧೯೨೪ ರಲ್ಲಿ ಪ್ರಕಟವಾದ ನಡಿಕೇರಿಯಂಡ ಚಿಣ್ಣಪ್ಪನವರ 'ಪಟ್ಟೋಲೆ ಪಳಮೆ' ಕೃತಿಯೇ ಇಲ್ಲಿನ ಪ್ರಥಮ ಕೃತಿ ಎನಿಸಿಕೊಂಡಿದೆ. ಎಲ್.ಎಸ್. ಶೇಷಗಿರಿರಾವ್ ಅವರು ಪಟ್ಟೋಲೆ ಪಳಮೆ 'ಕೊಡಗಿನ ಜಾನಪದಕ್ಕೆ ಮಾತ್ರವಲ್ಲ ಕನ್ನಡ ನಾಡಿನ ಜಾನಪದಕ್ಕೆ ಒಂದು ಅಪೂರ್ವ ಕೊಡುಗೆ' ಎನ್ನುತ್ತಾರೆ[೫]. ಕೊಡಗಿನ ಸಂಸ್ಕೃತಿಯ ಹಾಗೂ ಜನಪದ ಇತಿಹಾಸ ಕುರಿತು ಪಟ್ಟೋಲೆ ಪಳಮೆ ಪ್ರಕಟವಾಗುವವರೆಗೂ ದೇಸೀಯನೊಬ್ಬನ ಮೂಲಕ ಕೊಡಗಿನ ಜನಪದದ ಬಗ್ಗೆ ಮಾಹಿತಿ ದೊರಕಿರಲಿಲ್ಲ[೬] ಎಂಬ ವಿಚಾರ ಈ ಕೃತಿಯ ಹಿರಿಮೆಯನ್ನು ತಿಳಿಸುತ್ತದೆಯಾದರೂ, ಕೊಡವ ಭಾಷೆಯನ್ನು ಮಾತನಾಡುವ ೧೮ ಸಮುದಾಯಗಳಿದ್ದರೂ 'ಕೊಡವ' ಎಂದು ಗುರುತಿಸಲ್ಪಡುವ ಒಂದು ಸಮುದಾಯದ ಜನಪದ ಸಂಸ್ಕೃತಿಯನ್ನು ಮಾತ್ರ ದಾಖಲು ಮಾಡಿರುವುದು ಈ ಕೃತಿಯ ದೋಷವೆಂದೇ ಹೇಳಬಹುದು. ಹೀಗಿದ್ದರೂ ಕೊಡಗರ ಹುಟ್ಟು, ಮದುವೆ, ಸಾವು, ಹಬ್ಬಗಳು, ಆಚರಿಸುವ ಸಂಪ್ರದಾಯಗಳು, ರೀತಿ-ರಿವಾಜುಗಳನ್ನು, ಅವುಗಳಿಗೆ ಸಂಬಂಧಿಸಿದ ಹಾಡುಗಳು, ಗಾದೆಗಳು ಮತ್ತು ಒಗಟುಗಳನ್ನು ಕಟ್ಟಿಕೊಡುವಲ್ಲಿ ಯಶಸ್ವಿಯಾಗಿವೆ.

ಜಾನಪದೀಯ ಹಿನ್ನೆಲೆಯಲ್ಲಿ ದೊರೆಯಬಹುದಾದ ಕೊಡಗು, ಕೊಡವರು, ಕೊಡಗರು, ಇವರ ಜೀವನ ವಿಧಾನ, ಬೇಟೆ, ಕೃಷಿ ಮುಂತಾದ ಆಂಶಗಳನ್ನು ಹೇಳಲಾಗಿದೆ. ಕೊಡವರ ಹಬ್ಬಗಳಲ್ಲಿ ಆಡುವ, ಹಾಡುವ ವಿವಿಧ ಜನಪದ ನೃತ್ಯಗಳು ಮತ್ತು ಹಾಡುಗಳನ್ನು ಸಂಗ್ರಹಿಸಿ ಒಂದೆಡೆ ಸಿಗುವಂತೆ ಮಾಡಿರುವುದಲ್ಲದೆ, ಆ ಕಾಲದಲ್ಲಿ ಪ್ರಚಲಿತದಲ್ಲಿದ್ದ ದೇವದೇವತೆಗಳ

ಮೇಲಿನ ಹಾಡುಗಳನ್ನೂ, ನಂಬಿಕೆಗಳನ್ನೂ, ಗಾದೆ, ಒಗಟುಗಳನ್ನು ಒಂದು ಕಡೆ ಸಂಗ್ರಹ ಮಾಡುವ ಮೂಲಕ ವಿಶಿಷ್ಟ ಜನಾಂಗದ ವಿಶ್ವಕೋಶವೆನಿಸಿಕೊಳ್ಳುವ ಕೃತಿಯನ್ನು ಸಿದ್ಧಪಡಿಸಿದ್ದಾರೆ ಎಂದೇ ಹೇಳಲಾಗುತ್ತಿದೆ.[೭] ಮೈಸೂರು ವಿಶ್ವವಿದ್ಯಾಲಯವು ಪಟ್ಟೋಲೆ ಪಳಮೆಯನ್ನು ಮರು ಮುದ್ರಣ ಮಾಡಿದ ಸಂದರ್ಭದಲ್ಲಿ ಜಿ. ಶಂ. ಪರಮಶಿವಯ್ಯನವರು 'ಪಟ್ಟೋಲೆ ಪಳಮೆ ಸಮಗ್ರ ಜಾನಪದ ದೃಷ್ಟಿಯಿಂದ ನೋಡಿದಾಗ ಭಾರತೀಯ ಭಾಷೆಗಳಾವುದರಲ್ಲಿಯೂ ಈ ಅವಧಿಯಲ್ಲಿ ಇಂಥ ಪ್ರಯತ್ನಗಳು ಕಾಣಬರುವುದಿಲ್ಲ ಎಂಬುದು ಗಮನಾರ್ಹ'[೮] ಎಂದು ಹೇಳಿರುವುದನ್ನು ಗಮನಿಸಿದರೆ ಆ ಕಾಲಕ್ಕೆ ಅದು ದೊಡ್ಡ ಕೆಲಸವೆಂದೇ ಹೇಳಬೇಕು. ಆದರೆ ಇದಕ್ಕಿಂತ ಹಿಂದೆಯೇ ದೇಶವರ್ಣನೆ ಎನ್ನುವ ಕನ್ನಡ ಪುಸ್ತಕದಲ್ಲಿ 'ರಾಣಿಪಾಟ್ ಮತ್ತು ಹುತ್ತರಿಪಾಟ್' ಎಂಬ ಕೊಡಗು ಭಾಷೆಯ ಗೀತೆಗಳಿವೆ ಎಂದು ಪ್ರಸ್ತಾಪಿಸಿರುವುದು ಈ ಕೃತಿಯ ಹಿರಿಮೆಗೆ ಹಿನ್ನಡೆಯುಂಟಾಗಿದೆ.[೯] ೧೮೮೨ರಲ್ಲಿ 'ಇಂಡಿಯನ್ ಆಂಟಿಕ್ವೆರಿ'ಯಲ್ಲಿ ಗೋವರ್ ಎಂಬ ವಿದ್ವಾಂಸ ಕನ್ನಡ–ಬಡಗ–ಕೊಡಗು ಭಾಷೆಗಳಲ್ಲಿ ಆಯಾಯ ಭಾಷೆಗಳಿಗೆ ಸಂಬಂಧಿಸಿದ ಜನಪದ ಗೀತೆಗಳನ್ನು ಸಂಗ್ರಹಿಸಿದ್ದಾರೆ ಎಂಬ ಮಾತು ಪಟ್ಟೋಲೆ ಪಳಮೆಗಿಂತ ಹಿಂದೆ ಕೊಡವ ಭಾಷೆಯಲ್ಲಿ ಗೀತೆಗಳಿದ್ದವು ಎಂಬುದನ್ನು ತಿಳಿಸುತ್ತದೆ.

ಕೊಡಗು ಪ್ರಮುಖವಾಗಿ ದ್ವಿಭಾಷಾ ಪ್ರದೇಶ. ಇಲ್ಲಿ ಜನಭಾಷೆ, ಜಾನಪದ ಭಾಷೆ 'ಕೊಡವ' ಆಗಿದ್ದರೆ, ರಾಜಭಾಷೆಯಾಗಿ ಕನ್ನಡ ಬಳಕೆಯಲ್ಲಿದೆ. ಕನ್ನಡ ಮತ್ತು ಕೊಡವ ಭಾಷೆಯಲ್ಲಿ ರಚಿತವಾಗಿರುವ ಜಾನಪದ ಸಂಪತ್ತು ಬಹಳಷ್ಟಿದೆ. ಆ ಮೌಖಿಕ ಸಂಪತ್ತನ್ನು ಕುರಿತು ಹಲವಾರು ದೇಶೀಯ ಮತ್ತು ವಿದೇಶೀಯ ವಿದ್ವಾಂಸರು ಕೃತಿಗಳನ್ನು ಪ್ರಕಟಿಸಿರುತ್ತಾರೆ. ಶ್ರೀನಿವಾಸ ಅಯ್ಯಂಗಾರ್ ಅವರು ಸಂಸ್ಕೃತದಲ್ಲಿದ್ದ 'ಕಾವೇರಿ ಪುರಾಣ'ವನ್ನು ಕನ್ನಡಕ್ಕೆ ಅನುವಾದಿಸಿದ ನಂತರ ಇದು ಕೊಡವ ಭಾಷೆಗೂ ಅನುವಾದವಾಗಿ ಕೊಡಗಿನ ಜಾನಪದದಲ್ಲಿ ಸೇರಿಕೊಂಡಿದೆ ಎಂದು ತಿಳಿದುಬರುತ್ತದೆ.[೧೦]

೧೮೭೨ರಲ್ಲಿ ಮದ್ರಾಸ್ ಪ್ರಾಂತ್ಯಾಧಿಕಾರಿಯಾಗಿದ್ದ ಗೋವರ್ ಎಂಬ ವಿದ್ವಾಂಸ ದ್ರಾವಿಡ ಭಾಷೆಗಳ ಜನಪದ ಗೀತೆಗಳನ್ನು ಇಂಗ್ಲೀಷಿನಲ್ಲಿ ಸಂಕಲಿಸಿ ಹೊರತಂದಿರುವ 'ದಿ ಫೋಕ್ ಸಾಂಗ್ಸ್ ಆಫ್ ಸದರ್ನ್ ಇಂಡಿಯಾ' ಎನ್ನುವ ಗ್ರಂಥದಲ್ಲಿ ಕೊಡಗಿನ ಜಾನಪದ ಹಾಡುಗಳನ್ನು ಸೇರಿಸಿದ್ದಾನೆ.[೧೧] ೧೮೬೩ರಲ್ಲಿ 'ಕೊಡಗು ಬೈಬಲ್‌ನ್ನು ಪ್ರಕಟಿಸಿದ ಕಿಟ್ಟಲನು ಲಾವಣೀ ರೂಪದಲ್ಲಿರುವ ಕೊಡಗಿನ ಹಾಡುಗಳ ಪ್ರತಿ ಚರಣವೂ ಏಳು ಅಕ್ಷರಗಳಿಂದ ಕೂಡಿ ರಗಳೆಯಂತೆ ಮುಂದುವರಿಯುವ ಮತ್ತು ಪ್ರತಿ ಹಾಡಿನಲ್ಲಿಯೂ ನೂರಾರು ಸಾಲುಗಳು ಕಂಡು ಬರುವ ವೈಶಿಷ್ಟ್ಯವನ್ನು ಕುರಿತು ಪ್ರಸ್ತಾಪಿಸಿದ್ದಾನೆ. ಅಲ್ಲದೆ ೭೬೭ ಕೊಡವ ಗಾದೆಗಳನ್ನು, ಕೊಡವ ಪದಿಮೆಯನ್ನು ಜರ್ಮನ್ ಮಿಷನರಿಯಾಗಿದ್ದ ಜಿ. ಎಫ್. ವೈಲ್ 'ಎ ಸೆಲೆಕ್ಷನ್ ಆಫ್ ಕೂರ್ಗ್ ಪ್ರೊವರ್ಬ್ಸ್' ಎಂಬ ಹೆಸರಿನಲ್ಲಿ ಪ್ರಕಟಿಸಿದ್ದಾನೆ. ಇದು ಕೊಡಗು ಜನಪದ ಕುರಿತ ಮೊದಲ ಪ್ರಕಟಿತ ಕೃತಿಯೆನಿಸಿದೆ.[೧೨]

ಬಿ. ಡಿ. ಗಣಪತಿಯವರ 'ಕೊಡಗು ಮತ್ತು ಕೊಡವರು', ಮತ್ತು 'ಕೊಡವಾಸ್-ಎ ಕಾಂಪರೆನ್ಸೀವ್ ಸ್ಟಡಿ' ಎಂಬ ಕೃತಿಗಳ ಮೂಲಕ ಕೊಡವರ ಜೀವನ, ನಂಬಿಕೆ, ಸಂಪ್ರದಾಯ, ಆಚರಣೆ, ಹಬ್ಬ, ಹಾಡು, ನಾಣ್ಣುಡಿ, ಗಾದೆಗಳು ಇತ್ಯಾದಿ ವೈಶಿಷ್ಟ್ಯಗಳನ್ನು ಸಂಗ್ರಹಿಸಿಕೊಟ್ಟಿದ್ದಾರೆ. ಇವುಗಳೊಂದಿಗೆ ಎಂ. ಪಿ. ಕಾರ್ಯಪ್ಪನವರ 'ಕೂರ್ಗ್ ಅಂಡ್ ದೇರ್ ಆರಿಜೆನ್ಸ್', ಎಂ. ಎನ್. ಶ್ರೀನಿವಾಸನ್ ಅವರ 'ರಿಲೀಜಿಯನ್ ಅಂಡ್ ಸೊಸೈಟಿ ಅಮಾಂಗ್ ದ ಕೂರ್ಗ್ ಆಫ್ ಸೌತ್ ಇಂಡಿಯ', ಐ. ಮಾ. ಮುತ್ತಣ್ಣನವರ 'ಕೂರ್ಗ್ ಮೆಮೋಯರ್ಸ್' ಮತ್ತು ಕೆ. ಪಿ. ಮುತ್ತಣ್ಣನವರ 'ಜಗತ್ತಿಗೊಂದೇ ಕೊಡಗು' ಗ್ರಂಥಗಳಲ್ಲಿ ಕೊಡಗಿನ ಜಾನಪದ ಕುರಿತು ಚರ್ಚಿಸಲಾಗಿದೆ.[೧೨ಎ]

ಟಿ. ಎಸ್. ರಾಜಪ್ಪನವರು ಕೊಡಗಿನ ರಾಂಪುರದಲ್ಲಿ ಸಂಗ್ರಹಿಸಲಾಗಿರುವ 'ಕೆರೆ ಹೊನ್ನಮ್ಮ ಮತ್ತು ಇತರ ಲಾವಣಿಗಳು' ಮಹತ್ವದ ಜನಪದ ದಾಖಲೆ ಎನ್ನಲಾಗಿದೆ. ಸ್ವಾಮಿಗೌಡ ಅವರು ತಮ್ಮ 'ಕೊಡಗಿನ ಕಥನ ಗೀತೆಗಳು' ಎಂಬ ಕೃತಿಯ ಮೂಲಕ ಕೊಡಗಿನ ರಾಜ ಲಿಂಗರಾಜನನ್ನು ಕುರಿತು ಕಾವ್ಯವನ್ನು ಹೊರತಂದರೆ, ಅಂಬಳಿಕೆ ಹಿರಿಯಣ್ಣನವರು ಕೊಡಗಿನ ನಿಂಗವ್ವಳನ್ನು ಕುರಿತು ರಚಿತವಾಗಿರುವ ಜನಪದ ಕಾವ್ಯಗಳನ್ನು ಸಂಗ್ರಹಿಸಿ 'ತಂಬೂರಿ ಸಂಪ್ರದಾಯದ ಕಾವ್ಯಗಳು' ಕೃತಿಯ ಮೂಲಕ ಬೆಳಕಿಗೆ ತಂದಿರುತ್ತಾರೆ. ಚೆಂದಂಡ ಕರುಂಬಯ್ಯ ಅವರು ಸುಮಾರು ೬೭೫ ಕೊಡವ ಗಾದೆಗಳನ್ನು 'ಕೊಡವ ಗಾದೆ ಪಿಂಞ ಪಳೊಂಜೊಲ್ಲಿ' ಕೃತಿಯ ಮೂಲಕ ಪ್ರಕಟಿಸಿರುತ್ತಾರೆ.[೧೨ಬಿ]

ಕೊಡಗಿನ ಜನಪದ ಕತೆಗಳಿಗೆ ಸಂಬಂಧಿಸಿದಂತೆ ಬಿ. ಎಸ್. ಕುಶಾಲಪ್ಪ ಅವರ 'ಕೊಡಗಿನ ದೇಶೀಯ ಕತೆಗಳು ಪ್ರಮುಖ ಕೃತಿಯಾಗಿದ್ದು ಕಥನ ಕಾವ್ಯಗಳಲ್ಲಿ ವಿಸ್ತಾರವಾಗಿ ಒಡಮೂಡಿರುವ ಹಾಗೂ ದೇವತೆಗಳ ಸ್ವರೂಪವನ್ನು ಪಡೆದುಕೊಂಡ ಪನ್ನಂಗಾಲ ತಮ್ಮೆ, ಅಚ್ಚುನಾಯಕ, ಚೋನೀರ ಮತ್ತಣ್ಣ, ಹೊನ್ನಮ್ಮ, ಚನ್ನಬಸಪ್ಪ, ಕಲಿಯಾಟ ಅಜ್ಜಪ್ಪ ಮತ್ತು ಕಾವೇರಿ – ಇವರುಗಳ ಕತೆಗಳು ಈ ಕೃತಿಯಲ್ಲಿ ಗದ್ಯರೂಪದಲ್ಲಿ ಬಂದಿವೆ.[೧೩]

ಗೊ. ರು. ಚನ್ನಬಸಪ್ಪ ಅವರ ಸಂಪಾದಕತ್ವದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ 'ಕರ್ನಾಟಕ ಜನಪದ ಕಲೆಗಳು' ಗ್ರಂಥದಲ್ಲಿ ಕೊಡಗಿನ ಹದಿನೈದಕ್ಕೂ ಹೆಚ್ಚು ನೃತ್ಯ ಮತ್ತು ಹಾಡುವ ಕಲೆಗಳ ಬಗೆಗೆ ಸಂಕ್ಷಿಪ್ತ ವಿವರಗಳು ದೊರೆಯುತ್ತವೆ. ಕೊಡಗಿನ ಮೂಲ ನಿವಾಸಿಗಳೆನಿಸಿದ ಪಂಜಿರಿ ಎರವರ ಜನಪದ ಸಾಹಿತ್ಯವನ್ನು ಸಂಗ್ರಹಿಸಿ 'ಯೆರವರ ಸಮಾಜ ಮತ್ತು ಜಾನಪದ ಇತಿಹಾಸ' ಎಂಬ ಹೆಸರಿನಲ್ಲಿ ಎನ್. ಪಿ. ಶಂಕರನಾರಾಯಣ ಅವರು ಗ್ರಂಥವೊಂದನ್ನು ಪ್ರಕಟಿಸಿದ್ದಾರೆ. ಕೊಡವ ಜನಾಂಗದ ಜಾನಪದಕ್ಕೆ ಸೀಮಿತಗೊಂಡಿದ್ದ ಅಧ್ಯಯನಗಳು ಕೊಡವೇತರರ ಕಡೆಗೂ ತೆರೆದು ಕೊಳ್ಳುವಂತೆ ಮಾಡಿರುವುದು ಉತ್ತಮ ಬೆಳವಣಿಗೆಯೆನಿಸುತ್ತದೆ.[೧೩ಎ]

ಪಾಲಚ್ಚಂಡ. ಎ. ತುಳಸಿದೇವಿ ಅವರ 'ಕೊಡವ ಜಾನಪದ – ಒಂದು ಸಾಂಸ್ಕೃತಿಕ ಅಧ್ಯಯನ'[೧೪] ಎಂಬ ಅಪ್ರಕಟಿತ ಕೃತಿ ಕೊಡಗಿನ ಸಮಗ್ರ ಚಿತ್ರಣವನ್ನು ನೀಡುವ ಸಂಶೋಧನಾ ಕೃತಿಯೆನಿಸಿದೆ. ಇದಲ್ಲದೆ ತುಳಸಿದೇವಿಯವರು ಇಲ್ಲಿನ ಮೂಲ ನಿವಾಸಿಗಳಾದ ಎರವರು, ಕುರುಬರು, ಕುಡಿಯರು ಮತ್ತು ಕೊಡವರು– ಈ ನಾಲ್ಕು ಜನಾಂಗಗಳಿಗೆ ಸಂಬಂಧಿಸಿದ ದ್ರಾವಿಡ ಕಂಠಸ್ಥ ಮಹಾಕಾವ್ಯವಾದ 'ಬಾಯನ'ವನ್ನು(ಅಪ್ರಕಟಿತ) ಪತ್ತೆ ಹಚ್ಚುವ ಮೂಲಕ ಈ ವರ್ಗಗಳ ಜನಜೀವನದ ಜಾನಪದೀಯ ಇತಿಹಾಸದ ದಾಖಲೆಯನ್ನು ಒದಗಿಸುವ ಪ್ರಯತ್ನ ಮಾಡಿದ್ದಾರೆ.

ಜನಪದ ಕೃತಿಗಳು ಒಂದು ಕಡೆ ಕೊಡಗಿನ ಸಾಂಸ್ಕೃತಿಕ ವಿವರ ಮತ್ತು ಸಾಹಿತ್ಯವನ್ನು ಪ್ರತಿನಿಧಿಸುತ್ತಿದ್ದರೆ, ಕೇವಲ ಮೌಖಿಕವಾಗಿ ಬಾಯಿಂದ ಬಾಯಿಗೆ ಪ್ರಸರಿಸುತ್ತಿರುವ ಅದೆಷ್ಟೋ ಹಾಡುಗಳು ಹಾಗೇ ಉಳಿದುಕೊಂಡು ಬಂದು ಸದಾ ಜೀವಂತಿಕೆಯನ್ನು ಪಡೆದುಕೊಂಡಿವೆ. ಅಂತಹ ಬಿಡಿ ಜನಪದ ಗೀತೆಗಳನ್ನು ಇಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಉತ್ತರ ಕೊಡಗಿನ ಗವಿಸಿದ್ಧೇಶ್ವರನನ್ನು ಕುರಿತು ಇಲ್ಲಿನ ಬೆಸ್ತರು, ಜೇನುಕುರುಬರು, ಹಾಡುವ ಜನಪದ ಗೀತೆಯೊಂದು ಈ ರೀತಿಯಿದೆ.

ಕೊಂಡಾಡಿರೇ / ಕೊಂಡಿಟ್ಟಾಡಿರೆ
ನಮ್ಮ ಗವಿಸಿದ್ದೇಶ್ವರನ ಕೊಂಡಾಡಿರೆ

ಎಂದು ಪ್ರಾರಂಭವಾಗುವ ಈ ಹಾಡು ಮುಂದುವರೆದು,

ಸಿದ್ದಯ್ಯ ಗವಿಯಲ್ಲಿ / ಆನೆಯ ಕೊಟ್ಟಿಗೆ
ಕುದ್ರೆಯ ಕೊಟ್ಟಿಗೆ ನೆಲೆಯಲ್ಲಿ
ಮದ್ಯಾವಂಕಣದ / ಕಲ್ಲು ಗವಿಯಲ್ಲಿ
ಸಿದ್ದಯ್ಯ ಮಾಡ್ತಾನೆ ಘನಪೂಜೆ/[೧೫] ಎಂದು ಸ್ತುತಿಸುತ್ತಾರೆ.

ಕೊಡಗಿನ ಜನಪದರಲ್ಲಿ ಅದರಲ್ಲೂ ಬುಡಕಟ್ಟು ಜನಾಂಗದವರಲ್ಲಿ ಹರಕೆ ಹೊರುವ ಪದ್ಧತಿ ರೂಢಿಯಲ್ಲಿದೆ. ವಿಶೇಷವಾಗಿ ದನಕರುಗಳಿಗೆ ಕಾಯಿಲೆ, ಮಕ್ಕಳಿಗೆ ಕಾಯಿಲೆ, ಹೆಣ್ಣು ಮಕ್ಕಳ ಮದುವೆ ವಿಚಾರ ಬಂದಾಗ ಕಾಡಿನಲ್ಲೆ ಹರಕೆ ಕಟ್ಟಿ ಹಾಡುವ ಹಾಡು ಈ ರೀತಿಯಿದೆ.

ಗೌಡ್ನಕೆರೆ ಅಮ್ಮಂದ್ರೆ ಸಾಮಾನ್ಯದೋಳಲ್ಲಾ
ಕೈ ಎತ್ತಿ ಮುಗಿದ್ರೆ ಕತೆ ಮುಗಿತೂ
ಕೈ ಎತ್ತಿ ಮುಗಿದ್ರೆ ಕತೆ ಮುಗಿತೂ/ ಅಮ್ಗೆ
ವಾರ ವಾರಕ್ಕೂ ಜೋಡಿ ಬೇಟೆ// ಗೌಡ್ನಕೆರೆ ಅಮ್ಮ //

ಬರಬರನೆ ಬಂದಾರೆ ಕುಂಕುಮಾ ತೀಡ್ಯಾರೆ
ಕೋರ್ಢಂದಿ ಕಡಿದು ಎಡೆಮಾಡಿ

ಕೋರ್ದಂದಿ ಕಡಿದು ಎಡೆಮಾಡಿ/ ಅಮ್ಗೆ
ಅಪ್ಪಿದ್ದೂ ಹರಕೆ ತೀರಿಸ್ಯಾರೇ// ಗೌಡ್ನಕೆರೆ ಅಮ್ಮ //

ಮಾರಿ ಕಣಗಲ ಹೂವು ಚಿಗುರು ವನದ ಪತ್ರೆ
ಸುತ್ತಿಂದಾ ತಂದೂ ಸುರಿದ್ಯಾರೆ/
ಸುತ್ತಿಂದಾ ತಂದೂ ಸುರಿದ್ಯಾರೆ/ ಅಮ್ಗೆ
ಮನಸನಾ ಬ್ಯಾಗೆ ಬಿಡಿಸವ್ವಾ// ಗೌಡ್ನಕೆರೆ ಅಮ್ಮ //

ಹರಕೆ ಹೂಡೋರು ಮುಗಿಬಿದ್ದೂ
ಕಾಡುಮೇಡೆಲ್ಲಾ ಬೋರೆಂದೊ// ಗೌಡ್ನಕೆರೆ ಅಮ್ಮ[೧೬] //

ಹೀಗೆ ಆಗಾಗ ಬರುವ ಕಾಯಿಲೆಗಳು ಹೇಗೆ ಬರುತ್ತವೆ, ಯಾರಿಂದ ಬರುತ್ತವೆ ಎಂಬುದನ್ನು ಹಾಡು ಕಟ್ಟಿ ಹಾಡುತ್ತಾರೆ.

ಚಂಡನಾಡುತ ಬಂದ್ಲು / ದಂಡಿನ ಮಾರಮ್ಮ
ಹಿಂದು ಮುಂದಾಗಿ ಹೊತ್ತು / ಚಂಡನಾಡುತ ಬಂದ್ಲು

ಸಂದಿ ಹುಡುಕ್ಯಾಳೆ ಗೊಂದಿ ಹುಡುಕ್ಯಾಳೆ
ಸಂದಿಗೊಂದಗಲ ಹುಡುಕ್ಯಾಳೆ / ಮಾದಿಗರ
ಸೂರ್ಯನಂತಿದ್ದಾಳೆ ರಣಮಾರಿ / ತಾಯಿ ದಂಡಿನ ಮಾರಮ್ಮ
ಜಗ್ಗಸಿ ಮುಂದಲೆಯ ಹಿಡಿದಾಳೆ / ಮಾರೀಮ್ಮ
ಓಡೆಂದಳು ಮೂಡ ಮುಖವಾಗಿ / ಚಂಡನಾಡುತ ಬಂದ್ಲು

ಕಟ್ಯಾಗೆ ಮಾರಮ್ಮ ಬೆಟ್ಟು ಗುಡುವಾಗ
ಕಟ್ಟಾಳು ಬರದೀರೆ ದುರ್ಗೇರ ಕೋಟೆ
ಹೊಕ್ಯ ಮಾತಾಡಿ ಅರಕಲಗೂಡ ಕಡೆಗೆ ಬರುತಾಳೆ/
ಮಾರಮ್ಮ ಚಂಡನಾಡುತ ಬಂದ್ಲು[೧೭]

ಕೇವಲ ಹಬ್ಬ ಹರಿದಿನಗಳು, ಜಾತ್ರೆ, ಉತ್ಸವ, ಮಾರಕ ರೋಗಗಳಿಗೆ ಇಲ್ಲಿನ ಜನಪದ ಹಾಡುಗಳು ಸೀಮಿತವಾಗದೆ ಕೊಡಗನ್ನು ಆಳಿದ ರಾಜರು, ಅವರ ರಾಣಿಯರನ್ನು ಕುರಿತು ಹಾಡುಗಳನ್ನು ಕಟ್ಟಲಾಗಿದೆ.

ರಾಣಿ ಗೌರಮ್ಮಾಜಿ/ ನಾಡಿಗೆ ದೊಡ್ಡೋಳು/
ರಾಣಿ ಗೌರಮ್ಮಾಜಿ/ ನಾಡಿಗೆ ದೊಡ್ಡೋಳು/
ಮಡಿಕೇರಿ ಅರಮನೆ/ ತುಂಬಿ ಮೆರೆದಾಳು/ ರಾಣಿ...
ಚಿಕವೀರಾಜ್ರ ಪಟ್ಟದರಸಿ/ ರಾಣಿ ಗೌರಮ್ಮಾಜಿ/

ಲಿಂಗ್ರಾಜೆಂಬೋರು/ ನಾಡಿನ ದೊರೆಗಳು/
ಲಿಂಗ್ರಾಜ ದೊರೆಗಳ ಮಗ/ ಚಿಕವೀರ ರಾಜೇಂದ್ರ/ ರಾಣಿ...

ಅರಮನೆ ಕಟ್ಟಿದೋರು/ ಅಂಬಾರಿ ಮೆರೆದೋರು/
ರಾಣಿ ಗೌರಮ್ಮಾಜಿ/ ಅಪರಂಜಿ ಅಂಥ ತಾಯಿ/
ಅವ್ರು ಅನ್ನಾನೇ ಹಾಕುತಿದ್ರೂ /ಅರಿವೆಯಾ ಕೊಡುತಿದ್ರೂ/ ರಾಣಿ...

ಚಿಕವೀರರಾಜೇಂದ್ರ ರಾಜ್ರೂ/ ಪಟ್ಟವ ಏರಿದಾರೂ/
ಪಟ್ಟವಾ ಏರಿದಾರೂ/ ಪಾಳೇಯ ಮಾಡಿದರೂ/
ರಾಣಿ ದೇವಮ್ಮಾಜಿ/ ಸೆರೆಮನೆಯಲ್ಲೇ ಇದ್ರೂ/ ರಾಣಿ...

ಅವ್ರು ಭೂತಾಯಂತಾ ತಾಯಿ/ ನಾಡಿಗೆ ದೊಡ್ಡೋರು/
ಸೆರೆಯಲ್ಲಿ ಇದ್ದಾರು/ ಅನ್ನಾನೆ ತೊರೆದಾರು/
ಚಿಕವೀರರಾಜೇಂದ್ರ ದೊರೆ/ ಗ್ಯಾನಾನೆ ಕೊಡಲಿಲ್ಲ/ ರಾಣಿ...

ತಾಯಿ ಗೌರಮ್ಮಾಜಿ/ ಅನ್ನಾನೆ ಕಳಿಸ್ಯಾರೆ/
ರಾಣಿ ಗೌರಾಮ್ಮಾಜಿ/ ಅನ್ನಾವ ಕಳುಹಬೇಡಿ/
ಎಂತಾರೆ ದೇವಮ್ಮಾಜಿ/ ದು:ಖನೆ ಮಾಡುತಾವ/ ರಾಣಿ...[೧೮]

ಹೀಗೆ ಕೊಡಗಿನ ರಾಜರ, ರಾಣಿ ಮಹಾರಾಣಿಯರ, ಅರಮನೆ, ವೈಭವ, ಆಳ್ವಿಕೆ ಮೊದಲಾದ ವಿವರಗಳನ್ನು ಇಲ್ಲಿ ಕಾಣಬಹುದು.

ಕೊಡಗಿಗೆ ಹಿಂದೆ 'ಕೋಡುಮಲೆನಾಡು' ಎಂದಿತ್ತು ಅದು ನಾಡಿಗೆ ದೊಡ್ಡದಾಗಿತ್ತು ಎಂಬ ವಿಚಾರಗಳ ಜೊತೆಗೆ ಹಾಲೇರಿ ವಂಶದ ರಾಜರುಗಳ ವಿವರಗಳನ್ನು ಕಟ್ಟಿಕೊಡುವ ಗೀತೆಗಳು ಈ ಕೆಳಗಿನಂತಿವೆ.

ಕೋಡುಮಲೆ ಹೆಸರು / ನಾಡಿಗೆ ದೊಡ್ಡಾದು
ಹಾಲೇರಿ ವಂಶದ ರಾಜ್ರೂ / ನಾಡಿಗೆ ದೊಡ್ಡೋರು
ವೀರರಾಜ ಎಂಬೋರು / ನಾಡಿಗೆ ದೊಡ್ಡೋರು// ಕೋಡುಮಲೆ...
ಅಪ್ಪಾಜಿ ರಾಜ ಎಂಬೋರು / ನಾಡಿಗೆ ದೊಡ್ಡೋರು
ಅಪ್ಪಾಜರ ಮಗ/ ಮುದ್ದುರಾಜ ಎಂಬೋರು
ಮುದ್ದುರಾಜ ಎಂಬೋರು / ನಾಡಿಗೆ ದೊಡ್ಡೋರು // ಕೋಡುಮಲೆ...
ಇವ್ರು ಕೋಟೆ ಕಟ್ಟಿಸಿದಾರು / ಅರಮನೆ ಕಟ್ಟಿಸಿದಾರು
ಸಿರಿಬಾಯಿ ದೊಡ್ಡ ವೀರಪ್ಪ / ನಾಡಿಗೆ ದೊಡ್ಡೋರು
ನಂಜಂಡ್ನ ಗುಡಿಯ ಕಟ್ಟಿಸಿ / ನಂಜರಾಜ ಪಟ್ನವಾಯ್ತು // ಕೋಡುಮಲೆ...
ದೊಡ್ಡವೀರಪ್ಪ ಎಂಬೋರು / ಎಳ್ಳಾವ್ರ ಸೀಮೆ ಗೆದ್ದೋರು

ಏಳ್ನಾಪ್ರ ಸೀಮೆ ಎಂಬೋದು / ಉತ್ತರ ಕೊಡಗು ಮೈದಾನ
ಚಿಕವೀರಪ್ಪ ದೊರೆಗೆ / ಮಕ್ಕಳೆ ಇರಲಿಲ್ಲಾ // ಕೋಡುಮಲೆ...

ಲಿಂಗರಾಜೆಂಬೋರು / ಕೊಡಗಿನ ದೊರೆಯಾದರೂ
ಲಿಂಗರಾಜ ದೊರೆಗಳು / ಲಕಡಿ ಕೋಟೆ ಕಟ್ಟಿದರು
ಕೋಟೆ ರಾಜನು ಬಂದ / ಕಲ್ಪಾತಿ ಕೋಟೆಯ ಗೆದ್ದುಕೊಂಡ // ಕೋಡುಮಲೆ...

ಲಿಂಗರಾಜೆಂಬೋರು / ನಾಡಿಗೆ ದೊಡ್ಡೋರು
ಲಿಂಗ್ರಾಜರ ಮಗ / ಚಿಕವೀರರಾಜೇಂದ್ರ
ಪಟ್ಟಕ್ಕೆ ಬಂದಾರು / ಪಳಮೆಯಾ ನಡಿಸ್ಯಾರು // ಕೋಡುಮಲೆ...

ರಾಜ್ಯಾದ ಜನಕೆಲ್ಲ / ಕೆರೆಯನ್ನೇ ತೋಡಿಸಿದ್ರು
ಗುಡಿಯನ್ನೇ ಕಟ್ಟಿಸಿದ್ರು / ಗುಡಾರವನ್ನೆ ಕಟ್ಟಿಸಿದ್ರು
ಹಾಡನ್ನೇ ಅವ್ರು ಹಾಡುತಿದ್ರೂ / ಲಿಂಗರಾಜ ದೊರೆಗಳು
ಕಾಡಬೇಟೆ ಮಾಡುತಿದ್ರೂ // ಕೋಡುಮಲೆ...[೧೯]

ಹೀಗೆ ಇಡೀ ಕೊಡಗಿನ ಇತಿಹಾಸ ಪರಂಪರೆಯನ್ನು ಜನಪದ ಹಾಡುಗಳ ಮೂಲಕ ಅವಲೋಕನ ಮಾಡಿದರೆ ಆಳರಸರ, ಮಹಾರಾಜರ ಆಡಳಿತ ವೈಖರಿ ಮತ್ತು ಅವರ ಕರ್ತವ್ಯ ನಿರ್ವಹಣೆಗಳು, ಬುಡಕಟ್ಟು ಜನಪದ ಸಿರಿ, ಹರಕೆ ಒಪ್ಪಿಸುವ ಪದ್ಧತಿ, ದೇವರ ಮೊರೆಹೋಗುವ ಕ್ರಮಗಳು ಸ್ಪಷ್ಟವಾಗಿ ಕಾಣಿಸುತ್ತವೆ.

ಕೊಡವರು ಅವರ ಆಚಾರ, ಸಂಪ್ರದಾಯ, ಮತ್ತಿತರ ಸಂದರ್ಭಗಳಿಗೆ ಅನುಗುಣವಾದ ಮತ್ತು ಪೂರಕವಾದ ಹತ್ತು ಹಲವು ಜನಪದ ಹಾಡುಗಳನ್ನು ಕಟ್ಟಿ ಬೆಳೆಸಿದ್ದಾರೆ. ನಡಿಕೇರಿಯಂಡ ಚಿಣ್ಣಪ್ಪನವರ ಪಟ್ಟೋಲೆ ಪಳಮೆ ಕೊಡವ ಜನಪದದ ಅನೇಕ ಹಾಡುಗಳನ್ನು ಕಟ್ಟಿಕೊಟ್ಟಿದೆ. ಅವುಗಳಲ್ಲಿ ಬಾಳೋಪಾಟ್, ಬಟ್ಟೆಪಾಟ್, ಮಂಗಲಪಾಟ್, ಜಾನಪದ ವೀರಂಗಲ್ ಪಾಟ್, ದೇಶಕೆಟ್ಟ್ ಪಾಟ್, ಚಾವುಪಾಟ್, ಪುತ್ತರಿ ಪಾಟ್, ಕಾವೇರಿ ಪುರಾಣ ಮುಂತಾದವುಗಳು ಪ್ರಮುಖವಾಗುತ್ತವೆ.

ಕೊಡವರ ಆಂದೋಳತ್ ಪಾಟ್ ಹಾಗೂ ನೆಲ್ಲಕ್ಕಿ ನಡುಬಾಡೆ ಜನಪದ ಸಂಕಲನಗಳಲ್ಲಿ, ದೇಶಕೇಟ್ಟ್ ಪಾಟ್‌ಗಳಲ್ಲಿ ಕೊಡಗಿನಲ್ಲಿ ಆಂಗ್ಲರ ಆಳ್ವಿಕೆಯ ವಿಷಯ ಹಾಗೂ ಸಮಕಾಲೀನ ಜಿಲ್ಲಾ ಪರಿಷತ್‌ನ ವಿಷಯವನ್ನು ಅಳವಡಿಸಿಕೊಂಡು ಹಾಡುತ್ತಿರುವುದು ಮತ್ತು ಪರಂಪರೆಯಲ್ಲಿ ಬಂದ ನಂಬಿಕೆಗಳನ್ನು ಮೀರಿ ವರ್ತಮಾನದ ಅಗತ್ಯತೆ ಹಾಗೂ ಪ್ರಭಾವಗಳಿಗೆ ಅನುಗುಣವಾಗಿ ಜಾನಪದ ಹಾಡು ಹಾಗೂ ಆಚರಣೆಗಳನ್ನು ಮಾರ್ಪಾಡು ಮಾಡಿಕೊಂಡಿರುವುದು ಕಾಣಬರುತ್ತದೆ. ಆಧುನಿಕ ಸಂದರ್ಭದಲ್ಲಿ ಕೊಡಗಿನ ಜಾನಪದದಲ್ಲಿಯೂ ಪಲ್ಲಟಗಳಾಗಿ ತನ್ನ

ಮೂಲ ಸತ್ವವನ್ನು ಉಳಿಸಿಕೊಂಡಿರುವುದರ ಜೊತೆಗೆ ವರ್ತಮಾನದ ವಿಷಯಗಳನ್ನು ತಳುಕು ಹಾಕಿಕೊಂಡು ವಿಕಾಸಗೊಂಡಿವೆ.

ಹೀಗೆ ಸಂವೇದನಾಶೀಲರೂ, ನಡೆನುಡಿಗಳಲ್ಲಿ ಕಲಾತ್ಮಕತೆಯನ್ನು ಹೊಮ್ಮಿಸುವವರೂ, ಮುಗ್ದರು, ಧೀರರೂ, ಶೂರರೂ, ಸ್ವಾಭಿಮಾನಿಗಳೂ ಆದ ಕೊಡಗಿನ ಜನತೆ ತಮ್ಮ ಸಾಂಪ್ರದಾಯಿಕವಾದ ಜೀವನದ ಅನೇಕ ಪದ್ಧತಿಗಳನ್ನು ಇನ್ನೂ ಉಳಿಸಿಕೊಂಡಿದ್ದಾರೆ. ಬುಡಕಟ್ಟು ಸಮುದಾಯದ ಜೊತೆಜೊತೆಗೆ ಹಳ್ಳಿ-ಹಾಡಿ, ನಗರವೆಂಬ ಭೇದವಿಲ್ಲದೆ ಎಲ್ಲ ಸಮಾಜದವರು ಇಲ್ಲಿನ ಜಾನಪದವನ್ನು ಬೆಳೆಸಿ ಸಮೃದ್ಧಗೊಳಿಸುವಲ್ಲಿ ತಮ್ಮದೇ ಪಾತ್ರ ನಿರ್ವಹಿಸಿದ್ದಾರೆ.

## ೩.೩. ಪ್ರಾಚೀನ ಸಾಹಿತ್ಯ

ಕೊಡಗು ಜಿಲ್ಲೆಯ ಸಾಹಿತ್ಯ ಮತ್ತು ಸಂಸ್ಕೃತಿಯ ಬೆಳವಣಿಗೆಯನ್ನು ಕ್ರಿ. ಶ. ೯ನೇ ಶತಮಾನದ ಉತ್ತರಾರ್ಧದಿಂದ ೧೯ನೆ ಶತಮಾನದವರೆಗೆ ಅನೇಕ ವಿದ್ವಾಂಸರು ನಡೆಸಿರುವ ಅಧ್ಯಯನದ ಮೂಲಕ ಗೊತ್ತಾಗುತ್ತದೆ. ಗಂಗ, ಕೊಂಗಾಳ್ವ, ಹೊಯ್ಸಳ ಹಾಗೂ ಹಾಲೇರಿ ಅರಸರ ಕಾಲದಿಂದ ಕೊಡಗು ಜಿಲ್ಲೆಯಲ್ಲಿ ಶಾಸನಗಳ ಮೂಲಕ ಗ್ರಂಥಕಾರರಿಂದ ರಚಿತವಾದ ಬರಹ ಮತ್ತು ಪುಸ್ತಕಗಳಿಂದ ಸಾಹಿತ್ಯದ ಬೆಳವಣಿಗೆಯನ್ನು ಅರಿಯಲು ಸಾಧ್ಯವಾಗುತ್ತದೆ. ಕೊಡಗಿನ ಪ್ರಾಚೀನ ಕವಿಗಳ ಪರಂಪರೆಯನ್ನು ಸುಮಾರು ಹತ್ತನೇ ಶತಮಾನದಿಂದ ಗುರುತಿಸಲು ವಿದ್ವಾಂಸರುಗಳು ಪ್ರಯತ್ನಿಸಿದ್ದಾರೆ. ಕೊಡಗು ಪ್ರದೇಶದ ಪ್ರಥಮ ಕವಿ ಇಲ್ಲಿನ ಬೆಳ್ಳೂರು ಗ್ರಾಮದಲ್ಲಿ ವಾಸವಿದ್ದು, ಲಕ್ಷ್ಮಣತೀರ್ಥ ನದಿ ಪ್ರಾಂತ್ಯದ ಆಡಳಿತ ನೋಡಿಕೊಳ್ಳುತ್ತಿದ್ದ 'ಛಂದೋಂಬುಧಿ' ಬರೆದ ಒಂದನೇ ನಾಗವರ್ಮ ಎಂದು ಹೇಳಲಾಗಿದೆ. ಕನ್ನಡದಲ್ಲಿ 'ಪುಣ್ಯಾಸ್ರವ' ಎಂಬ ಕಾವ್ಯವನ್ನು ಬರೆದಿರುವ ಗುಣಸೇನ ಪಂಡಿತನೆಂಬುವವನು ಕೊಡಗಿನವನು ಎಂಬುದಕ್ಕೆ ನಿದರ್ಶನವಿದೆ ಎನ್ನಲಾಗಿದೆ.

ಕೊಡಗಿನ ನಂಜರಾಯ ಪಟ್ಟಣದಲ್ಲಿ ಆಳ್ವಿಕೆ ಮಾಡುತ್ತಿದ್ದ ದೇವಪ್ಪನೆಂಬ ಜೈನ ಕವಿ ರಚಿಸಿರುವ 'ರಾಮವಿಜಯ ಕಾವ್ಯ'ವು ಕೊಡಗಿನ ಪ್ರಪ್ರಥಮ ಉಪಲಬ್ಧ ಮಹಾಕಾವ್ಯವೆಂದು ಹೇಳಲಾಗಿದೆ. ಈ ಕಾವ್ಯವು ಜೈನಕಥಾ ಪರಂಪರೆಗನುಗುಣವಾದ ರಾಮಕಥಾ ಕಾವ್ಯವಾಗಿದ್ದು, ಸುಮಾರು ಇಪ್ಪತ್ತು ಸಂಧಿಗಳಿರುವ ಮೂರು ಸಾವಿರ ಸಾಂಗತ್ಯ ಪದ್ಯಗಳನ್ನು ಹೊಂದಿದೆ. ಹುಣಸೂರು ತಾಲೂಕಿನ ರಾವಂದೂರು ಗ್ರಾಮದ ಬ್ರಾಹ್ಮಣ ವಂಶದಲ್ಲಿ ೧೫೪೦ರಲ್ಲಿ ಜನಿಸಿದ ಈತ ಕೊಡಗಿಗೆ ಬಂದು ಚೆಂಗಾಳ್ವರ ಅರಸ ನಂಜುಂಡರಾಜನ ಆಶ್ರಯ ಪಡೆದು ನಂತರ ಆತನ ಮಂತ್ರಿಯೂ ಆಗಿ ಸೇವೆ ಸಲ್ಲಿಸಿರುವುದು ತಿಳಿದು ಬರುತ್ತದೆ. ಜಿನಭಕ್ತರ ಪ್ರಾರ್ಥನೆಯಂತೆ ರಾಮವಿಜಯ ಕಾವ್ಯವನ್ನು ಸಾಂಪ್ರದಾಯಿಕ ಶೈಲಿಯಲ್ಲಿ ಬರೆದಿರುವ ದೇವಪ್ಪ ಕವಿಯೇ ಹೇಳಿರುವಂತೆ 'ರಸ ಒಂಬತ್ತಂಗ ಪದಿನೆಂಟಲ್ಲದೆ ಎಸೆವುದೇ ಕೃತಿ ಲೋಕದೊಳು?

ವಸನಾಭರಣವಿಲ್ಲದ ಪೆಣ್ಗಳು ಮೋಹಿಸಬಲ್ಲರೇ ವಸುಧೆಯೊಳು[೨೦] ಎಂದು ಸಾರಿದ ರಸಾಲಂಕಾರ ಪೂರ್ಣ ಕಾವ್ಯವಾಗಿದೆ.

ಹಿಂದೆ ಕೊಡಗಿನ ಕೆಲವು ಪ್ರದೇಶಗಳಲ್ಲಿ ವಾಸವಾಗಿದ್ದು ಕಾವ್ಯ ರಚನೆ ಮಾಡಿದ ಕೆಲವು ಪ್ರತಿಭಾನ್ವಿತ ಕವಿಗಳು ಕೊಡಗಿನ ಸಾಹಿತ್ಯ ಚರಿತ್ರೆಯಲ್ಲಿ ಗೌರವದ ಸ್ಥಾನ ಪಡೆದಿದ್ದಾರೆ. ಹದಿನಾರನೇ ಶತಮಾನದಲ್ಲಿದ್ದ ಮೂರನೇ ಮಂಗರಸ 'ಜಯನೃಪ ಕಾವ್ಯ', 'ಸಮ್ಯುಕ್ತ ಕೌಮುದಿ' ಗ್ರಂಥಗಳನ್ನು ರಚಿಸಿದ್ದಾನೆ. ಚೆಂಗಾಳ್ವ ಅರಸರ ಆಶ್ರಯದಲ್ಲಿದ್ದು ನಂಜುಂಡ ಕವಿ ಬರೆದಿರುವ 'ಕುಮಾರ ರಾಮನ ಸಾಂಗತ್ಯ' ಕೃತಿಯೂ ಬಹಳ ಮುಖ್ಯವಾದದ್ದು. ಕ್ರಿ ಶ. ೧೭೮೯ರಿಂದ ೧೮೦೯ರವರೆಗೆ ಕೊಡಗಿನ ಆಡಳಿತ ನಡೆಸಿದ ದೊಡ್ಡ ವೀರರಾಜೇಂದ್ರ ಒಡೆಯನು 'ರಾಜೇಂದ್ರ ನಾಮೆ'ಯನ್ನು ಕನ್ನಡದಲ್ಲಿ ಬರೆಸಿರುವನು. ಕೊಡಗಿನ ಚರಿತ್ರೆಯನ್ನು ಅಳವಡಿಸಿಕೊಂಡಿರುವ 'ರಾಜೇಂದ್ರನಾಮೆ'ಯನ್ನು ಆಗಿನ ಲೆಫ್ಟಿನೆಂಟ್ ಆಗಿದ್ದ ರಾಬರ್ಟ್ ಅಬರ್‌ಕ್ರಾಂಬಿ ಇಂಗ್ಲಿಷ್ ಭಾಷೆಗೆ ಅನುವಾದಿಸಿರುತ್ತಾನೆ. ನಂತರದಲ್ಲಿ ಆಳ್ವಿಕೆ ಮಾಡಿದ ಎರಡನೇ ಲಿಂಗರಾಜನು ಕವಿಯೂ, ಗ್ರಂಥಕರ್ತನೂ ಆಗಿದ್ದನು. ಈತ ಪ್ರಕಟಿಸಿರುವ 'ಲಿಂಗರಾಜನ ಶಿಸ್ತು' ಕೊಡಗಿನ ಭೂಮಿಗಳಿಗೆ ಸಂಬಂಧಿಸಿದ ಕೃತಿ. ಅಲ್ಲದೆ ರಾಜನ ಹಳ ಹುಕುಂಗಳು ಮತ್ತು ಆಜ್ಞೆಯನ್ನು ಕನ್ನಡದಲ್ಲಿ ಬರೆಸಿದ್ದಾನೆ.

ಹದಿನೇಳನೆಯ ಶತಮಾನದ್ದು ಎಂದು ಹೇಳಲಾಗುವ ಗೋವಿಂದ ವೈದ್ಯ ಕವಿಯ 'ಕಂಠೀರವ ನರಸರಾಜ ವಿಜಯ'ವು ಗಮನಾರ್ಹ ಕೃತಿಯಾಗಿದೆ. ಇದರಲ್ಲಿ ಕಾವೇರಿ ವರ್ಣನೆ, ಪಾಲ್ಪರೆ ಕೋಟೆಯ ವರ್ಣನೆ, ಕೊಡಗಿನ ದಟ್ಟ ಕಾಡಿನ ಚಿತ್ರಣ, ಕೊಡಗರ ಪರಿವಾರದ ವರ್ಣನೆ ದಾಖಲೆಗೊಂಡಿದೆ. ಈ ಕಾವ್ಯದಲ್ಲಿ ಕೊಡಗಿನ ಕಾವೇರಿಯನ್ನು ವರ್ಣಿಸುವ ಪದ್ಯವೊಂದು ಈ ಕೆಳಗಿನಂತಿದೆ.

ಇಳಿದಗಸ್ತ್ಯನ ವರಕಮಂಡಲದಿಂದ
ಜಳಪೂರ್ಣವಾದ ಕಾವೇರಿ
ಬಳಿ ಬ್ರಹ್ಮಗಿರಿಯಿಂದಲಿಳಿದು ತಾಪುಟ್ಟುವ
ಬಲು ಸಂಭ್ರಮವನೇನೆಂಬೆ.[೨೧]

ಈ ಕಾವ್ಯದಲ್ಲಿ ದೊರೆಯುವ ಪದ್ಯಗಳೇ ಕೊಡಗನ್ನು ವರ್ಣಿಸಿದ ಮೊದಲ ಪದ್ಯಗಳು ಎಂದು ಹೇಳಲಾಗಿದೆ. ಗೋವಿಂದ ವೈದ್ಯನ ಈ ಕಾವ್ಯದ ನಂತರ ಕೊಡಗನ್ನು ಕುರಿತ ಸಾಹಿತ್ಯ ಸಿಗುವುದು ೨೦ನೇ ಶತಮಾನದ ನಂತರದಲ್ಲಿಯೇ.

## ೩.೪. ಆಧುನಿಕ ಸಾಹಿತ್ಯ

ಸಾಹಿತ್ಯದ ಆರಂಭದಿಂದಲೇ ಪುರಾಣ ಪ್ರಧಾನವಾದ ವಸ್ತುಗಳನ್ನು ಮುಖ್ಯವಾಗಿಟ್ಟು ಕೊಂಡು ರಚಿತವಾದ ಕೃತಿಗಳೇ ಅಧಿಕವಾಗಿದ್ದವು. ಕತೆ, ಕಾವ್ಯ, ನಾಟಕ ಯಾವುದೇ ಆಗಿದ್ದರೂ ಅದು ಕಾವ್ಯವೇ ಆಗಿರಬೇಕು ಎಂಬ ಪರಿಮಿತಿಯಲ್ಲಿ ಕೃತಿಗಳು ರಚನೆಯಾಗುತ್ತಿದ್ದವು. ಇದರ ಪರಿಣಾಮವಾಗಿ ಅನೇಕ ಮಹಾಕಾವ್ಯಗಳೂ ಸೇರಿದಂತೆ ಪುರಾಣಾಧಾರಿತ ಲೌಕಿಕ ಮತ್ತು ಆಧ್ಯಾತ್ಮಿಕ ಕಾವ್ಯಗಳು ರಚನೆಯಾದವು. ಹತ್ತೊಂಬತ್ತನೇ ಶತಮಾನದ ಆರಂಭದಲ್ಲಿ ಆಧುನಿಕ ಸಾಹಿತ್ಯದ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ಬಿ. ಎಂ. ಶ್ರೀಕಂಠಯ್ಯನವರ 'ಇಂಗ್ಲಿಷ್ ಗಿತೆಗಳು' ಎಂಬ ಅನುವಾದಿತ ಕವನ ಸಂಗ್ರಹದ ಮೂಲಕ ಆಧುನಿಕ ಸಾಹಿತ್ಯದ ಆರಂಭವಾಗುತ್ತದೆ. 'ಇಂಗ್ಲಿಷ್ ಗೀತೆಗಳು' ಮನೋಧರ್ಮ, ಅದರ ಪ್ರಯೋಗಶೀಲತ್ವ, ಅದರ ಪ್ರಭಾವ ಇವನ್ನು ಪರಿಗಣಿಸಿದಾಗ ಆಧುನಿಕ ಕನ್ನಡ ಸಾಹಿತ್ಯ ಈ ಕೃತಿಯಲ್ಲಿ ತನ್ನ ಉದಯವನ್ನು ಸಾರಿ ಹೇಳಿತು'[೨೨] ಎಂಬ ಮಾತಗಳಲ್ಲಿ ಅಂದು ಈ ಕೃತಿಯು ಕನ್ನಡ ಸಾಹಿತ್ಯದಲ್ಲಿ ಉಂಟು ಮಾಡಿದ ಪಲ್ಲಟಗಳು ಸ್ಪಷ್ಟವಾಗುತ್ತವೆ. ಹತ್ತೊಂಬತ್ತನೇ ಶತಮಾನದ ಕೊನೆಯ ಮತ್ತು ಇಪ್ಪತ್ತನೇ ಶತಮಾನದ ಮೊದಲ ಎರಡು ದಶಕಗಳು ಇಡೀ ಭಾರತದಲ್ಲಿ ಮಹತ್ವದ ಬದಲಾವಣೆಗಳ ಕಾಲವಾಗಿದೆ. ಇದರ ಪ್ರಭಾವ ಮತ್ತು ಪ್ರೇರಣೆ ಕನ್ನಡ ಸಾಹಿತ್ಯದ ಮೇಲೂ ಆಗಿರುವುದು ಸಹಜವಾಗಿದೆ.

'ಯಾವ ಕಾಲದ, ದೇಶದ ಸಾಹಿತ್ಯವಾದರೂ ಆ ದೇಶ–ಕಾಲಗಳ ಸಂದರ್ಭದಲ್ಲಿ ಬೆಳೆಯಬೇಕಾಗುತ್ತದೆ. ಅದರ ಬಣ್ಣವನ್ನು ತಳೆಯಬೇಕಾಗುತ್ತದೆ'[೨೩] ಎಂಬ ನುಡಿಗಳ ಮೂಲಕ ಕನ್ನಡ ಸಾಹಿತ್ಯದೊಳಗೆ ಕೊಡಗು ಚಿತ್ರಿತವಾಗಿರುವ ಬಗೆಯನ್ನು ಕಂಡುಕೊಳ್ಳಬಹುದು. ಕನ್ನಡ ಸಾಹಿತ್ಯ ಕೃತಿಗಳೊಳಗೆ ಕೊಡಗು ಭೂಪ್ರದೇಶ, ಪರಿಸರ, ಜನಜೀವನದ ಸ್ಥಿತಿಗತಿ, ಸಂಸ್ಕೃತಿ ಮೊದಲಾದ ವಿಚಾರಗಳನ್ನು ಕುರಿತು ಬರೆಯಲಾಗಿರುವ ಕೊಡಗಿನವರು ಮತ್ತು ಕೊಡಗೇತರರಿಂದ ರಚನೆಯಾಗಿರುವ ಕೃತಿಗಳನ್ನು ಮತ್ತು ಕರ್ತೃಗಳನ್ನು ಪರಿಚಯಿಸುವ ಕೆಲಸವನ್ನು ಕಾವ್ಯ, ಕಾದಂಬರಿ, ಕತೆ, ನಾಟಕ, ಮತ್ತು ಇತರೆ ಎಂದು ವಿಭಾಗ ಮಾಡಿಕೊಂಡು ಅಧ್ಯಯನ ನಡೆಸಲಾಗಿದೆ.

### ಅ. ಕಾವ್ಯ

#### ಎದುರ್ಕಳ ಶಂಕರನಾರಾಯಣ ಭಟ್ಟ

ಶಂಕರನಾರಾಯಣ ಭಟ್ಟರು ಭಾಗಮಂಡಲದವರು. ಇವರು ರಚಿಸಿರುವ 'ಶ್ರೀ ಕಾವೇರಿ ವೈಭವ' ಕೃತಿ ಕಾವೇರಿ ಕುರಿತ ವಿಶ್ವಕೋಶದಂತಿದೆ. ಇದರಲ್ಲಿ ಕಾವೇರಿಯ ಲೌಕಿಕ ಮತ್ತು ಆಧ್ಯಾತ್ಮಿಕ ವೈಭವಗಳನ್ನು ವಿವರಿಸಿದ್ದಾರೆ. ಇದರಲ್ಲಿ ಕಾವೇರಿ ನದಿಯ ಉಗಮದಿಂದ ಹಿಡಿದು

ಅದು ಸಮುದ್ರದಲ್ಲಿ ಸೇರಿಕೊಳ್ಳುವವರೆಗೂ ಪ್ರಯಾಣಿಸಿ, ಕಾವೇರಿಯ ದಡದಲ್ಲಿ ತಲೆ ಎತ್ತಿನಿಂತಿರುವ ಪುಣ್ಯ ಸ್ಥಳಗಳ ಪುರಾಣಗಳನ್ನು ವರ್ಣಿಸಿದ್ದಾರೆ.

**ಐ. ಮಾ. ಮುತ್ತಣ್ಣ**

ಇವರು 'ಮುತ್ತಣ್ಣನ ಕವನಗಳು' ಎಂಬ ಶೀರ್ಷಿಕೆಯಲ್ಲಿ ಮೂರು ಭಾಗಗಳಲ್ಲಿ ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಮೊದಲ ಸಂಕಲನದಲ್ಲಿರುವ 'ಹುತ್ತರಿ' (ಪುಟ.೧೩), 'ಜೀವನದಿ' (ಪುಟ. ೮೫), 'ಕಾವೇರಿ'(ಪುಟ.೧೪೯) ಎಂಬ ಪದ್ಯಗಳು ಕೊಡಗು ಪ್ರದೇಶದ ಹಬ್ಬ, ನದಿಗಳು ಮತ್ತು ಅವುಗಳ ವೈಶಿಷ್ಟ್ಯಗಳನ್ನು ವಿವರಿಸುತ್ತವೆ.

**ನೀಲಮ್ಮ ಮುತ್ತಣ್ಣ**

'ಯೋಗಿನಿ' ಎಂಬ ಕಾವ್ಯನಾಮದಲ್ಲಿ ಸಾಹಿತ್ಯ ವಲಯದಲ್ಲಿ ಗುರುತಿಸಿಕೊಂಡಿದ್ದಾರೆ. ಕೊಡಗಿನಲ್ಲಿ ಮಹಿಳಾ ಬರಹಗಾರರು ತುಂಬಾ ವಿರಳವಾಗಿದ್ದ ಕಾಲದಲ್ಲಿ ಹಲವಾರು ಕಥೆ, ಕವನ ಹಾಗೂ ಲೇಖನಗಳನ್ನು ಪತ್ರಿಕೆಗಳಲ್ಲಿ ಬರೆಯುತ್ತಿದ್ದವರು. ಇವರು ರಚಿಸಿರುವ 'ವಾಸ್ತವ' ಕವನ ಸಂಕಲನ ಕೊಡಗಿನ ಪ್ರಕೃತಿ, ಜನಸಮುದಾಯ, ಸಂಸ್ಕೃತಿ, ಕೊಡಗರ ಶೌರ್ಯಗಳ ಮೇಲೆ ಬೆಳಕು ಚೆಲ್ಲಬಹುದಾದ ಕೃತಿಯಿದು. ಇದರಲ್ಲಿ ಒಟ್ಟು ೪೪ ಕವಿತೆಗಳಿದ್ದು, ಕೊಡಗಿನ ನೆಲ-ಜಲ, ರಕ್ಷಣೆಯ ಬಗ್ಗೆ ಕಾಳಜಿ ವ್ಯಕ್ತಪಡಿಸಿರುವುದು ಕಾಣಿಸುತ್ತದೆ. ಕೊಡಗಿನ ಲೇಖನಿ-ಹಲ, ಫೀಲ್ಡ್‌ಮಾರ್ಷಲ್-ವರಪುತ್ರ ಕಾರ್ಯಪ್ಪ, ಬೆಟ್ಟತ್ತೂರು, ಮೊದಲಾದ ಕವನಗಳು ಕೊಡಗನ್ನು ಕುರಿತಾದವುಗಳೇ ಆಗಿವೆ. ಇದರೊಂದಿಗೆ ಅಚ್ಚುನಾಯಕ, ಪೊನ್ನಪ್ಪ ಹಾಗೂ ಅಂಕುರ, ಮಸಣದ ಕೂಗು, ಕವಿಮುಗುಳು ಇವರ ಇನ್ನಿತರ ಪ್ರಕಟಿತ ಪುಸ್ತಕಗಳು

**ಕವಿತಾ ರೈ**

**ಕೊಡಗಿನ ಶತಮಾನದ ಕಾವ್ಯ:** ಕವಿತಾ ರೈ ಅವರು ಆನಂದ ಕೋಡಿಂಬಳ ಅವರೊಂದಿಗೆ ಸಂಪಾದಿಸಿರುವ, ಬೆಂಗಳೂರಿನ ಕ್ರೈಸ್ಟ್ ಯೂನಿವರ್ಸಿಟಿ ಪ್ರಕಟಿಸಿರುವ ಬೃಹತ್ ಕಾವ್ಯ ಸಂಕಲನವಿದು. ಕೊಡಗಿನ ನೂರಕ್ಕೂ ಹೆಚ್ಚು ಕವಿಗಳು ರಚಿಸಿರುವ ಇನ್ನೂರಕ್ಕೂ ಹೆಚ್ಚು ಕವನಗಳು ಈ ಕೃತಿಯಲ್ಲಿ ಅಡಕವಾಗಿವೆ. ಈ ಸಂಕಲನದಲ್ಲಿ ನವೋದಯ ಕಾವ್ಯದ ರಮ್ಯತೆಯನ್ನು ಹಾಗೂ ಸಮಕಾಲೀನ ಸಾಮಾಜಿಕ ಮತ್ತು ರಾಜಕೀಯತೆಗೆ ಪ್ರತಿಕ್ರಿಯಿಸುವ ಸ್ಪಂಧನ ಗುಣವನ್ನು ಕಾಣಬಹುದು. ಒಂದು ಶತಮಾನದ ಕವನಗಳು ಇಲ್ಲಿ ಒಂದುಗೂಡಿರುವುದರಿಂದ ಆಧುನಿಕ ಕಾವ್ಯ ಪರಂಪರೆಗಳಾದ ನವೋದಯ, ನವ್ಯ, ದಲಿತ-ಬಂಡಾಯ ಮನೋಧರ್ಮದ ಲಕ್ಷಣಗಳು ದೊರೆಯುತ್ತವೆ.

ಕೊಡಗಿನ ಪ್ರಕೃತಿಯ ಅನನ್ಯ ವರ್ಣನೆ, ಕಾವೇರಿ ನದಿಯ ಕುರಿತಂತೆ ರಚಿತಗೊಂಡಿರುವ ಕವನಗಳು ಪ್ರಕೃತಿಯನ್ನು ದೈವೀ ಶಕ್ತಿಯ ಸಾಕ್ಷಾತ್ಕಾರದ ಮೂಲದಲ್ಲಿ ಮಾತ್ರವಲ್ಲದೆ.

ಆತ್ಮೋನ್ನತಿಯ ಸಾಧಕವಾಗಿ ಕಟ್ಟಿಕೊಡುತ್ತವೆ. ಪಂಜೆ ಮಂಗೇಶರಾಯ, ಭಾರತೀಸುತರಿಂದ ಆರಂಭಗೊಂಡಿರುವ ಈ ನಿಸರ್ಗ ಪರಿಪೂರ್ಣ ಗ್ರಹಿಕೆಯು ಇತ್ತೀಚಿನ ಯುವ ಕವಿಗಳ ಕವನಗಳಲ್ಲಿ ಬಹುಮುಖಿ ಆಯಾಮಗಳಲ್ಲಿ, ಮನೋಧರ್ಮಗಳಲ್ಲಿ ಪ್ರತಿಬಿಂಬಿತಗೊಂಡಿವೆ. ಈ ಸಂಕಲನದಲ್ಲಿ ಐ. ಮಾ. ಮುತ್ತಣ್ಣನವರು ರಚಿಸಿರುವ 'ಲೋಕದರ್ಶನ' ಎಂಬ ಕಾವ್ಯ ಷಟ್ಪದಿ ರೂಪದ ನೂರು ಪದ್ಯಗಳಿಂದ ಕೂಡಿದೆ. ಇದೊಂದು ಮುತ್ತಣ್ಣನವರ ವಿಶಿಷ್ಟ ಪ್ರಯೋಗವೆಂದೇ ಹೇಳಬಹುದು. ಇವರದೇ ಆದ 'ಹುತ್ತರಿ', ಭಾರತೀಸುತರ 'ಕಾವೇರಿ', ಎಂ. ಜಿ ನಾಗರಾಜ್ ಅವರ 'ಕವೇರ ಪುತ್ರಿಗೆ ಅಹವಾಲು', ಯದುಮಣಿಯವರ 'ನಾವು ಕೊಡವರು', ಚಂದ್ರಶೇಖರ ಮಲ್ಲೋಲರಹಟ್ಟಿಯವರ 'ಕೊಡಗಿನಲ್ಲಿ ಮುಂಜಾನೆ', ಬಿ.ಎ. ಷಂಶುದ್ದೀನ್‌ರವರ 'ರಾಜಾಸೀಟ್ ಹಾಡಾಯಿತು', ಶ್ರೀಧರ ಹೆಗಡೆಯವರ 'ಮಡಿ-ಕೇರಿ', ಕವಿತಾ ರೈ ಅವರ 'ಹುತ್ತರಿ', ಬಿ. ಜಿ. ರಘುನಾಥ ನಾಯಕ್ ಅವರ 'ನಾ ಬಯಸಿದ ಕೊಡಗು' ಮತ್ತು 'ಕೊಡಗಿನ ಕಾರ್ಯಪ್ಪಜ್ಜ' ಮೊದಲಾದ ಕವನಗಳು ಕೊಡಗಿನ ರಾಷ್ಟ್ರೀಯತೆಯನ್ನು ಕಟ್ಟಿಕೊಡುವಂತಹವುಗಳಾಗಿವೆ. ಒಟ್ಟಿನಲ್ಲಿ ಲೇಖಕರು ಹೇಳುವಂತೆ 'ಕೊಡಗಿನ ಶತಮಾನದ ಕಾವ್ಯ'ದಲ್ಲಿ ಕೊಡಗಿನ ಕವಿಗಳು ಕಂಡ 'ಕನಸು' 'ಸ್ವಾತಂತ್ರ್ಯ' ಮತ್ತು 'ಸತ್ಯ' ಇವುಗಳನ್ನು ಹೊಸ ಬಗೆಯಲ್ಲಿ ಕಾಣುವ ಪ್ರಯತ್ನವಾಗಿದೆ.[೨೪]

ಹೀಗೆ ಕನ್ನಡ ಸಾಹಿತ್ಯ ಸಾರಸ್ವತ ಲೋಕದಲ್ಲಿ ಕೊಡಗಿನ ಸಂಸ್ಕೃತಿ, ಪ್ರಕೃತಿ, ಹವಾಮಾನ ಕೊಡವರ ಸಾಹಸಗಳನ್ನು ಮೆಚ್ಚಿ ಹಲವಾರು ಕನ್ನಡ ಕವಿಗಳು ಬಿಡಿ ಕವನಗಳ ಮೂಲಕವೂ ವರ್ಣಿಸಿದ್ದಾರೆ. ಪಂಜೆಯವರು, ಕುವೆಂಪುರವರೂ ಒಳಗೊಂಡಂತೆ ಬಾಹ್ಯ ಕೊಡಗಿನ ಅನೇಕ ಶ್ರೇಷ್ಠ ಕವಿಗಳು ಇಲ್ಲಿನ ಪ್ರಾಕೃತಿಕ ಸೊಬಗನ್ನು ಕಂಡು ಹಾಡಿ ಹೊಗಳಿದವರಿದ್ದಾರೆ. ಅಂತ ಬಿಡಿಗವಿತೆಗಳಗಳನ್ನು ಈ ಕೆಳಗಿನಂತೆ ವಿವರಿಸಬಹುದು.

ಹಿರಿಯ ಕವಿಗಳಾದ ಡಿ. ವಿ. ಗುಂಡಪ್ಪನವರು ಕೊಡಗಿನ ಪ್ರಕೃತಿಯ ಬಗ್ಗೆ 'ಕೊಡಗಿನ ಬೆಡಗು'ಎಂಬ ಕವಿತೆಯಲ್ಲಿ

ಪ್ರಕೃತಿಯ ನರ್ತನರಂಗಂ
ಸುಕೃತಾತ್ಮರಿಗಿದುವೆ ಲೋಚನೋತ್ಸವ ರಂಗಂ
ಅಕೃತಕ ಕವಿತಾ ರಂಗಂ
ವಿಕೃತ ಮನಸ್ಕರಿಗಿದೊಂದು ಶಾಂತಿಯ ರಂಗಂ.

ಗಿರಿಗಳ ಕಂದರಗಳ ನಿ
ರ್ಝರಗಳ ವಿಪಿನಗಳ ವಕ್ರ ಪಥಗಳ ದರಸುಂ
ದರ ಶಂಕರ ರೂಪಂಗಳ
ನರಿವೊಡೆ ನೀಂ ನಡೆದು ನೋಡು ಕೊಡಗಿನ ಬೆಡಗಂ[೨೫]

ಎಂದು ಕೊಡಗಿನ ಪರ್ವತ ಪಂಕ್ತಿ, ಸುಳಿದಾಡುವ ಮೋಡಗಳ ರಾಶಿ, ಸುಂದರವಾಗಿ ಕಾಣುವ ಅರಣ್ಯ ಸಂಪತ್ತು, ವಕ್ರ ವಕ್ರವಾಗಿರುವ ರಸ್ತೆಗಳು, ಜಲಪಾತಗಳು ಮತ್ತು ಸುಕೃತಾತ್ಮರಿಗೆ ಕೊಡಗು ಕಾಣಿಸುವ ಬಗೆಯನ್ನು ವಿವರಿಸುತ್ತಾರೆ.

'ಕವಿಶಿಷ್ಯ' ಎಂದೇ ಖ್ಯಾತಿ ಪಡೆದ ಪಂಜೆ ಮಂಗೇಶರಾಯರು ಕೊಡಗನ್ನು ಬಹಳ ವಿಸ್ಮಯದಿಂದ ನೋಡಿರುವುದು 'ಹುತ್ತರಿ ಹಾಡು' ಎಂಬ ಪದ್ಯದಲ್ಲಿ ಕಂಡುಬರುತ್ತದೆ. ಇಡೀ ಕೊಡಗರು ಈ ಪದ್ಯವನ್ನು ಮೆಚ್ಚಿಕೊಂಡಿದ್ದಾರೆ.

ಎಲ್ಲಿ ಭೂರಮೆ ದೇವಸನ್ನಿಧಿ ಬಯಸಿ ಬಿಮ್ಮನೆ ಬಂದಳೋ?
ಎಲ್ಲಿ ಮೋಹನ ಗಿರಿಯ ಬೆರಗಿನ ರೂಪಿನಿಂದಲಿ ನಿಂದಳೋ?
ಎಲ್ಲಿ ಮುಗಿಲಲಿ ಮಿಂಚಿನೋಲ್ ಕಾವೇರಿ ಹೊಳೆ ಹೊಳೆ ಹೊಳೆವಳೋ?
ಎಲ್ಲಿ ನೆಲವನು ತಣಿಸಿ ಜನಮನ ಹೊಲದ ಕಳೆಕಳೆ ಕಳೆವಳೋ?

ಅಲ್ಲೆ ಆ ಕಡೆ ನೋಡಲಾ
ಅಲ್ಲೆ ಕೊಡಗರ ನಾಡಲಾ
ಅಲ್ಲೆ ಕೊಡವರ ಬೀಡಲಾ[೨೬]

ಪು. ತಿ. ನರಸಿಂಹಾಚಾರ್ ಅವರು ತಮ್ಮ 'ತಲಕಾವೇರಿಗೆ ಹತ್ತು ಮಾರುಗಳ ಹಿಂದೆ' ಎಂಬ ಪದ್ಯವೊಂದರಲ್ಲಿ

ಏನು? ಇದೇ ತಾಣ? ಬ್ರಹ್ಮಗಿರಿಯುದರದೊಳು
ಕಾವೇರಿ ಜನ್ಮಿಸುವ ಪರಮ ಯಾತ್ರಾಸ್ಥಾನ
ಜೀವನವ ಕಳೆವಿಲ್ಲಿ, ತುಸು ನಿಲ್ಲು ಶಿವರಾಮು
ಏನು ಸುಂದರ ಭೂಮಿ, ಸೂರೆಗೊಂಡಿದೆ ಚೆಲುವು
ಆವುದೋ ಸಂತಸವು ಮೂಡುತಿದೆ ಮನದಲ್ಲಿ
ಆವ ಸಂದೇಶವನೊ ಒಯ್ಯುತಿದೆ ಬನಗಾಳಿ.
ಏನೆಂಬೆ "ರಮ್ಯಮಯಿ ಪುಣ್ಯಮಯಿಯಾಯಿತೆ"ಂದು
ಮನುಜನಿಂದೀ ತಾಣ ಪುಣ್ಯಮಯಿಯಾಯಿತಿಂದು.[೨೭] –

ಎಂದು ಹಾಡುತ್ತಾರೆ.

ಕುವೆಂಪುರವರು ಮಲೆನಾಡಿನ ಸೌಂದರ್ಯದ ಸೊಬಗನ್ನು ಸವಿದು ತಮ್ಮ ಬರೆವಣಿಗೆಯಲ್ಲಿ ಅದನ್ನು ಹಾಸುಹೊಕ್ಕಾಗಿಸಿಕೊಂಡಿದ್ದಾರೆ. ಅವರು ಒಮ್ಮೆ ಮಡಿಕೇರಿಗೆ ಬೇಟಿಯಿತ್ತಿದ್ದಾಗ ಎದುರು ಸಿಕ್ಕ ಒಂದು ಹೆಣ್ಣು ಮಗುವನ್ನು ನಿನ್ನ ಹೆಸರೇನಮ್ಮ ಎಂದು ಕೇಳಿದಾಗ 'ಪೂವಮ್ಮ' ಎಂದು ಹೇಳುತ್ತದೆ. ಕುವೆಂಪು ಅವರು ಕೊಡಗಿನ ಮತ್ತು ಆ ಮಗುವಿನ ಸೌಂದರ್ಯವನ್ನು ಹೋಲಿಸಿ 'ಪೂವಮ್ಮ' ಎಂಬ ಕಾವ್ಯದಲ್ಲಿ ಹೀಗೆ ಹೇಳುತ್ತಾರೆ.

ಮಲೆಗಳ ಕತ್ತಲೆ ಕವಲೊಡೆದಂದದಿ
ಜಡೆ ಕಂಗೊಳಿಸಿತ್ತೆರಡಾಗಂದದಿ
ಕೇಳಿದೆನಾಕೆಯ "ಹೆಸರೇನಮ್ಮ ?"
ನುಡಿದಳು "ಪೂವಮ್ಮ"
ಕೊಡಗು ಹಿರಿಮಲೆಗಳ ಸಿರಿನಾಡು
ಮೇಲಾಕಾಶವು, ಕೆಳಗಡೆ ಕಾಡು
ಅಂತೆಯೆ ಇರುವುದು ನನ್ನ ಬೀಡು
ನಚ್ಚಿನ ಮಲೆನಾಡು/
ಬೆಡಗಿನ ಕೊಡಗಿನ ಮಲೆಯಿಂದೊಯ್ಯನೆ
ಕಿರುದೊರೆಯುರುಳುವ ತೆರದಲಿರಯ್ಯನೆ
ಕಲ್ಲು ಹಾದಿಯಲಿ ಬಂದಳು ಚಿಮ್ಮಿ
ಮಿಗವರಿಯೊಲು ಹೊಮ್ಮಿ/
ಮಲೆನಾಡೆನಗಿದೆ ಹತ್ತಿರದಲ್ಲೇ
ಅದರಿಂ ಕೊಡಗನು ಮರೆಯಲು ಬಲ್ಲೆ
ಆದರೆ ಮರೆಯೆನು ನಿನಗಾಗಮ್ಮಾ
ಮುದ್ದಿನ ಪೂವಮ್ಮಾ/[೮೭]

ಪ್ರಕೃತಿ ಸೌಂದರ್ಯದ ಬೀಡಾದ ಕೊಡಗಿನಲ್ಲಿ ಮಳೆ, ಚಳಿ ಯಥೇಚ್ಚವಾಗಿರುತ್ತದೆ. ಇದರೊಂದಿಗೆ ಮಂಜು ಮುಸುಕಿದ ವಾತಾವರಣವೂ ಇರುತ್ತದೆ. ಮಳೆಗಾಲದಲ್ಲಂತೂ ಮೋಡಗಳೇ ನೆಲದ ಮೇಲೆ ಬಿದ್ದಿದೆಯೇನೋ ಎಂಬಂತೆ ಬಾಸವಾಗುತ್ತಿರುತ್ತದೆ. ಈ ರೀತಿಯ ಮಂಜುಮುಸುಕಿದ ಮಡಿಕೇರಿಯನ್ನು ನೋಡಿದ ಕವಿ ಜಿ. ಪಿ. ರಾಜರತ್ನಂ ಅವರು 'ಮಡಿಕೇರೀಲಿ ಮಂಜು' ಎಂಬ ಕವನದಲ್ಲಿ ಮಡಿಕೇರಿಯ ಪ್ರಾಕೃತಿಕ ರಮ್ಯತೆಯನ್ನು ವರ್ಣಿಸುವ ಬಗೆ ವಿಶೇಷವಾದುದು.

ಭೂಮಿನ್ ತಬ್ಬಿದ್ ಮೋಡ್ ಇದ್ದಂಗೆ
ಬೆಳ್ಳಿ ಬಳದಿದ್ ರೋಡ್ ಇದ್ದಂಗೆ
ಸಾಫಾಗ್ ಅಳ್ಳ ತಿಟ್ಟಿಲ್ದಂಗೆ
ಮಡಿಕೇರೀಲಿ ಮಂಜು!
ಮಡಿಗಿದ್ ಅಲ್ಲೇ ಮಡಗಿದ್ದಂಗೆ
ಲಂಗರ್ ಬಿದ್ದಿದ್ ಅಡಗಿದ್ದಂಗೆ
ಸೀತಕ್ ಶಕ್ತಿ ಉಡಗೋದಂಗೆ
ಅಳ್ಳಾಡಾಲ್ದು ಮಂಜು![೮೮]

ಸಾಲಿ ರಾಮಚಂದ್ರರಾಯರು ಕಂಡಂತ ಕೊಡಗಿನ ವರ್ಣನೆ 'ಕೊಡಗು' ಎಂಬ ಪದ್ಯದಲ್ಲಿ ಈ ರೀತಿಯಿರುವುದನ್ನು ಗಮನಿಸಬಹುದು.

ಕೊಡಗು ಬೆಡಗಿನ ಬೀಡು ಸೌಂದರ್ಯದಮೃತಮಂ
ಕುಡಿಯಿಮೆಲೆ ಕಣ್ಗಳಿರ ಇದೊ ಮಂಜು ಬಿತ್ತರಿಸಿ
ಕಡಲವೋಲ್ ತೋರ್ದುಪುದು ಮೇಲೇಳ್ದ ಗಿರಿಸಾನುಗಳ ದ್ವೀಪನಿವಹಮಾಗೆ
ಅಡಿಯಿಂದೆ ಮುಡಿವರಂ ಬೆಟ್ಟುಗಳ್ ನೀಳ್ದೆಸೆವ
ಗಿಡಗಳಿಂಪಸುರೇರಿ ಸೌಂದರ್ಯದಧಿದೇವಿ
ಯಡೆಯಾಡುವೊಳ್ಪುವೆತ್ತೆಡೆಗಳಾಗಿತ್ತಲಿದೊ ಸೊಗಯಿಪುವು ಸೊಂಪುವೆತ್ತು[೩೦]

ಕೊಡಗಿನಲ್ಲಿರುವ ಪ್ರಸಿದ್ಧ ಕುಂದ ಬೆಟ್ಟವನ್ನು ಕುರಿತು 'ಕುಂದಬೆಟ್ಟ' ಎಂಬ ಹೆಸರಿನಲ್ಲಿಯೇ ಎಸ್. ಶಂಕರನಾರಾಯಣ ಭಟ್ಟ ಅವರು ಬರೆದಿರುವ ಪದ್ಯವೊಂದು ಈ ರೀತಿಯಿದೆ.

ಕುಂದನಾನದೆ ನಿಂದ ಬೆಟ್ಟವೇ
  ನಿನ್ನ ಹೆಸರೇನ್ "ಕುಂದ"ವೇ?
ಕುಂದಿಪೋಗದೆ ಎಂದಿಗೆಂದಿಗು
    ನಿನ್ನ ವೈಭವವಂದವೇ?

ಶಿರವನೆತ್ತಿಹೆ ಬಯಲಿಗಾಗಿಯೆ
  ಗುಹೆಯ ಕಣ್ಣಿಂ ನೋಡುವೆ
ಏನಿದಚ್ಚರಿ ! ಭೀಕರತೆಯಿದು !
  ಮಲಗಿದನೆಯೆ ನೀನಹೆ

ಭಾವದೊರತೆಯ ತರಿಸಿ ಮನದೊಳು
  ಕಾವ್ಯರೂಪದಿ ಮೂಡಿದೆ
ಕವಿತೆ ತಿಳಿಯದು, ಸರಸಭಾವದಿ
    ನಿನ್ನ ಕೀರ್ತಿಯ ಹಾಡಿದೆ[೩೧]

ಇಂದು ಕೊಡಗಿನಲ್ಲಿ ಸಾಹಿತ್ಯದ ಇತರ ಪ್ರಕಾರಗಳಿಗಿಂತ ಯಥೇಚ್ಛವಾಗಿ ಯುವ ಕವಿಗಳಿಂದಲೂ ಕವನಗಳು, ಕವನ ಸಂಕಲನಗಳು ರಚನೆಯಾಗುತ್ತಿದ್ದು, ಅವುಗಳ ಮೂಲಕ ಕೊಡಗು ಮತ್ತು ಕೊಡಗರ ಬದುಕು, ಬವಣೆಗಳನ್ನು ಕಟ್ಟಿಕೊಡಲಾಗುತ್ತಿದೆ.

## ಆ. ಕಾದಂಬರಿ

### ಭಾರತೀಸುತ

ಕನ್ನಡ ಸಾಹಿತ್ಯದಲ್ಲಿ ಶ್ರೇಷ್ಠ ಲೇಖಕರು, ಕಾದಂಬರಿಕಾರರು ಎಂದು ಗುರುತಿಸಿಕೊಂಡಿರುವ ಕೊಡಗಿನವರೇ ಆದ 'ಭಾರತೀಸುತ' ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದ ಎಸ್. ಆರ್. ನಾರಾಯಣರಾವ್ ಅವರು ಮಡಿಕೇರಿಯ ಸೆಂಟ್ರಲ್ ಹೈಸ್ಕೂಲ್‌ನಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸಿದವರು. ಇವರು ಕಾದಂಬರಿ, ಸಣ್ಣಕತೆ, ವ್ಯಕ್ತಿಚಿತ್ರ ಅನುವಾದ, ಶಿಶು ಸಾಹಿತ್ಯ ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ಸುಮಾರು ಅರವತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಮುವತ್ತಕ್ಕೂ ಹೆಚ್ಚು ಕಾದಂಬರಿಗಳೇ ಇವೆ. ಭಾರತೀಸುತರ ಕೆಲವು ಕಾದಂಬರಿಗಳು ವಿಶ್ವವಿದ್ಯಾಲಯಗಳ ಪಠ್ಯಗಳಾಗಿರುವುದು ಅವರ ಕೃತಿಗಳ ಮಹತ್ವವನ್ನು ಸಾರುತ್ತವೆ. ಇವರ ಅನೇಕ ಕಾದಂಬರಿಗಳಲ್ಲಿ ಕೊಡಗಿನ ಪ್ರಾದೇಶಿಕ, ಜನಾಂಗಿಕ ಮತ್ತು ಚಾರಿತ್ರಿಕ ಹಿನ್ನೆಲೆಯನ್ನು ಕಾಣಬಹುದು. ಗಿರಿಕನ್ನಿಕೆ ಕೊಡಗಿನಲ್ಲಿಯ 'ಪಣಿಯರ' ಸಾಮಾಜಿಕ ಬದುಕನ್ನು ಚಿತ್ರಿಸುವ ಕಾದಂಬರಿಯಾದರೆ, 'ಹುಲಿಯ ಹಾಲಿನ ಮೇವು' ಇಲ್ಲಿನ ಐತಿಹಾಸಿಕ ವಿವರಗಳನ್ನು ಕಟ್ಟಿಕೊಡುತ್ತದೆ. 'ಬೆಳ್ಳಿಮೂಡಿತು' ಎಂಬ ಕಾದಂಬರಿ ಕೊಡವರ ಸಾಮಾಜಿಕ ಜೀವನ ವಿಧಾನ, ಶ್ರಮದ ಬದುಕು, ಬಡತನದ ಜಂಜಾಟ, ಕೊಡಗಿನ ಪ್ರಾಕೃತಿಕ ವರ್ಣನೆ, ಮೊದಲಾದ ವಿವರಗಳನ್ನು ಸಮಗ್ರವಾಗಿ ಚಿತ್ರಿಸುತ್ತದೆ. ಭಾರತೀಸುತರ ಕೆಲವು ಕಾದಂಬರಿಗಳು ಕೊಡಗು ಮತ್ತು ವೈನಾಡುಗಳ ಪರಿಸರವನ್ನು ಅಳವಡಿಸಿಕೊಂಡು ಪ್ರಾದೇಶಿಕ ಸಂಸ್ಕೃತಿಯ ಮಹತ್ವವನ್ನು ಸಾರುತ್ತವೆ.

ಭಾರತೀಸುತರ 'ಹುಲಿಯ ಹಾಲಿನ ಮೇವು' ಒಂದು ಐತಿಹಾಸಿಕ ಕಾದಂಬರಿ. ಕೊಡಗಿನ ಪ್ರಕೃತಿ, ಕೊಡವರ ಪದ್ಧತಿ, ಸಂಪ್ರದಾಯ, ಸಾಹಸವೆಲ್ಲಾ ಇದರಲ್ಲಿ ಒಡಮೂಡಿದೆ. ಕೊಡವರು ಸಾಹಸಿಗರು, ಬೇಟೆಗಾರರು, ಯುದ್ಧಪ್ರಿಯರು ಮಾತ್ರವಲ್ಲ ಪ್ರಾಮಾಣಿಕರು, ವಿಶ್ವಾಸಾರ್ಹರು, ರಾಜನಿಷ್ಠರು ಎಂಬುದನ್ನು ಚೆಂಗುಮಣಿಯ ಪಾತ್ರದ ಮೂಲಕ ಚಿತ್ರಿಸಿದ್ದಾರೆ. "ಕೊಡಗು ಜನಾಂಗದ ವಿಶ್ವಕೋಶ ಎಂದು ಪ್ರಸಿದ್ಧಿ ಪಡೆದಿರುವ 'ಹುಲಿಯ ಹಾಲಿನ ಮೇವು' ತನ್ನ ಶೀರ್ಷಿಕೆಗೆ ತಕ್ಕಂತೆ ಒಂದು ಗುಡ್ಡಗಾಡಿನ ವಿಶಿಷ್ಟ ಸಂಪ್ರದಾಯದ, ಜನತೆಯ ಮನೋಧರ್ಮವನ್ನು ತಲಸ್ಪರ್ಶಿಯಾಗಿ ಪರಿಚಯ ಮಾಡಿಕೊಡುತ್ತದೆ"[೩೨] ಎಂಬ ಮಾತು ಕಾದಂಬರಿಯ ಘನತೆಯನ್ನು ಹೆಚ್ಚಿಸುತ್ತದೆ. ಕೊಡಗಿನ ಅರಸನಾದ ದೊಡ್ಡವೀರಪ್ಪ ಪ್ರಭುಗಳ ಆಡಳಿತ ವೈಖರಿಯನ್ನು ಸಾರುವ ಈ ಕೃತಿ ಕೊಡಗಿನ ಇತಿಹಾಸವನ್ನು ಕಟ್ಟಿಕೊಡುತ್ತದೆ.

ಇವರ ಮತ್ತೊಂದು ಕಾದಂಬರಿ 'ಬೆಳ್ಳಿ ಮೂಡಿತು' ಕೊಡವರ ಸಾಂಸ್ಕೃತಿಕ, ಸಾಮಾಜಿಕ ಬದುಕನ್ನು ಯಥಾವತ್ತಾಗಿ ಚಿತ್ರಿಸಿರುವಂತಿದೆ. ಈ ಕೃತಿಯಲ್ಲಿ ಮಧ್ಯಮ ವರ್ಗದ ಕೌಟುಂಬಿಕ ಜೀವನ ವ್ಯವಸ್ಥೆಯ ನೈಜತೆಯನ್ನು ತೆರೆದಿಡುತ್ತದೆ. ಕೊಡವರ ಆಚಾರ ವಿಚಾರ, ಮದುವೆ

ಸಂಭ್ರಮ, ಹಬ್ಬಗಳ ವಿಧಿವಿಧಾನ, ಬೇಟೆ ಪದ್ಧತಿ, ಮಾನವ ಮತ್ತು ಪ್ರಾಣಿಗಳ ನಡುವಿನ ಸಂಘರ್ಷ ಮೊದಲಾದವುಗಳ ಸ್ಥೂಲ ಚಿತ್ರಣ ದೊರೆಯುತ್ತದೆ. ಇವುಗಳಲ್ಲದೆ ಕೊಡವರು ತಮ್ಮ ಬದುಕಿನ ಅವಿಭಾಜ್ಯ ಅಂಗಗಳಾದ ಕೃಷಿ, ಕೋಳಿ, ಕುರಿ, ಹಂದಿ, ದನಗಳ ಸಾಕಾಣಿಕೆ ಮತ್ತು ಪೋಷಣೆ ಮತ್ತು ಅವುಗಳೊಂದಿಗೆ ಕೊಡವರು ಹೊಂದಿರುವ ಭಾವನಾತ್ಮಕ ವಿಚಾರಗಳನ್ನು ಕಾಣಬಹುದಾಗಿದೆ. ಸಾಮಾಜಿಕ ಕಾದಂಬರಿಯಾದ ಇದು ಕೊಡವರ ಸಾಂಸ್ಕೃತಿಕ ಜೀವನವನ್ನು ಪ್ರತಿಬಿಂಬಿಸುತ್ತದೆ. ಮಡಿದ ಅಣ್ಣನ ಹೆಂಡತಿಯನ್ನು ತಮ್ಮನಾದ ನಂಜಪ್ಪ ಮದುವೆಯಾಗುವು ದರೊಂದಿಗೆ ಮುಕ್ತಾಯವಾಗುವ ಈ ಕಾದಂಬರಿಯು ದಾಂಪತ್ಯ ಜೀವನದಲ್ಲಿ ಕೊಡವರು ಪಾಲಿಸಿಕೊಂಡು ಬರುತ್ತಿರುವ ವಿವಾಹದ ಒಂದು ಪದ್ಧತಿಯ ಪರಿಚಯವನ್ನು ಮಾಡಿಕೊಡುತ್ತದೆ.

'ಗಿರಿಕನ್ನಿಕೆ' ಭಾರತೀಸುತರ ಪ್ರಮುಖ ಕಾದಂಬರಿಗಳಲ್ಲೊಂದು. ಕೊಡಗಿನ ಬುಡಕಟ್ಟು ಜನಾಂಗವಾದ ಪಣಿಯರ ಕುರಿತ ಕಾದಂಬರಿ. ಇದರಲ್ಲಿ ಭಾರತೀಸುತರು ಪಣಿಯರ ಸ್ವಾಭಾವಿಕವಾದ ಮತ್ತು ಸಾಂಸ್ಕೃತಿಕವಾದ ಜೀವನ ಕ್ರಮವನ್ನು ಕಟ್ಟಿಕೊಟ್ಟಿದ್ದಾರೆ. ತಮ್ಮದೇ ಆದ ಸ್ವಲ್ಪವೂ ಜಮೀನನ್ನು ಹೊಂದದ ಪಣಿಯರು ಜೀವನಕ್ಕಾಗಿ ಧನಿಕರ ಭೂಮಿಯಲ್ಲಿ ದಿನಗೂಲಿಗಾಗಿ ದುಡಿಯುವ ಶ್ರಮ ಸಂಸ್ಕೃತಿಯ ಚಿತ್ರಣ ದೊರಕುತ್ತದೆ. ಸಹಜವಾಗಿ ಮಾನವರಲ್ಲಿರುವ ಅಸೂಯಾಪರ ಗುಣ ಇವರಲ್ಲೂ ಇದ್ದು ದುಡಿಮೆಗಾಗಿ ಹಪಹಪಿಸುವ ಪಣಿಯರಲ್ಲಿ, ಪ್ರಾಮಾಣಿಕವಾಗಿ ದುಡಿದು ತನ್ನ ಒಡೆಯನ ವಿಶ್ವಾಸಕ್ಕೆ ಪಾತ್ರನಾಗುವ 'ಕೊಳಂಬು' ಪಣಿಯರ ಸಮುದಾಯದ ನಾಯಕನಾಗಿ ಗುರುತಿಸಿಕೊಳ್ಳುತ್ತಾನೆ. ಈ ಸಮುದಾಯದ ಆಚರಣೆ, ಹಬ್ಬಹರಿದಿನಗಳು ಮತ್ತು ಪಣಿಯರ ಗಂಡಸರು ಮತ್ತು ಹೆಂಗಸರ ಸಾಹಸಮಯ ಸನ್ನಿವೇಶಗಳು ಚಿತ್ರಿತವಾಗಿವೆ. ಈ ಕಾದಂಬರಿ ಚಲನಚಿತ್ರವಾಗಿಯೂ ಪ್ರಸಿದ್ಧಿ ಪಡೆದಿದೆ.

'ಬಯಲುದಾರಿ' ಕೊಡವರ ಜೀವನ, ಶೌರ್ಯ ಪರಾಕ್ರಮ, ಆಟೋಟಗಳ ಬಗ್ಗೆ ಕೊಡವರು ತೋರುವ ಉತ್ಸಾಹ ಸೇನೆಯಲ್ಲಿನ ಸೇವೆ ಮುಂತಾದವುಗಳ ಬಗೆಗೆ ವಿವರಗಳನ್ನು ನೀಡುವ ಭಾರತೀಸುತರ ಮತ್ತೊಂದು ಕಾದಂಬರಿಯಾಗಿದೆ. ಈ ಕಾದಂಬರಿ ಚಲನಚಿತ್ರವಾಗಿಯೂ ಮೂಡಿ ಬಂದಿದ್ದು, ಕರ್ನಾಟಕದ ಜನರಿಗೆ ಸಿನೆಮಾ ಮೂಲಕ ಕೊಡಗಿನ ಮತ್ತು ಕೊಡವರ ಸಾಂಸ್ಕೃತಿಕ ಜೀವನ ವೈವಿಧ್ಯತೆಯನ್ನು ಅರ್ಥೈಸುವ ಕಾರ್ಯ ನಡೆದಿದೆ. ಎರಡು ಕುಟುಂಬಗಳ ನಡುವಿನ ಸಾಮರಸ್ಯದ ಮತ್ತು ಸಂಘರ್ಷದ ಬದುಕನ್ನು ಕಾದಂಬರಿ ಚಿತ್ರಿಸುತ್ತದೆ.

'ಎಡಕಲ್ಲು ಗುಡ್ಡದ ಮೇಲೆ' ಕೊಡಗು ಮತ್ತು ವೈನಾಡಿನ ಪ್ರಾಕೃತಿಕ ಸೊಬಗನ್ನು ಚಿತ್ರಿಸುವ ಕಾದಂಬರಿ. ಈ ಕಾದಂಬರಿಯೂ ಕನ್ನಡ ಸಿನೆಮಾ ಆಗಿ ನಿರ್ಮಾಣವಾಗಿದೆ. ಇದರಲ್ಲಿ ನಿವೃತ್ತ ಯೋಧನ ಕೌಟುಂಬಿಕ ವಿವರ ಹಾಗೂ ನಿವೃತ್ತಿಯ ನಂತರ ತೋಟಗಾರಿಕೆ, ಕೃಷಿಯಲ್ಲಿ ತೊಡಗಿರುವ ಚಿತ್ರಣಗಳನ್ನು ಕಾಣಬಹುದು.

ಭಾರತೀಸುತರು ಪೆಟ್ರೇಷಿಯಾ, ನನ್ನ ಅತ್ತಿಗೆ, ವಲ್ಮೀಕ, ಜ್ಞಾನ ಯಾತ್ರಿಕ, ಕಂದನನ್ನು ಕದ್ದವನು, ಬೆಳಕಿನೆಡೆಗೆ, ಹೊನ್ನ ಪಂಜರ, ಬಂಗಾರ ಕುಲುಮೆ, ಇಳಿದು ಬಾ ತಾಯಿ, ಅವಳ ದಾರಿ, ಶತಧೃದಂಡೆಗೆ ಮೊದಲಾದ ಕೃತಿಗಳನ್ನು ರಚಿಸಿದ್ದು, ಇವುಗಳಲ್ಲಿ ಕೊಡಗಿನ ಪರಿಸರದ ಜತೆಗೆ ರಾಜ್ಯದ ಬೇರೆ ಬೇರೆ ಪ್ರದೇಶಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕು ಚಿತ್ರಣಗೊಂಡಿರುವ ಕಾದಂಬರಿಗಳೂ ಇವೆ.

**ಕೂತಂಡ ಪಾರ್ವತಿ ಪೂವಯ್ಯ**

ಕೊಡಗಿನ ಸಾಹಿತ್ಯದಲ್ಲಿ ಗುರುತಿಸಬಹುದಾದ ಮತ್ತೋರ್ವ ಕಾದಂಬರಿಗಾರ್ತಿ ಕೂತಂಡ ಪಾರ್ವತಿ ಪೂವಯ್ಯನವರು. ಕೊಡಗಿನ ಸಣ್ಣಕತೆ ಮತ್ತು ಕವನಗಳು, ಕೊಡಗಿನ ಕಥೆಗಳು, ಭುಗಿಲ ಗೊಂಚಲು, ಭೈರವಿ, ವಿಧಿವಿಲಾಸ, ಮೊದಲಾದ ಕೃತಿಗಳನ್ನು ರಚಿಸಿ ಕೊಡಗು ಸಾಹಿತ್ಯಕ್ಕೆ ತಮ್ಮ ಕೊಡುಗೆಯನ್ನು ನೀಡಿದ್ದಾರೆ.

**ವಿಧಿವಿಲಾಸ:** ಮಡಿಕೇರಿ ಜಿಲ್ಲೆಯವರೇ ಆದ ಪಾರ್ವತಿ ಪೂವಯ್ಯನವರ ಕೆಲವು ಕಾದಂಬರಿಗಳಲ್ಲಿ 'ವಿಧಿವಿಲಾಸ'ವೂ ಒಂದು. ಕೊಡಗಿನ ಪ್ರಾದೇಶಿಕ ಚೌಕಟ್ಟಿನಲ್ಲಿಯೇ ರಚಿಸಲ್ಪಟ್ಟು ಗಮನ ಸೆಳೆದಿರುವ ಮತ್ತೊಂದು ಕೃತಿ. ಇದರಲ್ಲಿ ಕೊಡಗಿನ ಸಾಮಾಜಿಕ ಜೀವನ, ಸಾಮರಸ್ಯ, ಕುಟುಂಬ ಹೊಂದಾಣಿಕೆ, ಪರಸ್ಪರ ಸಹಕಾರ, ಹುಟ್ಟು-ಸಾವು, ಹಬ್ಬ ಮೊದಲಾದವುಗಳ ವಿವರ ದೊರೆಯುತ್ತದೆ.

**ಪ್ರಭಾಕರ ಶಿಶಿಲ. ಬಿ.**

ಪ್ರಭಾಕರ ಶಿಶಿಲರು ಮೂಲತ: ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ಪರಿಸರದವರಾಗಿದ್ದು, ಇಲ್ಲಿಯ ನೆಹರು ಸ್ಮಾರಕ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ, ಪ್ರಾಂಶುಪಾಲರಾಗಿ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ್ದಾರೆ. ಅರ್ಥಶಾಸ್ತ್ರ ಪ್ರಾಧ್ಯಾಪಕರಾಗಿದ್ದರೂ ಇವರ ಸಾಹಿತ್ಯಕ ಸೇವೆ ಸ್ಮರಣೀಯವಾದುದು.

ಇವರು ಬರೆದಿರುವ 'ನದಿ ಎರಡರ ನಡುವೆ' ಕಾದಂಬರಿ ಕೊಡಗಿನ ಚರಿತ್ರೆಗೆ ಸಂಬಂಧಿಸಿದ್ದಾಗಿದೆ. ಈ ಕೃತಿಗೆ ಮಾಸ್ತಿ ಕಾದಂಬರಿ ಪುರಸ್ಕಾರವೂ ದೊರೆತಿದೆ. ಇಂಗ್ಲೆಂಡ್‌ನಲ್ಲಿ ವಾಸವಾಗಿದ್ದ ಕೊಡಗಿನ ಕೊನೆಯ ಅರಸ ಚಿಕವೀರರಾಜೇಂದ್ರ ಈಸ್ಟ್ ಇಂಡಿಯಾ ಕಂಪನಿ ಕಛೇರಿಯ ಮುಖ್ಯಸ್ಥ ಜಿ. ಎಸ್. ಮಿಲ್ಲರ್‌ರೊಡನೆ ಸಂಭಾಷಣೆಗೈಯ್ಯುವಾಗ ಪ್ರಸ್ತಾಪವಾದ ವಿಚಾರಗಳಿಗೆ ಕೊಡಗನ್ನು ನೆನೆಪಿಸಿಕೊಂಡು ಹೇಳುವ ಕಥೆಯೇ ಈ ಕಾದಂಬರಿಯ ವಸ್ತು. ಇದರಲ್ಲಿ ಎರಡು ಭಾಗಗಳಿದ್ದು, ನಾಡೊಂದನು ಕಟ್ಟುವುದಕೆ ಮತ್ತು ನಾಡೊಂದನು ಉಳಿಸುವುದಕೆ ಎಂದು ಹೆಸರಿಸಲಾಗಿದೆ. ಮೊದಲ ಭಾಗ ಹಾಲೇರಿ ಅರಸರು ಕೊಡಗಿಗೆ ಬಂದು ನೆಲೆನಿಂತು ಒಂದು ಸಮಗ್ರ ಸಂಸ್ಥಾನವನ್ನು ಕಟ್ಟಿದ ಕತೆಯಾದರೆ, ಎರಡನೆಯದು ಬ್ರಿಟೀಷರ ಆಡಳಿತಕ್ಕೊಳಪಟ್ಟ ಕೊಡಗು ಸಂಸ್ಥಾನವನ್ನು ಏನಾದರೂ ಮಾಡಿ ಹಾಲೇರಿ ವಂಶದವರಿಗೆ

ದಕ್ಕಿಸಿಕೊಡಬೇಕು ಎಂಬ ಸದುದ್ದೇಶದೊಂದಿಗೆ ರಹಸ್ಯ ಹೋರಾಟಕ್ಕಿಳಿಯುವ ಕಲ್ಯಾಣಸ್ವಾಮಿ ಎಂಬ ದೇಸೀ ವೀರನ ಕತೆಯನ್ನು ನೋಡಬಹುದು.

**ನಿರಂಜನ**

ಕಾದಂಬರಿ ಲೋಕದಲ್ಲಿ ಹೆಸರು ಮಾಡಿರುವ ನಿರಂಜನರು 'ಕಲ್ಯಾಣ ಸ್ವಾಮಿ' ಮತ್ತು 'ಸ್ವಾಮಿ ಅಪರಂಪಾರ' ಕಾದಂಬರಿಗಳು ಕೊಡಗಿನ ಇತಿಹಾಸದ ಮೇಲೆ ಬೆಳಕು ಚೆಲ್ಲುವಂತವುಗಳಾಗಿವೆ. ಕೊಡಗಿನ ಕೊನೆಯ ಅರಸನಾದ ಚಿಕವೀರಾಜೇಂದ್ರನ ನಂತರ ಕೊಡಗು ಬ್ರಿಟೀಷರ ವಶವಾಗುತ್ತದೆ. ಇದು ಹಾಲೇರಿ ವಂಶ ಮತ್ತು ಕೊಡಗಿನ ಜನರಿಗೆ ಅಸಮಾಧಾನವುಂಟಾಗುತ್ತದೆ. ಇದನ್ನು ಮನಗಂಡ ಕಲ್ಯಾಣ ಸ್ವಾಮಿ ಹೇಗಾದರೂ ಮಾಡಿ ಹಾಲೇರಿ ಅರಸರಿಗೆ ಕೊಡಗಿನ ಅಧಿಕಾರವನ್ನು ಮತ್ತೆ ದೊರಕಿಸಿಕೊಡಬೇಕೆಂದು ಹಲವು ವೇಷ ಧರಿಸಿ ಬ್ರಿಟೀಷರ ವಿರುದ್ಧ ಹೋರಾಡಿದ ಕಥೆ ಕಲ್ಯಾಣ ಸ್ವಾಮಿ ಕಾದಂಬರಿಯ ವಸ್ತು.

ಸ್ವಾಮಿ ಅಪರಂಪಾರ ಕಾದಂಬರಿಯಲ್ಲಿ ೧೮೨೦ ರಿಂದ ೧೮೭೦ ರವರೆಗಿನ ಐದು ದಶಕಗಳ ಕಾಲಾವಧಿಯಲ್ಲಿ ನಡೆದ ಘಟನೆಗಳು, ಕಳೆದುಕೊಂಡ ಸ್ವಾತಂತ್ರ್ಯವನ್ನು ಮತ್ತೆ ದೊರಕಿಸಿಕೊಳ್ಳಲು ಹೋರಾಡಿದ ಅಪರಂಪಾರನ ಜೀವನ ಮತ್ತು ಇದರಿಂದ ಆತನು ಕಂಡ ಅಂತ್ಯವನ್ನು ಈ ಕಾದಂಬರಿಯಲ್ಲಿ ಕಾಣಬಹುದಾಗಿದೆ.

**ಮಾಸ್ತಿ ವೆಂಕಟೇಶ ಅಯ್ಯಂಗಾರ್**

'ಚಿಕವೀರರಾಜೇಂದ್ರ' ಮಾಸ್ತಿಯವರ ಐತಿಹಾಸಿಕ ಕಾದಂಬರಿ. ಕೊಡಗಿನ ಕೊನೆಯ ಅರಸನಾದ ಚಿಕವೀರರಾಜನ ಜೀವನ, ಆಡಳಿತ, ಯುದ್ಧ ಮೊದಲಾದ ವಿವರಗಳನ್ನು ಕಟ್ಟಿಕೊಡಲಾಗಿದೆ. ರಾಜನ ಆಳ್ವಿಕೆಯ ಕೊನೆಯ ವರ್ಷದ ಕಥೆಯೇ ಈ ಕಾದಂಬರಿಯ ವಸ್ತುವಾಗಿದೆ. ಚಿಕವೀರರಾಜನ ಕಾಮುಕ ಬದುಕಿಗೆ ಇವನ ಮಂತ್ರಿಯಾಗಿದ್ದ ಕುಂಟ ಬಸವ ಬೆಂಬಲವಾಗಿ ನಿಂತಿರುವುದು ಸ್ಪಷ್ಟವಾಗಿ ನಿರೂಪಣೆಗೊಂಡಿದೆ. ಅಲ್ಲದೆ ಕುಂಟ ಬಸವನ ನಿಗೂಢ ಮತ್ತು ಆತನ ಕರುಣಾಜನಕದ ಹಿನ್ನೆಲೆಯಲ್ಲಿ ಇಡೀ ಕಾದಂಬರಿ ಮುಂದುವರೆಯುತ್ತದೆ.

**ಎಂ. ಎಸ್. ಶ್ರೀನಿವಾಸ್**

ಎಂ.ಎಸ್. ಶ್ರೀನಿವಾಸ್ ಅವರು ಪ್ರೌಢಪ್ರತಾಪ ವೀರರಾಜ ಎಂಬ ಐತಿಹಾಸಿಕ ಕಾದಂಬರಿಯ ಕರ್ತೃ. ಹೆಸರೇ ಹೇಳುವಂತೆ ಕೊಡಗಿನ ಅರಸನಾದ ವೀರರಾಜನ ಕಾಲದಲ್ಲಿ ನಡೆದ ಕ್ರಾಂತಿ ಈ ಕಾದಂಬರಿಯ ವಸ್ತು. ಹಿಂದೆ ಸ್ವತಂತ್ರ ಸಾಮ್ರಾಜ್ಯವಾಗಿ ಮೆರೆಯುತ್ತಿದ್ದ ಕೊಡಗು ಮುಂದೆ ಬಂದ ರಾಜರ ಅದಕ್ಷತೆಯಿಂದಾಗಿ ಹಲವು ದಿನಗಳವರೆಗೆ ಹೈದರ್ ಮತ್ತು ಟಿಪ್ಪುವಿನ ಕೈವಶವಾಗಬೇಕಾಯಿತು. ಇದರ ವಿಮೋಚನೆಗಾಗಿ ಶ್ರಮಿಸಿದ ವೀರರಾಜನ ಆಡಳಿತ ವೈಖರಿಯ ವಿವರಗಳು ಇಲ್ಲಿ ದೊರೆಯುತ್ತವೆ. ಸ್ಥಾನಬದ್ಧತೆಯಿಂದ, ಸಾಹಸದಿಂದ ತಪ್ಪಿಸಿಕೊಂಡು

ಕ್ರಮವಾಗಿ ಪರಿಶ್ರಮದಿಂದ, ಟಿಪ್ಪುವಿನಿಂದ ಕೊಡಗಿನ ಭೂಭಾಗವನ್ನು ತನ್ನ ವಶಕ್ಕೆ ತೆಗೆದುಕೊಳ್ಳುವ ವೀರರಾಜೇಂದ್ರ, ಇವನಿಗಾಗಿ ಪ್ರಾಣತ್ಯಾಗ ಮಾಡಿದ ರಾಣಿ ನಂಜಮ್ಮಾಜಿ, ವಿಶ್ವಾಸಾರ್ಹ ಇಸ್ಮಾಯಿಲ್, ಪರಾಕ್ರಮಿಗಳೂ, ದೇಶದ್ರೋಹಿಗಳು ಆದ ಕೊಡವ ಸೇನಾನಿಗಳು, ನಡುನಡುವೆ ದುರಂತಗಳಿಗೆ ಕಾರಣರಾಗುವ ವಂಚಕರು, ಲಿಂಗರಾಜನಂತಹ ಸ್ವಜನದ್ರೋಹಿಗಳು ಮುಂತಾದ ಪಾತ್ರಗಳು ಈ ಕಾದಂಬರಿಯಲ್ಲಿ ಚಿತ್ರಿತವಾಗಿವೆ. ಲಕ್ಷಭೇದನದ ಸಾಹಸ ಸನ್ನಿವೇಶದಿಂದ ಆರಂಭವಾಗುವ ಈ ಕಾದಂಬರಿಯು ವೀರರಾಜನ ವೈಯಕ್ತಿಕ ಜೀವನದ ಒಂದು ಅಧ್ಯಾಯದೊಡನೆ ಮುಗಿಯುತ್ತದೆ.[೩೩]

## ಇ. ನಾಟಕ

ಕೊಡಗಿನ ಸಾಹಿತ್ಯದ ಆರಂಭ ನಾಟಕಗಳ ಮೂಲಕವೇ ಆಗಿರುವುದು ತಿಳಿದು ಬರುತ್ತದೆ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಭಾಗವಾಗಿದ್ದ ಕೊಡಗು ಯಕ್ಷಗಾನ, ಪೌರಾಣಿಕ ಮತ್ತು ಸಾಮಾಜಿಕ ನಾಟಕಗಳಿಂದ ಪ್ರಭಾವಿತಗೊಂಡಿರುವುದು ಇಲ್ಲಿಯ ನಾಟಕ ಪ್ರಕಾರ, ಪ್ರದರ್ಶನಗಳನ್ನು ಗಮನಿಸಿದರೆ ತಿಳಿಯುತ್ತದೆ. ಪೌರಾಣಿಕ, ಚಾರಿತ್ರಿಕ ಮತ್ತು ಜಾನಪದೀಯ ವಸ್ತುಗಳನ್ನು ಆಧರಿಸಿ ಆಧುನಿಕ ನಾಟಕ ಕೃತಿಗಳು ಕೊಡಗಿನ ಕೆಲವು ಲೇಖಕರಿಂದ ಮತ್ತು ಕೊಡಗೇತರರಿಂದಲೂ ರಚಿತವಾಗಿವೆ.

ಐ. ಮಾ. ಮುತ್ತಣ್ಣನವರು ನಾಟಕ ಕೃತಿಗಳ ಕಡೆಗೂ ತಮ್ಮನ್ನು ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ಪಾಶ್ಚಾತ್ಯ ನಾಟಕಕಾರ ಷೇಕ್ಸ್‌ಪಿಯರ್‌ನ ಎರಡು ನಾಟಕಗಳನ್ನು 'ವೆನಿಸ್‌ನ ವರ್ತಕ' ಮತ್ತು 'ಜೂಲಿಯಸ್ ಸೀಸರ್' ಎಂಬ ಹೆಸರಿನಲ್ಲಿ ಕನ್ನಡಕ್ಕೆ ಅನುವಾದಿಸುವುದರ ಜೊತೆಗೆ ಹರದಾಸ ಅಪ್ಪಚ್ಚು ಕವಿಯು ಕೊಡವ ಭಾಷೆಯಲ್ಲಿ ರಚಿಸಿರುವ ಸಾವಿತ್ರಿ, ಯಯಾತಿರಾಜ ಮತ್ತು ಸುಬ್ರಮಣ್ಯ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿ 'ಹರದಾಸ ಅಪ್ಪಚ್ಚು ಕವಿಯ ಮೂರು ನಾಟಕಗಳು' ಎಂಬ ಹೆಸರಿನಲ್ಲಿ ಪ್ರಕಟಿಸಿರುತ್ತಾರೆ.

ತೇಲಪಂಡ ಎಂ ಕಾರ್ಯಪ್ಪನವರ 'ವೀರರಾಜೇಂದ್ರ ವಿಜಯ' 'ಕಾವೇರಿ ಕತೆ', ವಿ. ಎಸ್. ರಾಮಕೃಷ್ಣ ಅವರ 'ಅಭಿನಯ ಯೋಗ್ಯ ನಾಟಕಗಳು', ಕೆ. ಕುಶಾಲಪ್ಪಗೌಡರ 'ಕರ್ಣಪ್ರಭ' ಮತ್ತು 'ಗರ್ವಭಂಗ', ಬಿ. ಎಸ್. ಕೃಷ್ಣಯ್ಯನವರ 'ಶ್ರೀ ಕಾವೇರಿ ವಿಜಯ', ಡಿ. ಬಿ. ರಾಮಚಂದ್ರಾಚಾರ್ ಅವರ 'ಚಿಕವೀರರಾಜೇಂದ್ರ', 'ಅಸ್ತಮಾನ', ಕಣ್ತೆರೆದ ಸತ್ಯ', ಟಿ. ಎನ್. ಕಾರ್ಯಪ್ಪ ಅವರ ವೀರರಾಜೇಂದ್ರ ವಿಜಯ', 'ಟಿಪ್ಪು ಸುಲ್ತಾನ್' ಮೊದಲಾದವುಗಳು ಆಧುನಿಕ ಸಂದರ್ಭದ ಮಹತ್ವದ ನಾಟಕ ಕೃತಿಗಳಾಗಿವೆ.

ಕೊಡಗಿನ ಬರಹಗಾರರಿಂದ ಕೊಡವ ಭಾಷೆಯಲ್ಲಿ ರಚಿತವಾಗಿರುವ ನಾಟಕಗಳನ್ನು ಕುರಿತು ಅಧ್ಯಯನಗಳು ನಡೆದಿವೆ. ತೀತೀರ ರೇಖಾ ವಸಂತ ಅವರು 'ಕೊಡವ ರಂಗಭೂಮಿ' ಎಂಬ ವಿಷಯದಲ್ಲಿ ಎಂ. ಫಿಲ್. ಪದವಿ ಪಡೆದುಕೊಂಡಿದ್ದಾರೆ. ಈ ಕೃತಿಯಲ್ಲಿ ೧೯೦೬ರಿಂದ

೨೦೦೬ರವರೆಗಿನ ಅವಧಿಯಲ್ಲಿ ಬಂದ ಕೊಡವ ನಾಟಕಗಳನ್ನು ಮತ್ತು ಅವುಗಳ ಇತಿಹಾಸ, ರಂಗ ಪ್ರಯೋಗಗಳನ್ನು ಗಮನದಲ್ಲಿರಿಸಿಕೊಂಡು ಸ್ಥೂಲ ಸಂಶೋಧನೆ ನಡೆಸಿದ್ದಾರೆ.

**ಹರದಾಸ ಅಪ್ಪಚ್ಚ ಕವಿ**

ಕೊಡವ ಭಾಷೆಯಲ್ಲಿ ನಾಟಕಗಳನ್ನು ಬರೆದು ನಟಿಸಿ, ಪ್ರದರ್ಶಿಸಿ ಪ್ರಸಿದ್ಧಿ ಪಡೆದವರು ಕೊಡವರೇ ಆದ ಹರದಾಸ ಅಪ್ಪಚ್ಚ ಕವಿ. ಇವರು ಸ್ವಂತ ನಾಟಕ ಕಂಪನಿಯನ್ನು ಸ್ಥಾಪಿಸಿದ್ದು, ಅದಕ್ಕೆ ಯಾವುದೇ ಒಂದು ನಿರ್ದಿಷ್ಟ ಹೆಸರನ್ನಿಡದೆ ಅವರು ಪ್ರದರ್ಶಿಸುತ್ತಿದ್ದ ನಾಟಕದ ಹೆಸರನ್ನೇ ಇಡುತ್ತಿದ್ದರು. (ಉದಾ: ಯಯಾತಿರಾಜ ನಾಟಕ ಪ್ರದರ್ಶನಕ್ಕೆ ಯಯಾತಿರಾಜ ನಾಟಕ ಮಂಡಳಿ) ಶ್ರೀಯುತರು ಬರೆದ 'ಸಾವಿತ್ರಿ', 'ಯಯಾತಿರಾಜ', 'ಸುಬ್ರಹ್ಮಣ್ಯ ಸ್ವಾಮಿ' ಮತ್ತು 'ಶ್ರೀ ಕಾವೇರಿ' ಎಂಬ ನಾಲ್ಕು ನಾಟಕಗಳು ೧೯ ಮತ್ತು ೨೦ ನೆಯ ಶತಮಾನದ ಕೊಡಗಿನ ಜನಜೀವನದ ಪಡಿಯಚ್ಚುಗಳಾಗಿವೆ. ಈ ಎಲ್ಲಾ ನಾಟಕಗಳು ಹಿಂದಿನ ಕೊಡಗಿನ ಜನಮನದ ನಿರೀಕ್ಷೆಯನ್ನು ಪೂರೈಸಿವೆ. ಈ ನಾಟಕಗಳಲ್ಲಿ ಕೊಡಗಿನದ್ದೇ ಪ್ರಕೃತಿ, ಕೊಡಗಿನದ್ದೇ ಜನ, ಕೊಡಗಿನದ್ದೇ ಹಲವು ರೀತಿನೀತಿಗಳು ಪ್ರಸ್ತಾಪವಾಗಿರುವುದನ್ನು ಗಮನಿಸಲಾಗಿದೆ.

ಅಪ್ಪಚ್ಚ ಕವಿಯ ಶ್ರೀ ಕಾವೇರಿ ನಾಟಕ ಮೂಲತ: ಕೊಡಗಿಗೆ ಸಂಬಂಧಿಸಿದ್ದ ಕಾರಣ ಕಾವೇರಿಯ ಉಗಮ, ಕೊಡವರ ವಂಶ ಮತ್ತು ಮೂಲ, ಅಮ್ಮಕೊಡವರ ಮೂಲ, ಇವರ ಆಚಾರಗಳ ಬಗೆಗೆ ಕೆಲವು ಪುರಾಣ ಮೂಲದ ಹೊಳಹುಗಳನ್ನು ನೀಡಿದ್ದಾರೆ. ಹರದಾಸ ಅಪ್ಪಚ್ಚು ಕವಿಯವರ ನಾಲ್ಕು ನಾಟಕಗಳು ಪೌರಾಣಿಕ ವಸ್ತುವನ್ನು ಒಳಗೊಂಡಿದ್ದರೂ ಕೊಡವ ಸಂಸ್ಕೃತಿಯ ವಿಚಾರಗಳನ್ನು ತರುವುದರ ಮೂಲಕ ಎಲ್ಲಾ ಪಾತ್ರಗಳನ್ನೂ ಪ್ರಸ್ತುತ ಸನ್ನಿವೇಶದ ಸಾಮಾನ್ಯ ಮನುಷ್ಯನ ಮಟ್ಟಕ್ಕೆ ಇಳಿಸುತ್ತಾ ಸಾಂಸ್ಕೃತಿಕ ತಲ್ಲಣಗಳನ್ನು ಚಿತ್ರಿಸುತ್ತಾ, ಸಾಂಸ್ಕೃತಿಕ ಸಾತತ್ಯತೆಯನ್ನು ಗುರುತಿಸುವುದರೊಂದಿಗೆ ಕೃತಿಯನ್ನು ಸಾರ್ವತ್ರಿಕಗೊಳಿಸಲಾಗಿದೆ.[೩೪]

**ವೆಂಕಟಾದ್ರಿ ಶಾಮರಾಯರು**

ಆರಂಭದ ಕೊಡಗಿನ ಸಾಹಿತಿಗಳಾಗಿ ಕಾಣಿಸಿಕೊಳ್ಳುವವರು ವಿರಳವೆನಿಸಿದರೂ ಅತ್ಯುಪಯುಕ್ತವಾದ ಗ್ರಂಥಗಳನ್ನು ರಚಿಸಿರುವುದನ್ನು ಕಾಣಬಹುದು. ಕೊಡಗಿನ ರಂಗಭೂಮಿಯ ಇತಿಹಾಸವನ್ನು ಅವಲೋಕಿಸಿದರೆ ಪ್ರಮುಖವಾದವರಲ್ಲಿ ವೆಂಕಟಾದ್ರಿ ಶಾಮರಾಯರು ಒಬ್ಬರು. 'ಕೊಡಗಿನ ನಾಟಕ ಪಿತಾಮಹ' ಎಂದೇ ಪ್ರಸಿದ್ಧರಾಗಿದ್ದ ಶಾಮರಾಯರು 'ತಾಮ್ರಧ್ವಜನ ಕಾಳಗ', 'ರುಕ್ಮಿಣಿ ಸ್ವಯಂವರ', 'ಸುಭದ್ರಾ ಕಲ್ಯಾಣ', 'ನೀಲಧ್ವಜನ ಕಾಳಗ', 'ಕೃಷ್ಣಾರ್ಜುನ ಕಾಳಗ', 'ಧ್ರುವ ಚರಿತೆ', 'ವಿರಾಟ ಪರ್ವ', 'ಅತಿಕಾಯನ ಕಾಳಗ', 'ಚಿತ್ರಸೇನ ಕಾಳಗ', 'ಇಂದ್ರ ತಿಲಕ', 'ಭೀಷ್ಮ ಪರ್ವ' ಮೊದಲಾದ ನಾಟಕಗಳನ್ನು ಕೊಡುಗೆಯಾಗಿ ನೀಡಿದ್ದಾರೆ.[೩೫] ಬಹುಷ: ಈ ನಾಟಕಗಳೆಲ್ಲವೂ ಯುದ್ಧ ಪ್ರಧಾನವಾದವುಗಳೇ ಆಗಿರುವುದು ಆ ಕಾಲದ ರಚನೆಕಾರ ಮತ್ತು ನೋಡುಗರ ಆಸಕ್ತಿಗೆ ಸೂಕ್ತವಾದವುಗಳಾಗಿವೆ.

**ಈ. ಕಥೆ**

**ಕೊಡಗಿನ ಗೌರಮ್ಮ**

ಕೊಡಗಿನ ಮಹತ್ವದ ಲೇಖಕಿಯರಲ್ಲಿ ಕೊಡಗಿನ ಗೌರಮ್ಮನವರ ಹೆಸರು ಮೇಲ್ಪಂಕ್ತಿಯಲ್ಲಿ ಕಾಣಿಸಿಕೊಳ್ಳುತ್ತದೆ. ಮೂಲತ: ದಕ್ಷಿಣ ಕನ್ನಡದ ಸುಳ್ಯ ಪರಿಸರದವರಾದ ಗೌರಮ್ಮನವರು ನೆಲೆನಿಂತದ್ದು ಮಡಿಕೇರಿ ಜಿಲ್ಲೆಯಲ್ಲಿ. "ಮಹಿಳೆಯರು ಅಷ್ಟಾಗಿ ಸಾಹಿತ್ಯ ರಂಗದಲ್ಲಿ ಕಾಣಿಸಿಕೊಳ್ಳದೇ ಇದ್ದ ಕಾಲದಲ್ಲಿ ಮೈಚಳಿಯನ್ನು ಬಿಟ್ಟು ಹೆಣ್ಣಿನ ಬಾಳಿನ ನೋವು ನಲಿವುಗಳನ್ನು ತಮ್ಮ ಕಥೆಗಳ ಮೂಲಕ ಬಹಳ ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ."[೨೬] ಗೌರಮ್ಮನವರಿಗೆ ಒಳ್ಳೆಯ ಹೆಸರನ್ನು ತಂದುಕೊಟ್ಟ 'ಮನುವಿನ ರಾಣಿ" ಕತೆಯಲ್ಲಿಯೇ ಗೌರಮ್ಮನವರು ಬದುಕನ್ನು ನೋಡಬಲ್ಲ ಸಹಾನುಭೂತಿಯ ಮನಸ್ಸನ್ನು ಗುರುತಿಸಬಹುದು. ಅಲ್ಲದೇ ಗೌರಮ್ಮನವರ ಕತೆಗಳಲ್ಲಿ ಕತೆಯಿಂದ ಕತೆಗೆ ವಸ್ತುವಿನಲ್ಲಿ, ಶೈಲಿಯಲ್ಲಿ, ಹೊಸತನ ಕಾಣುತ್ತಾ ಹೋಗುತ್ತದೆ.

ಚಿಕ್ಕ ವಯಸ್ಸಿನಲ್ಲಿಯೇ ಆಕಸ್ಮಿಕ ಸಾವಿಗೆ ತುತ್ತಾದ ಗೌರಮ್ಮನವರು ಹಲವಾರು ಮಹತ್ವದ ಕತೆಗಳನ್ನು ಬರೆದಿದ್ದಾರೆ. ಕೊಡಗಿನ ಪರಿಸರದಲ್ಲೇ ಇದ್ದು ತಮ್ಮೆಲ್ಲಾ ಕತೆಗಳನ್ನು ಬರೆದರೂ ಯಾವುದೇ ಕತೆಗಳಲ್ಲಿ ಕೊಡಗಿನ ಯಾವುದೇ ಸ್ಥಳ ಅಥವಾ ಪ್ರಾದೇಶಿಕ ವಿಚಾರಗಳು ಪ್ರಸ್ತಾಪವಾಗಿಲ್ಲದಿರುವುದು ಅಚ್ಚರಿಯೆನಿಸುತ್ತದೆ. ಗೌರಮ್ಮನವರು ರಚಿಸಿದ ಇಪ್ಪತ್ತೊಂದು ಕತೆಗಳನ್ನು 'ಕಂಬನಿ' ಮತ್ತು 'ಚಿಗುರು' ಎಂಬ ಸಂಕಲನಗಳಲ್ಲಿ ಪ್ರಕಟಿಸಲಾಗಿದೆ. ಅಲ್ಲದೆ ಶ್ರೇಷ್ಠ ಎನಿಸಬಹುದಾದ ಕೆಲವು ಕತೆಗಳನ್ನು 'ಗೌರಮ್ಮನ ಕತೆಗಳು' ಸಂಕಲನದ ಮೂಲಕ ಪ್ರತ್ಯೇಕವಾಗಿ ಪ್ರಕಟಿಸಲಾಗಿದೆ. ಗೌರಮ್ಮನವರ ಬಹುಪಾಲು ಕತೆಗಳಲ್ಲಿ ಹೆಣ್ಣೇ ಕೇಂದ್ರ ಬಿಂದುವಾಗಿರುವುದು ವಿಶೇಷವಾಗಿದೆ.

**ಪಾರ್ವತಿ ಪೂವಯ್ಯ**

ಕೊಡಗಿನ ಕತೆಗಳು ಪಾರ್ವತಿ ಪೂವಯ್ಯ ಅವರ ಕಥಾಸಂಕಲನ. ಒಟ್ಟು ಹನ್ನೆರಡು ಕತೆಗಳಿರುವ ಈ ಕೃತಿಯಲ್ಲಿ ಕೊಡಗಿನ ಕೌಟುಂಬಿಕ ಚಿತ್ರಣವೇ ಕಾಣಬರುತ್ತದೆ. ಇಲ್ಲಿ ಬರುವ ಪಾತ್ರಗಳು, ವ್ಯಕ್ತಿಗಳ ಹೆಸರುಗಳು, ಭೌಗೋಳಿಕ ಚಿತ್ರಣಗಳು ಕೊಡಗು ಪ್ರದೇಶದ್ದು ಎಂಬುದು ಬಹುಮುಖ್ಯವಾಗುತ್ತದೆ. ಲೇಖಕಿ ಈ ಕಥೆಗಳಲ್ಲಿ ಕೊಡಗಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ವಿವರಗಳನ್ನು ಕಟ್ಟಿಕೊಟ್ಟಿದ್ದಾರೆ.

**ಜಿ. ಟಿ. ನಾರಾಯಣ ರಾವ್**

'ಕೊಡಗಿನ ಸುಮಗಳು' ಹನ್ನೆರಡು ಕತೆಗಳನ್ನೊಳಗೊಂಡ ಕಥಾ ಸಂಕಲನ. ಇದರಲ್ಲಿ ಕೊಡಗಿನ ವರ್ಣನೆ, ಈ ಪ್ರದೇಶವನ್ನು ಆಳಿದ ಅರಸರು ಇಲ್ಲಿನ ಜನಸಮುದಾಯಗಳಿಗೆ ಸಂಬಂಧಿಸಿದಂತೆ ಕತೆಗಳು, ಕೊಡಗಿನ ಪುರಾಣ, ಇತಿಹಾಸ, ಜನಜೀವನ, ಸಂಸ್ಕೃತಿ, ಕಾವೇರಿಯ

ಉಗಮ ಮುಂತಾದವುಗಳಲ್ಲದೆ, ಕೊಡಗಿನ ಜೀವನಾವರ್ತನದ ಪ್ರಕ್ರಿಯೆಗಳನ್ನು ಅರ್ಥೈಸಿಕೊಳ್ಳಲು ಸಹಕಾರಿಯಾಗಿದೆ.

**ಬಿ. ಡಿ. ಗಣಪತಿ**

'ಕಾಕೆಮಾನಿ' ಎಂದೇ ಗುರುತಿಸಿಕೊಂಡಿರುವ ಬಿ. ಡಿ. ಗಣಪತಿಯವರು ಕೊಡವ ಸಮುದಾಯದ ಪ್ರಮುಖ ಬರಹಗಾರರು. ಇವರ 'ಕೊಡಗು ಇತಿಹಾಸ ಪುಟಗಳಿಂದ' ಎಂಬ ಕಥಾಸಂಕಲನ ಕೊಡಗಿನ ಪ್ರಾಕೃತಿಕ ವೈಶಿಷ್ಟ್ಯಗಳನ್ನು ಮೈಗೂಡಿಸಿಕೊಂಡಿದೆ. ಸುಮಾರು ಎರಡು ಶತಮಾನಗಳ ಹಿಂದಿನ ಅಲ್ಲಿಯ ಕೆಲವು ಪ್ರದೇಶಗಳ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಹಾಗೂ ರಾಜಕೀಯ ಚಟುವಟಿಕೆಗಳನ್ನು ಸೂಕ್ಷ್ಮವಾಗಿ ತೆರೆದಿಡುವ ಪ್ರಯತ್ನ ನಡೆದಿದೆ. "ಗತಕಾಲದ ಚಿತ್ರಣ ನೀಡುವ ಈ ಕೃತಿಯಲ್ಲಿ ಅಂದಿನ ಆಳುವ ವರ್ಗದ ದರ್ಪ, ಆಳಿಸಿಕೊಳ್ಳುವವರ ಚಿಂತಾಜನಕ ಸ್ಥಿತಿ, ಮಾತಿನಲ್ಲಿ ಉತ್ತರಿಸುವುದಕ್ಕಿಂತ ಕತ್ತಿಯಲ್ಲಿ ಉತ್ತರಿಸುವೆನೆಂಬ ಕೊಡವರ ಸಾಹಸ, ಅಲ್ಲಿಯ ಸಂಸ್ಕೃತಿ ಮೊದಲಾದ ಕೊಡಗಿನ ವಾತಾವರಣವನ್ನು ಚಾರಿತ್ರಿಕ ನೆಲೆಯಲ್ಲಿ ವಿವರಿಸಿರುವುದರಿಂದ ನಿರ್ಧಿಷ್ಟ ಕಾಲದ ಕೊಡವರ ಜೀವನವನ್ನು ಅರ್ಥಮಾಡಿಕೊಳ್ಳುವ ದೃಷ್ಟಿಯಿಂದ ಉಪಯುಕ್ತ ಕೃತಿಯೆನಿಸುತ್ತದೆ.[೩೭]

## ಉ. ಇತರೆ

**ಕೊರವಂಡ ಅಪ್ಪಯ್ಯ**

ವೃತ್ತಿಯಲ್ಲಿ ವೈದ್ಯರಾಗಿದ್ದು, ಪ್ರವೃತ್ತಿಯಲ್ಲಿ ಸಂಶೋಧಕರಾಗಿದ್ದ ಡಾ. ಕೊರವಂಡ ಅಪ್ಪಯ್ಯನವರು ಮಡಿಕೇರಿಯ ಕಡಗದಾಳು ಗ್ರಾಮದವರು. ಇವರು ಮೈಸೂರು ಅರಮನೆಯ ವೈದ್ಯರೂ ಜಿಲ್ಲಾ ಸರ್ಜನ್ನರೂ ಆಗಿದ್ದು, ಕೊಡವ ಸಾಹಿತ್ಯ ಮತ್ತು ಸಂಸ್ಕೃತಿಗಳಿಗೆ ಸಂಬಂಧಿಸಿದಂತೆ ಅಪಾರ ಕೊಡುಗೆ ಸಲ್ಲಿಸಿದ್ದಾರೆ. 'ನೀರಿನ ಜಲರತ್ನಾಕರ', 'ಗೋರಕ್ಷಣೆ', 'ಕೊಡಗರ ಕುಲಾಚಾರಾದಿ ತತ್ವೋಜ್ಜೀವಿನಿ', 'ಇಹಪರ ಗ್ರಂಥ', 'ಅಸ್ಥಿಪಂಜರ', 'ವ್ಯವಸಾಯ ಬೋಧಿನಿ' 'ಭಗವದ್ಗೀತೆ' ಮೊದಲಾವುಗಳು ಅಪ್ಪಯ್ಯನವರ ಕೃತಿಗಳು. ಇವರ 'ಕೊಡವರ ಕುಲಾಚಾರಾದಿ ತತ್ವೋಜ್ಜೀವಿನಿ'ಯಲ್ಲಿ ಕೊಡವ ಜನಾಂಗದ ಎಲ್ಲಾ ಆಚಾರಗಳನ್ನು ಪ್ರಸ್ತಾಪಿಸಲಾಗಿದ್ದು ಹುಟ್ಟಿನಿಂದ ಸಾವಿನ ತನಕ ವ್ಯಕ್ತಿಯ ಬದುಕಿನಲ್ಲಿ ಆಚರಿಸಲಾಗುತ್ತಿದ್ದ ಎಲ್ಲಾ ಪದ್ಧತಿಗಳನ್ನು ವಿವರಿಸಲಾಗಿದೆ. ಅಲ್ಲದೆ ಅಂದು ಕೊಡಗಿನಲ್ಲಿದ್ದ ಆಡಳಿತ ಸ್ವರೂಪದ ಗ್ರಾಮಧರ್ಮ, ತಕ್ಕ ಮುಕ್ಕಾಟ, ಹನ್ನೆರಡು ಕೊಂಬು, ಪಂಚಾಯಿತಿ, ಪೊರಮುಡಿ, ದೇವಿತಕ್ಕ, ನಾಡತಕ್ಕ, ಊರತಕ್ಕ ಇತ್ಯಾದಿಗಳನ್ನು ಪರಿಚಯ ಮಾಡಿಕೊಟ್ಟಿದ್ದಾರೆ. ಇವರ ಮತ್ತೊಂದು ಪ್ರಮುಖ ಕೃತಿ 'ವ್ಯವಸಾಯ ಬೋಧಿನಿ'ಯಲ್ಲಿ ಪರಂಪರಾಗತವಾದ ವ್ಯವಸಾಯ ಪದ್ಧತಿಯನ್ನು ತ್ಯಜಿಸಿ ಹೊಸಹೊಸ ಪದ್ಧತಿಗಳನ್ನು ಅಳವಡಿಸಿಕೊಂಡು ವ್ಯವಸಾಯವನ್ನು ಉತ್ತಮಪಡಿಸಿಕೊಳ್ಳುವಂತೆ ತಮ್ಮ ಜನರನ್ನು ಎಚ್ಚರಿಸುವ ಪ್ರಯತ್ನ ಮಾಡಿದ್ದಾರೆ.[೩೮] ಇದರೊಂದಿಗೆ

ಇವರು ೧೮೮೭ ರಲ್ಲಿಯೇ 'ಕೊಡಗು ಲಿಪಿ' ಎಂಬ ಕೃತಿಯನ್ನು ರಚಿಸಿ ಕೊಡವ ಭಾಷೆಗೆ ಪ್ರತ್ಯೇಕವಾದ 'ಲಿಪಿ'ಯನ್ನು ರಚಿಸಲು ಪ್ರಯತ್ನಿಸಿರುವುದು ಕಂಡುಬರುತ್ತದೆ.

**ಐ. ಮಾ. ಮುತ್ತಣ್ಣ**

ಐ. ಮಾ. ಮುತ್ತಣ್ಣನವರು ಎಪ್ಪತ್ತರ ದಶಕಗಳಲ್ಲಿಯೇ ಹಿರಿಯದು ಎಂಬಷ್ಟು ಕೃತಿಗಳನ್ನು ರಚಿಸಿ ಪ್ರಕಟಿಸಿರುವುದನ್ನು ಗಮನಿಸಬಹುದು. ಮೂಲತಃ ಚರಿತ್ರಾಕಾರರಾಗಿದ್ದ ಮುತ್ತಣ್ಣನವರು 'ಹತ್ತೊಂಬತ್ತನೇ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ' ಗ್ರಂಥಗಳ ಮೂಲಕ ಪರಿಚಿತರಾಗುತ್ತಾರೆ. ಆ ಕಾಲದಲ್ಲಿಯೇ ಇದ್ದ ಅನೇಕ ಟೀಕೆ ಟಿಪ್ಪಣಿಗಳಿಗೆ ಅಂಜದೆ ತಮ್ಮ ಕ್ಷೇತ್ರದಲ್ಲಿ ತೊಡಗಿಕೊಂಡವರು. ಬಹಳಷ್ಟು ಸಂಶೋಧನೆ, ಅಧ್ಯಯನ ಮಾಡಿ ಪಾಶ್ಚಾತ್ಯ ವಿದ್ವಾಂಸರನ್ನು ಗುರುತಿಸಿ ಒಂದು ಕೃತಿಯಲ್ಲಿ ಹಿಡಿದಿಡುವ ಪ್ರಯತ್ನ ಮಾಡಿದ್ದಾರೆ. ಈ ಕೃತಿ ಬಹಳ ಹಳೆಯ ಸರ್ಕಾರಿ ಪ್ರಕಟಣೆಗಳು, ಪತ್ರಿಕೆಗಳ ವಿಶೇಷ ವರದಿಗಳು, ಸಂಚಿಕೆಗಳು, ಗೆಜೆಟಿಯರ್‌ಗಳು ಹಾಗೂ ಅನೇಕ ವಿದ್ವಾಂಸ ಮಹನೀಯರ ಪರಿಚಯ ಮಾಡಿಕೊಡುವಲ್ಲಿ ಉಪಯುಕ್ತವಾದ ಕೃತಿಯೆನಿಸಿದೆ.

ಮುತ್ತಣ್ಣನವರು ಚರಿತ್ರಾಕಾರರಾಗಿದ್ದರೂ, ಡಾಕ್ಟರೇಟ್ ಪದವಿಯನ್ನು ಪಡೆದುಕೊಂಡಿದ್ದು ಮಾತ್ರ 'ದಿ ಹಿಸ್ಟರಿ ಆಫ್ ಮಾಡರ್ನ್ ಕರ್ನಾಟಕ' ಎಂಬ ಕೃತಿಗೆ. ಇವುಗಳ ಜೊತೆಗೆ ಮುತ್ತಣ್ಣನವರು 'ಎ ಟೈನಿ ಮಾಡರ್ನ್ ಸ್ಟೇಟ್ ಆಫ್ ಸೌತ್ ಇಂಡಿಯಾ' ಮತ್ತು 'ಟಿಪ್ಪು ಸುಲ್ತಾನ್ ಎಕ್ಸ್‌ರೇಯಡ್' ಎಂಬ ಕೃತಿಗಳನ್ನು ಹೊರತಂದಿದ್ದಾರೆ.

**ಕೆ. ಕೆ. ಸುಬ್ಬಯ್ಯ**

ಕೊಡಗು ಭಾಗದ ಮಹತ್ವದ ಲೇಖಕರಲ್ಲೊಬ್ಬರು. ಇವರು ಇಂಗ್ಲೀಷ್‌ನಲ್ಲಿ ಬರೆದಿರುವ ಕೃತಿ 'ಆರ್ಕಿಯಾಲಾಜಿ ಆಫ್ ಕೂರ್ಗ್'. ಈ ಕೃತಿಯಲ್ಲಿ ಕೊಡಗಿನ ಇತಿಹಾಸ, ಶಾಸನ, ಜನಾಂಗ, ಸಂಸ್ಕೃತಿ ಮೊದಲಾದ ಸಂಗತಿಗಳನ್ನು ಸ್ಪಷ್ಟಪಡಿಸಿದ್ದಾರೆ. ಅಲ್ಲದೆ ಕೊಡವರ ಮೂಲದ ಕುರಿತು ಅನೇಕ ಲೇಖನಗಳನ್ನು ಬರೆದಿದ್ದಾರೆ.

**ಕೆ. ಪಿ. ಮತ್ತಣ್ಣ**

'ಜಗತ್ತಿಗೊಂದೇ ಕೊಡಗು' ಕೆ. ಪಿ. ಮತ್ತಣ್ಣನವರ ಕೊಡಗು ಸಂಬಂಧಿತ ಕೃತಿ. ಮೂಲತಃ ಕೊಡಗಿನವರೇ ಆದ ಇವರು ಈ ಗ್ರಂಥದಲ್ಲಿ ಕೊಡಗಿನ ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ವಿಷಯಗಳೊಂದಿಗೆ ಕೊಡಗಿನ ಸಂಕ್ಷಿಪ್ತ ಇತಿಹಾಸವನ್ನು ಕುರಿತು ಬರೆದಿದ್ದಾರೆ.

**ಬಿ. ಡಿ. ಗಣಪತಿ**

ಗಣಪತಿಯವರು ಕೊಡವ ಜನಾಂಗದ ಸಾಂಸ್ಕೃತಿಕ ಜೀವನ ಹಾಗೂ ಆಧ್ಯಾತ್ಮಿಕ ಚಿಂತನೆಗೆ ಹೆಚ್ಚು ಪ್ರಾಮುಖ್ಯತೆ ಕೊಟ್ಟಿರುವ ಲೇಖಕರಾಗಿದ್ದಾರೆ. 'ಕೊಡಗು', 'ಕೊಡವರು', 'ಕೊಡವಾಸ್-ದೇರ್ ಕಸ್ಟಂಸ್ ಅಂಡ್ ಕಲ್ಚರ್', 'ಕೊಡಗಿನ ಕತೆ' ಮೊದಲಾದ ಕೃತಿಗಳನ್ನೂ ರಚಿಸಿದ್ದಾರೆ.

**ಡಿ. ಬಿ. ರಾಮಚಂದ್ರಾಚಾರ್**

ರಾಮಚಂದ್ರಾಚಾರ್ ಅವರು ಮೈಸೂರು ಮೂಲದವರಾಗಿದ್ದು, ಉದ್ಯೋಗಕ್ಕಾಗಿ ಕೊಡಗಿನಲ್ಲಿ ನೆಲೆನಿಂತು ಗೋಣಿಕೊಪ್ಪಲಿನ ಕಾವೇರಿ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದವರು. ಸಾಹಿತ್ಯಕವಾಗಿ ಕಾವ್ಯ, ನಾಟಕ, ಪ್ರವಾಸ ಕಥನ, ಪ್ರಬಂಧ, ಜೀವನ ಚಿತ್ರಣ, ಸಂಪಾದನೆಯಂತಹ ಹಲವಾರು ಪ್ರಕಾರಗಳಲ್ಲಿ ಕೃತಿಗಳನ್ನು ರಚಿಸಿರುವ ರಾಮಚಂದ್ರಾಚಾರ್ ಅವರು ಕೊಡಗಿನ ಸೊಬಗು, ಸಂಸ್ಕೃತಿ ಮತ್ತು ಸಾಹಿತ್ಯವನ್ನು ಕುರಿತು ಸಾಕಷ್ಟು ಕೆಲಸ ಮಾಡಿರುವುದು ಕಂಡುಬರುತ್ತದೆ. ಕೊಡಗಿನ ಕೊನೆಯ ರಾಜನಾದ 'ಚಿಕವೀರರಾಜೇಂದ್ರ'ನ ಹೆಸರಿನಲ್ಲಿ ಒಂದು ನಾಟಕವನ್ನು ರಚಿಸಿರುತ್ತಾರೆ. ಅಲ್ಲದೆ 'ಕುಡಿಯರ ಸಂಸ್ಕೃತಿ' ಎಂಬ ಕೊಡಗಿನ ಬುಡಕಟ್ಟು ಜನಾಂಗದ ಸಾಂಸ್ಕೃತಿಕ ಜೀವನವನ್ನು ಕುರಿತ ಸಂಶೋಧನಾ ಕೃತಿಯನ್ನು ಹೊರತಂದಿದ್ದಾರೆ. ಇವರು ರಚಿಸಿರುವ 'ಕೊಡಗು' ಕೊಡಗಿನ ಸಂಕ್ಷಿಪ್ತ ವಿವರಗಳನ್ನು ತೆರೆದಿಡುವ ಪ್ರಮುಖ ಕೃತಿಯಾಗಿದೆ. ಈ ಕೃತಿಯಲ್ಲಿ ಒಟ್ಟು ಹದಿನಾಲ್ಕು ಬಿಡಿ ಲೇಖನಗಳಿದ್ದು ಕೊಡಗು ಮತ್ತು ಕೊಡಗಿನ ಸಂಸ್ಕೃತಿ, ಕೊಡಗಿನ ಸಾಹಿತ್ಯ, ಕೊಡವರ ಭಾಷೆ, ಕೊಡವರು ಮತ್ತು ಅವರ ಮೂಲ ಮತ್ತಿತರ ವಿಚಾರ, ಕೊಡವರೊಂದಿಗೆ ಜೀವನ ನಡೆಸುತ್ತಿರುವ ಅಮ್ಮ ಕೊಡವರ ಜೀವನ ಕ್ರಮ ಹಾಗೂ ಅವರ ಆಹಾರ ಪದ್ಧತಿಗಳು, ಕೊಡಗರ ಜನಪದ ಆಚರಣೆಗಳು, ಹಬ್ಬಗಳು, ಜನಪದ ನೃತ್ಯಗಳು, ಕೊಡಗಿನಲ್ಲಿ ನಡೆದ ಸಾಹಿತ್ಯಕ ಮತ್ತು ರಾಜಕೀಯ ಚಳವಳಿಗಳನ್ನು ಕುರಿತು ವಿಶ್ಲೇಷಣೆ ಮಾಡಿದ್ದಾರೆ. ಕೊಡಗಿನ ಬುಡಕಟ್ಟು ಸುಮುದಾಯ ಎರವರು ಮತ್ತು ಕುಡಿಯರ ಜೀವನ ಕ್ರಮ, ಆಚರಣೆಗಳು, ವಿವಾಹ ಮತ್ತಿತರ ಪದ್ಧತಿಗಳನ್ನು ಪ್ರಸ್ತಾಪಿಸುವುದರ ಜೊತೆಗೆ ಜೆನುಕುರುಬರು, ಹಾಲುಕುರುಬರು ಮತ್ತು ಬೆಟ್ಟಕುರುಬರು ಕೊಡಗಿನ ಮೂಲನಿವಾಸಿಗಳು ಎಂಬುದನ್ನು ವಿವರಿಸಿದ್ದಾರೆ. ಕೃತಿಯ ಕೊನೆಯಲ್ಲಿ 'ಕವಿಗಳು ಕಂಡ ಕೊಡಗು' ಎಂಬ ಶೀರ್ಷಿಕೆಯಲ್ಲಿ ಕೊಡಗರು ಮತ್ತು ಕೊಡಗಿನ ಸೌಂದರ್ಯ, ಕೊಡಗಿನ ಭೌಗೋಳಿಕ ವಿವರಗಳನ್ನು ಕುರಿತು ಕನ್ನಡದ ಬೇರೆಬೇರೆ ಕವಿಗಳು ರಚಿಸಿರುವ ಬಿಡಿ ಕವನಗಳನ್ನು ಸಂಗ್ರಹಿಸಿ ಕೊಟ್ಟಿದ್ದಾರೆ.

**ತಂಬಂಡ ವಿಜಯ್ ಪೂಣಚ್ಚ**

'ಕೊಡಗು ವಿವರಣೆ' ಬ್ರಿಟೀಷ್ ಸರಕಾರದ ಶಿಕ್ಷಣ ಇಲಾಖೆಯಲ್ಲಿ ಅಧಿಕಾರಿಯಾಗಿ ಕೆಲಸ ಮಾಡುತ್ತಿರುವ ಸಮಯದಲ್ಲಿ ಇ. ಮಾರ್ಸ್‌ಡನ್ ಅವರು ರಚಿಸಿದ ಕೃತಿ. ಇದನ್ನು ವಿಜಯ್

ಅವರು ಕನ್ನಡಕ್ಕೆ ಅನುವಾದಿಸಿದ್ದಾರೆ. ಇದು ಅನುವಾದಿತ ಕೃತಿಯಾಗಿರುವುದರಿಂದ ಕೊಡಗಿನ ಭೂವಿವರಣೆ, ಪ್ರಾಕೃತಿಕ ಸಂಪತ್ತು, ಕೊಡಗನ್ನಾಳಿದ ರಾಜರ ವಿವರಗಳು, ಇಲ್ಲಿನ ಹವಾಮಾನ, ಜನಸಮುದಾಯ, ಹಬ್ಬಹರಿದಿನಗಳ ಮಾಹಿತಿ ದೊರೆಯುತ್ತದೆ.

**ಹೆಬ್ಬಾಲೆ ಕೆ. ನಾಗೇಶ್**

ನಾಗೇಶ್ ಅವರು ರಚಿಸಿರುವ 'ಕಾವೇರಿ ಜಾನಪದ' ಎಂಬ ಕಿರು ಕೃತಿ ಕೊಡಗಿನ ಜಾನಪದ ಸಾಂಸ್ಕೃತಿಕ ಬದುಕನ್ನು ಚಿತ್ರಿಸಿಕೊಡುವಲ್ಲಿ ಪ್ರಮುಖ ಪಾತ್ರ ವಹಿಸಿದೆ. ಪ್ರದರ್ಶನಗೊಳ್ಳುವ ಜನಪದ ಕಲೆಗಳು, ಕ್ರೀಡೆಗಳು, ಆಚರಿಸಲ್ಪಡುವ ಹಬ್ಬಗಳು, ಕಾವೇರಿ ನದಿಯೊಂದಿಗೆ ಹೊಂದಿರುವ ಸಂಬಂಧವನ್ನು ಎಳೆಎಳೆಯಾಗಿ ಚಿತ್ರಿಸಿದ್ದಾರೆ.

ಇವರ ಮತ್ತೊಂದು ಕೃತಿ 'ಕೊಡವರ ಮದುವೆ' ಕೊಡವರಲ್ಲಿರುವ ವೈವಾಹಿಕ ಸಂಬಂಧಗಳು, ಕ್ರಮಗಳು, ವಿಧಗಳನ್ನು ಕುರಿತು ರಚಿತವಾಗಿರುವ ಚಿಕ್ಕ ಕೃತಿ. ಕೊಡವರ ವಿವಾಹ ಪೂರ್ವ ಸಂಪ್ರದಾಯಗಳು ಹಾಗೂ ಶಾಸ್ತ್ರಗಳು, ಮದುವೆ ತಯಾರಿ, ವಧು-ವರರ ಸಂಬಂಧ ಮುಂತಾದವುಗಳನ್ನು ಸ್ಥೂಲವಾಗಿ ಹೇಳಿದ್ದಾರೆ. ಕೊಡವರ ಮದುವೆಗಳಿಗೆ ಸೀಮಿತಗೊಂಡಿರುವ ಇದರಲ್ಲಿ ಕೊಡವರಲ್ಲಿ ಪ್ರಚಲಿತದಲ್ಲಿರುವ ವಿವಾಹಗಳಾದ ಕನ್ನಿಮಂಗಲ, ಕೂಡಾವಳಿಮಂಗಲ ಕೊದಿಮಂಗಲ, ಮಕ್ಕಪರಿಜೆ, ಒಕ್ಕಪರಿಜೆ, ಕುಟ್ಟಪರಿಜೆ, ಪೈತಾಂಡೆಕಳಿಪ ಮಂಗಲ, ಕೆಮಿಕುತ್ತಿ ಮಂಗಲ, ಹಾಗೂ ನರಿಮಂಗಲ ಎಂಬ ಒಂಬತ್ತು ವಿಧದ ವಿವಾಹಗಳನ್ನು ಕುರಿತು ಚರ್ಚಿಸಿದ್ದಾರೆ.

**ಭೀಮಂಡ ಈ ಕುಶಾಲಪ್ಪ**

'ಕೊಡಗು- ಚರಿತ್ರೆಯ ಮೇಲೆ ಹೊಸ ಬೆಳಕು' ಈ ಕುಶಾಲಪ್ಪ ಅವರು ಕೊಡಗಿನ ಚರಿತ್ರೆಯನ್ನು ಪ್ರಮುಖವಾಗಿರಿಸಿಕೊಂಡು ರಚಿಸಿರುವ ಕೃತಿಯಾಗಿದೆ. ಕೊಡಗಿನ ಭೌಗೋಳಿಕ ವಿವರಣೆಗಳು, ಕೊಡಗನ್ನು ಆಳಿದ ಕರ್ನಾಟಕದ ಮನೆತನಗಳ ವಿವರ, ಇಲ್ಲಿನ ಮೂಲನಿವಾಸಿಗಳು, ಹಾಲೇರಿ ಅರಸರ ಆಳ್ವಿಕೆ ಮೊದಲಾದ ಸಂಕ್ಷಿಪ್ತ ವಿವರಗಳ ಮೇಲೆ ಬೆಳಕು ಚೆಲ್ಲಬಹುದಾದ ಕೃತಿಯಾಗಿದೆ.

ಹೀಗೆ ಕೊಡಗಿನಲ್ಲಿ ಹಿರಿಯ ಹಾಗೂ ಕಿರಿಯ ತಲೆಮಾರಿನ ಮಹತ್ವದ ಬರಹಗಾರರಿದ್ದಾರೆ. ಕೊಡಗಿನ ಸಾಹಿತ್ಯದ ವಿಚಾರ ಬಂದಾಗ ಗುರುತಿಸಲೇಬೇಕಾದ ಕೆಲವು ಮುಸ್ಲಿಂ ಲೇಖಕರು ನಮಗೆ ಕಾಣಿಸುತ್ತಾರೆ. ಅವರುಗಳೆಂದರೆ, ಬಿ. ಎ. ಹಸನಬ್ಬ, ಬಿ. ಎ. ಷಂಶುದ್ದೀನ್, ಇ. ಎಸ್. ಗಫೂರ್, ಇ. ಸುಲೇಮಾನ್ ಶೇಕ್, ಸಂಪಾಜೆಯ ಜಬ್ಬಾರ್ ಸಮೊ, ಸೋಮವಾರಪೇಟೆಯ ಸಯ್ಯದ್ ಗೌಸ್, ಶನಿವಾರ ಸಂತೆಯ ಅಬ್ದುಲ್ ರಹೀಂ, ಕೊಡ್ಲಿಪೇಟೆಯ ಮೊಹಮದ್ ಗೌಸ್, ಸುಂಟಿಕೊಪ್ಪದ ಅಬ್ದುಲ್ ರಷೀದ್ ಪ್ರಮುಖರಾಗುತ್ತಾರೆ.

ಕೊಡಗಿನ ಸಾಹಿತ್ಯ ಸಂದರ್ಭದಲ್ಲಿ ಹೆಸರಿಸಲೇಬೇಕಾದ ಪ್ರಮುಖ ಲೇಖಕರಲ್ಲಿ ಜಿ. ಎಸ್. ಕೇಶವಾಚಾರ್ಯ ಪ್ರಮುಖರು. ಅವರು ಬರೆದಿರುವ 'ಕೊಡಗಿನ ಒಡೆಯರು', 'ಕೊಡಗು ಜಿಲ್ಲಾ ದರ್ಶನ' ಮುಖ್ಯ ಕೃತಿಗಳು. ಕೆ. ಕುಶಾಲಪ್ಪಗೌಡ, ಬಿ. ಎಸ್. ಕುಶಾಲಪ್ಪ, ಬಿ. ಎಸ್. ಗೋಪಾಲ ಕೃಷ್ಣ, ಎನ್. ಎಸ್. ದೇವಿಪ್ರಸಾದ್, ಟಿ. ಎಸ್. ಗೋಪಾಲ್, ಟಿ. ವಿ. ಪದ್ಮಾಶೇಖರ್, ಟಿ. ಪಿ. ರಮೇಶ್, ಜೆ. ಸೋಮಣ್ಣ, ಎಚ್. ಟಿ. ಅನಿಲ್, ಸುಬ್ರಾಯ ಸಂಪಾಜೆ, ಕುಸುಮಾ ಶಾನಭಾಗ್, ಅಡ್ಡಂಡ ಕಾರ್ಯಪ್ಪ, ಕೆ. ಆರ್. ವಿದ್ಯಾಧರ್, ಮಹಾಬಲೇಶ್ವರ ಭಟ್, ವಿಷ್ಣುಭಟ್, ವಿಜಯಾ ವಿಷ್ಣುಭಟ್, ಶ. ಗ. ನಯನತಾರಾ, ಶ್ರೀಧರ್ ಹೆಗಡೆ, ಶಿವದೇವಿ ಅವನೀಶ್ಚಂದ್ರ, ಬಿ. ಆರ್. ಜೋಯಪ್ಪ, ಸ್ಮಿತಾ ಅಮೃತ್‌ರಾಜ್, ಸಹನಾ ಕಾಂತಬೈಲು, ಸತೀಶ್ ಕಾಜೂರು, ಕಸ್ತೂರಿ ಗೋವಿಂದಮ್ಮಯ್ಯ, ಪುಷ್ಪಲತಾ ಶಿವಪ್ಪ, ಸುಶೀಲಾ, ಗೀತಾ ಮಂದಣ್ಣ ಮೊದಲಾದವರು ಕೊಡಗಿನ ಸಾಹಿತ್ಯವಲಯದಲ್ಲಿ ಗುರುತಿಸಿಕೊಂಡಿದ್ದಾರೆ.

## ೩.೫. ಪತ್ರಿಕಾ ಸಾಹಿತ್ಯ

ಕನ್ನಡ ಸಾಹಿತ್ಯಕ್ಕೆ ಪತ್ರಿಕೆಗಳು ನೀಡಿರುವ ಕೊಡುಗೆ ಅಪಾರವಾದದ್ದು. ಕರ್ನಾಟಕದಲ್ಲಿ ಸಂಕ್ರಮಣ, ಪ್ರಜಾಮತ ಮೊದಲಾದಂತಹ ಸಾಹಿತ್ಯ ಸಂಬಂಧಿತ ವಾರಪತ್ರಿಕೆಗಳೂ ಸೇರಿದ ಹಾಗೆ ಅನೇಕ ಸಾಪ್ತಾಹಿಕ, ಮಾಸಿಕ ಪತ್ರಿಕೆಗಳು ತಮ್ಮ ಅನನ್ಯ ಕೊಡುಗೆಯನ್ನು ನೀಡಿವೆ. ಕೊಡಗು ಈ ಪ್ರಭಾವದ ಹಿನ್ನೆಲೆಯನ್ನು ಹೊಂದಿದ್ದು ಶಕ್ತಿ, ಬ್ರಹ್ಮಗಿರಿಯಂತಹ ಕೆಲವು ದಿನಪತ್ರಿಕೆಗಳು ಪ್ರಾರಂಭದ ದಿನಗಳಲ್ಲಿ ಸಾಹಿತ್ಯಧಾರಿತ ವಿಚಾರಧಾರೆಗಳು ಮತ್ತು ಸಂಶೋಧನಾತ್ಮಕವಾದ ಲೇಖನಗಳ ಮೂಲಕ ಜನಸಾಮಾನ್ಯರನ್ನು ತಲುಪಿ ಜ್ಞಾನ ಪಸರಿಸುವಲ್ಲಿ ಪ್ರಮುಖ ಪಾತ್ರ ನಿರ್ವಹಿಸಿವೆ.

ಪ್ರತಿಕೋದ್ಯಮವೆಂಬುದು ಸಮಕಾಲೀನ ಸಂದರ್ಭದಲ್ಲಿ ತನ್ನ ಅಸ್ತಿತ್ವವನ್ನು ಗಟ್ಟಿಗೊಳಿಸುತ್ತಾ ಮುನ್ನುಗ್ಗುತ್ತಿದೆ. ಕೊಡಗಿನಲ್ಲಿ ಪತ್ರಿಕೆಗಳೇ ಇಲ್ಲದ ಕಾಲದಲ್ಲಿ ಮಡಿಕೇರಿಯಲ್ಲಿ ೧೯೨೧ರಲ್ಲಿ ಕೊಡಗು ಕಂಪೆನಿಯು ಸ್ಥಾಪಿಸಲ್ಪಟ್ಟು, ಇದರ ಮೂಲಕ ಕೆ. ಪಿ. ಚಿನ್ನಪ್ಪನವರ ಶ್ರಮದಿಂದ 'ಕೊಡಗು' ಎಂಬ ಹೆಸರಿನಲ್ಲಿಯೇ ವಾರಪತ್ರಿಕೆಯೊಂದು ಅಚ್ಚಾಗಿ ಪ್ರಕಟಗೊಂಡಿತು ಎನ್ನಲಾಗಿದೆ.[೩೯] ಆನಂತರದಲ್ಲಿ ನಿರಂತರವಾಗಿ ಕನ್ನಡ ಮತ್ತು ಕೊಡವ ಭಾಷೆಗಳಲ್ಲಿ ಪತ್ರಿಕೆಗಳು ಪ್ರಕಟಗೊಂಡಿರುವುದು ಕಂಡುಬರುತ್ತದೆ. ಜಮೀನ್ದಾರ್ ಸಂಘದ ನೀತಿ ನಿಲುವುಗಳನ್ನು ಪ್ರತಿಭಟಿಸಲು ಬಲ್ಲಚಂಡ ಬೆಳ್ಯಪ್ಪ ಅವರು 'ಲೋಕಪಾವನ' ಪತ್ರಿಕೆ ಸ್ಥಾಪಿಸಿದರೆ, ಅಬ್ದುಲ್ ಗಫಾರ್ ಖಾನ್ ಅವರು 'ಕೊಡಗು ಬೋಧಿನಿ' ಎಂಬ ಮಾಸಿಕ ಪತ್ರಿಕೆಯನ್ನು ಹೊರಡಿಸುತ್ತಾರೆ. ಕೆ. ನಾರಾಯಣರಾಯರ ಸಂಪಾದಕತ್ವದಲ್ಲಿ 'ಲೋಕ ರಹಸ್ಯ' ಮಾಸ ಪತ್ರಿಕೆ, ಐ. ಮಾ. ಮುತ್ತಣ್ಣ ಅವರು ಸ್ಥಾಪಿಸಿದ 'ಪ್ರಭಾತ' ಸಂಪೂರ್ಣವಾಗಿ ಸಾಹಿತ್ಯಕ ಪತ್ರಿಕೆಗಳಾಗಿದ್ದವು[೪೦] ಎಂಬುದು ವಿಶೇಷ. ಕೊಡಗಿನಲ್ಲಿ ಸುಮಾರು ೭೦–೮೦ರ ದಶಕದಲ್ಲಿಯೇ ಪತ್ರಿಕಾವಲಯದಲ್ಲಿ

ವೈವಿಧ್ಯತೆಯನ್ನು ತರಲು ಪ್ರಯತ್ನಿಸಿದವರೆಂದರೆ ಬಿ. ಎಸ್. ಗೋಪಾಲಕೃಷ್ಣ. ಇವರು ದಿನಪತ್ರಿಕೆ, ಸಂಜೆ ಪತ್ರಿಕೆ, ವಾರ ಪತ್ರಿಕೆ, ಮತ್ತು ಮಾಸಪತ್ರಿಕೆಗಳನ್ನು ಪ್ರಕಟಿಸಿರುತ್ತಾರೆ.[೪೧] ಇವರು ೧೯೫೭ ರಲ್ಲಿ ಪ್ರಾರಂಭಿಸಿದ 'ಶಕ್ತಿ' ದೈನಿಕ ಕೊಡಗಿನ ಪ್ರಥಮ ದಿನಪತ್ರಿಕೆ ಎಂದು ಗುರುತಿಸಿಕೊಂಡಿತು. ಈ ಪತ್ರಿಕೆ ಇಂದಿಗೂ ಕೊಡಗಿನಾದ್ಯಂತ ಪ್ರಸಾರವಾಗುತ್ತಿರುವುದು ಇದರ 'ಶಕ್ತಿ'ಯನ್ನು ಸೂಚಿಸುತ್ತದೆ. ಈ ಪತ್ರಿಕೆಯನ್ನು ಜಿ. ರಾಜೇಂದ್ರ ಮತ್ತು ಸಹೋದರರು ಮುನ್ನಡೆಸುತ್ತಿದ್ದಾರೆ. ಕ್ರಮೇಣ ಪತ್ರಿಕೆಗಳು ಸ್ಪರ್ಧೆಗಿಳಿದಂತೆ ಪ್ರಾರಂಭವಾಗಿ ಇವುಗಳಲ್ಲಿ ಕೆಲವು ಇನ್ನೂ ಉಳಿದುಕೊಂಡಿದ್ದು ಕೆಲವು ಕಣ್ಮರೆಯಾಗಿವೆ.

ಪ್ರಸ್ತುತ ಟಿ. ಪಿ. ರಮೇಶ್ ಅವರು ಮಡಿಕೇರಿಯಿಂದ ಪ್ರಕಟಿಸುತ್ತಿರುವ 'ಗಡಿನಾಡ ಸಂಚಾರಿ' ವಾರಪತ್ರಿಕೆಯಾಗಿದ್ದರೆ, ವಿ. ಪಿ. ಸುರೇಶ್ ಅವರ 'ಪರಾಕ್ರಮ' ಕೊಡಗಿನ ಸಂಜೆ ಪತ್ರಿಕೆಯಾಗಿದೆ. ಡಾಟಿ ಪೂವಯ್ಯನವರ 'ಬ್ರಹ್ಮಗಿರಿ'ಯು ಕೊಡವ ಭಾಷೆಯಲ್ಲಿ ಪ್ರಕಟವಾಗುತ್ತಿರುವ ಪತ್ರಿಕೆಯಾಗಿದೆ. ಕೊಡವರೇ ಆದ ಕೆ. ಬಿ. ಗಣಪತಿಯವರು ಪತ್ರಿಕೋದ್ಯಮದಲ್ಲಿ ಹೊಸ ಪ್ರಯೋಗ ಮಾಡಿದವರೆಂದೇ ಹೇಳಬಹುದು. ಇವರು ಮೈಸೂರಿನಿಂದ ಪ್ರಕಟಿಸುವ 'ಮೈಸೂರು ಮಿತ್ರ' ಮತ್ತು 'ಸ್ಟಾರ್ ಆಫ್ ಮೈಸೂರು' ಪ್ರಮುಖವಾದವುಗಳು. ಇದರಲ್ಲಿ 'ಮೈಸೂರು ಮಿತ್ರ' ಪ್ರಾರಂಭದಲ್ಲಿ ಚಿಕ್ಕ ಪತ್ರಿಕೆಯಾಗಿದ್ದು, ಇಂದು ರಾಜ್ಯ ಮಟ್ಟದ ಪತ್ರಿಕೆಯಾಗಬಹುದಾದ ಸ್ವರೂಪವನ್ನು ಪಡೆದು ಕೊಳ್ಳುತ್ತಿದೆ.

## ಕೊನೆ ಟಿಪ್ಪಣಿಗಳು

೧. **ಕೊಡಗು**, ೧೯೯೮, ರಾಮಚಂದ್ರಾಚಾರ್ ಡಿ. ಬಿ. ಸುನಂದ ಪ್ರಕಾಶನ, ವೀರಾಜಪೇಟೆ, ಪು–೧೯

೨. **ಮಡಿಕೇರಿ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ**, ೧೯೮೧, ಹಂ. ಪ. ನಾಗರಾಜಯ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ–೨೨೪

೩. **ವಾಗ್ಭೂಷಣ**, ೨೦೦೩, ಟಿ. ಕೇಶವಭಟ್ಟ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ–೨೬೯

೩ಎ. **ಕರ್ನಾಟಕ ರಾಜ್ಯ ಗೆಜೆಟಿಯರ್–ಕೊಡಗು ಜಿಲ್ಲೆ**, ೧೯೯೨, ಸೂರ್ಯನಾಥ ಯು ಕಾಮತ್, ಲಿಪಿ ಮುದ್ರಣ, ಬೆಂಗಳೂರು, ಪುಟ–೬೯೫

೪. **ಅದೇ;**

೫. **ಪಟ್ಟೋಲೆ ಪಳಮೆ**, ೧೯೯೫, ನಡಿಕೇರಿಯಂಡ ಚಿಣ್ಣಪ್ಪ, ಕನ್ನಡ ಪುಸ್ತಕ ಪ್ರಾದಿಕಾರ, ಬೆಂಗಳೂರು, ಪುಟ–iv

೬. **ಪಳಮೆ**, ೨೦೦೪, ತಂಬಂಡ ವಿಜಯ ಪೂಣಚ್ಚ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ–೪೬

೭. **ಕೊಡಗು**, ೧೯೯೮, ರಾಮಚಂದ್ರಾಚಾರ್ ಡಿ. ಬಿ. ಸುನಂದ ಪ್ರಕಾಶನ, ವೀರಾಜಪೇಟೆ, ಪುಟ–೩೬

೮. **ಕೊಡಗು ವಿವರಣೆ**, ೨೦೦೫, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ–vi

೯. **ಅದೇ;**

೧೦. **ಕರ್ನಾಟಕ ರಾಜ್ಯ ಗೆಜೆಟಿಯರ್–ಕೊಡಗು ಜಿಲ್ಲೆ**, ೧೯೯೨, ಸೂರ್ಯನಾಥ ಯು ಕಾಮತ್, ಲಿಪಿ ಮುದ್ರಣ, ಬೆಂಗಳೂರು, ಪುಟ–೭೧೬

೧೧. **ಪಳಮೆ**, ೨೦೦೪, ತಂಬಂಡ ವಿಜಯ ಪೂಣಚ್ಚ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ–೭೯

೧೨. **ಕರ್ನಾಟಕ ರಾಜ್ಯ ಗೆಜೆಟಿಯರ್–ಕೊಡಗು ಜಿಲ್ಲೆ**, ೧೯೯೨, ಸೂರ್ಯನಾಥ ಯು ಕಾಮತ್, ಲಿಪಿ ಮುದ್ರಣ, ಬೆಂಗಳೂರು, ಪುಟ–೭೧೭

೧೨ಎ. **ಅದೇ**, ಪುಟ–೭೧೬

೧೨ಬಿ. **ಅದೇ;**

೧೩. **ಅದೇ**, ಪುಟ–೭೧೮

೧೩ಎ. **ಅದೇ;**

೧೪. **ಅದೇ;**

೧೫. **ಕೊಡಗು ಜನಪದ ಸಂಸ್ಕೃತಿ**, ೨೦೧೧, ನಲ್ಲೂರು ಆರ್ ಪ್ರಸಾದ್, ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಮಡಿಕೇರಿ, ಪುಟ–೧೩

೧೬. **ಅದೇ**; ಪುಟ–೧೫

೧೭. **ಅದೇ**; ಪುಟ–೧೪

೧೮. **ಅದೇ**; ಪುಟ–೨೧

೧೯. **ಅದೇ**; ಪುಟ–೨೨

೨೦. **ಕರ್ನಾಟಕ ರಾಜ್ಯ ಗೆಜೆಟಿಯರ್–ಕೊಡಗು ಜಿಲ್ಲೆ**, ೧೯೯೨, ಸೂರ್ಯನಾಥ ಯು ಕಾಮತ್, ಲಿಪಿ ಮುದ್ರಣ, ಬೆಂಗಳೂರು, ಪುಟ–೨೨೮

೨೧. **ಮಡಿಕೇರಿ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ**, ೧೯೮೧, ಸಂ. ಹಂ. ಪ. ನಾಗರಾಜಯ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ–೨೪೮

೨೨. **ಹೊಸಗನ್ನಡ ಸಾಹಿತ್ಯ ಚರಿತ್ರೆ**, ೧೯೯೯, ಎಲ್. ಎಸ್. ಶೇಷಗಿರಿರಾವ್, ಅಂಕಿತ ಪುಸ್ತಕ, ಬೆಂಗಳೂರು, ಪುಟ–೧

೨೩. **ಅದೇ**; ಪುಟ–೬

೨೪. **ಕೊಡಗಿನ ಶತಮಾನದ ಕಾವ್ಯ**, ೨೦೧೧, ಕವಿತಾ ರೈ ಮತ್ತು ಆನಂದ ಕೋಡಿಂಬಾಳ, ಕ್ರೈಸ್ಟ್ ಯೂನಿವರ್ಸಿಟಿ, ಬೆಂಗಳೂರು, ಪುಟ–x

೨೫. **ಕೊಡಗು**, ೧೯೯೮, ರಾಮಚಂದ್ರಾಚಾರ್ ಡಿ. ಬಿ., ಸುನಂದ ಪ್ರಕಾಶನ, ವಿರಾಜಪೇಟೆ, ಪುಟ–೨೧೮

೨೬. **ಅದೇ**; ಪುಟ–೨೨೪

೨೭. **ಅದೇ**; ಪುಟ–೨೩೨

೨೮. **ಅದೇ**; ಪುಟ–೨೨೨–೨೨೩

೨೯. **ಅದೇ**; ಪುಟ–೨೨೬

೩೦. **ಅದೇ**; ಪುಟ–೨೩೩

೩೧. **ಅದೇ**; ಪುಟ–೨೨೭

೩೨. **ಬ್ರಹ್ಮಗಿರಿ**, ೧೯೭೭, ಭಾರತೀಸುತರ ಸಂಸ್ಮರಣೆ ಗ್ರಂಥ, ಮಿತ್ರ ಅ. ರಾ., ಶ್ರೀ ಕಾವೇರಿ ಪ್ರಕಾಶನ, ಮಡಿಕೇರಿ, ಪುಟ–೪೧೭

೩೩. **ಪ್ರೌಢ ಪ್ರತಾಪ ವೀರರಾಜೇಂದ್ರ**, ೧೯೯೦, ಶ್ರೀನಿವಾಸ್ ಎಂ. ಎಸ್., ಸೌರಭ ಪ್ರಕಾಶನ, ಬೆಂಗಳೂರು, ಪುಟ–v

೩೪. **ಕೊಡವ ರಂಗಭೂಮಿ**, ೨೦೦೬, ತೀತೀರ ರೇಖಾ ವಸಂತ, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ಪುಟ–೨೯

೩೫. **ಜಗತ್ತಿಗೊಂದೇ ಕೊಡಗು**, ೧೯೬೯, ಕೆ. ಪಿ. ಮುತ್ತಣ್ಣ, ಪ್ರೀಮಿಯರ್ ಪ್ರೆಸ್, ಬೆಂಗಳೂರು, ಪುಟ–೧೪೮

೩೬. **ಕೊಡಗು**, ೧೯೯೮, ರಾಮಚಂದ್ರಾಚಾರ್ ಡಿ. ಬಿ., ಸುನಂದ ಪ್ರಕಾಶನ, ವೀರಾಜಪೇಟೆ, ಪುಟ-೩೫

೩೭. **ಕೊಡಗಿನ ಇತಿಹಾಸ ಪುಟಗಳಿಂದ** (ಮುನ್ನುಡಿ), ೧೯೮೩, ಕಾಕೆಮಾನಿ, ಕನ್ನಡ ಸಾಹಿತ್ಯ ಪರಿಷತ್ತು, ಪುಟ-೫

೩೮. **ಕೊಡಗು**, ೧೯೯೮, ರಾಮಚಂದ್ರಾಚಾರ್ ಡಿ. ಬಿ., ಸುನಂದ ಪ್ರಕಾಶನ, ವೀರಾಜಪೇಟೆ, ಪುಟ-೨೧

೩೯. **ಜಗತ್ತಿಗೊಂದೇ ಕೊಡಗು**, ೧೯೬೯, ಕೆ. ಪಿ. ಮುತ್ತಣ್ಣ, ಪ್ರೀಮಿಯರ್ ಪ್ರೆಸ್, ಬೆಂಗಳೂರು, ಪುಟ-೭೪

೪೦. **ಕರ್ನಾಟಕ ರಾಜ್ಯ ಗೆಜೆಟಿಯರ್-ಕೊಡಗು ಜಿಲ್ಲೆ**, ೧೯೯೨, ಸೂರ್ಯನಾಥ ಯು ಕಾಮತ್, ಲಿಪಿ ಮುದ್ರಣ, ಬೆಂಗಳೂರು, ಪುಟ-೭೩೯

೪೧. **ಅದೇ;**

# ಅಧ್ಯಾಯ - ನಾಲ್ಕು

## ಕೊಡವರ ಸಂಸ್ಕೃತಿಯ ಸ್ವರೂಪಗಳು

೪.೧. ಕೊಡವರ ಮೂಲ

೪.೨. ಕೊಡವರ ಹಬ್ಬಗಳು

೪.೩. ಕೊಡವರ ವಿವಾಹ

೪.೪. ಕೊಡವರ ಆಚರಣೆಗಳು

೪.೫. ಕೊಡವರ ಪ್ರದರ್ಶನ ಕಲೆಗಳು

೪.೬. ಕೊಡವರ ಬೇಟೆ

೪.೭. ಕೊಡವರ ಅನನ್ಯತೆ

# ಅಧ್ಯಾಯ – ನಾಲ್ಕು

# ಕೊಡವರ ಸಂಸ್ಕೃತಿಯ ಸ್ವರೂಪಗಳು

ಹಲವು ವಿಶಿಷ್ಟ ಸಂಪ್ರದಾಯಗಳನ್ನು ಹೊಂದಿರುವ ಒಂದು ರೀತಿಯ ಮಾರ್ಷಲ್ ಪರಂಪರೆ ಎಂದು ಗುರುತಿಸಬಹುದಾದ ಈ ಕೊಡವರ ಸಂಸ್ಕೃತಿ ಮತ್ತು ಸಂಪ್ರದಾಯಗಳು ಬಹಳ ಆಕರ್ಷಕವಾದವುಗಳಾಗಿವೆ. ಇವರ ಜೀವನ ಪದ್ಧತಿಗಳು ಇತರ ಜಾತಿ ಜನಾಂಗದವರಿಗಿಂತ ಸಾಕಷ್ಟು ಭಿನ್ನವಾಗಿವೆ. ತೊಡುವ ಉಡುಗೆ, ಧರಿಸುವ ಆಭರಣ, ಊಟ–ಉಪಚಾರ, ಆಹಾರ ಪದ್ಧತಿ, ಬೇಟೆ, ವ್ಯವಸಾಯ, ಮುಂತಾದವುಗಳು ಕೊಡವರ ಪ್ರತ್ಯೇಕತೆಯನ್ನು ತಿಳಿಸಿಕೊಡುತ್ತವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಾಯದಲ್ಲಿ ಕೊಡವರ ಮೂಲ, ಸಂಸ್ಕೃತಿ, ಇಲ್ಲಿ ಇವರು ಆಚರಿಸುತ್ತಿರುವ ಹಬ್ಬಗಳು, ರೂಢಿಸಿಕೊಂಡು ಬಂದಿರುವ ಪದ್ಧತಿಗಳು, ವಿವಾಹ, ಜನನ, ಮರಣ, ಮೊದಲಾದ ಜೀವನಾವರ್ತನ ಮತ್ತು ವಾರ್ಷಿಕಾವರ್ತನ ಆಚರಣೆಗಳ ಜತೆಗೆ ಮಿಲಿಟರಿ ಸೇವೆ, ಇತ್ಯಾದಿ ವಿಷಯಗಳನ್ನು ಕುರಿತು ಚರ್ಚಿಸಲಾಗಿದೆ.

## ೪.೧. ಕೊಡವರ ಮೂಲ

ಕೊಡಗಿನಲ್ಲಿ ವಾಸಮಾಡುತ್ತಿರುವ ಒಂದು ವಿಶಿಷ್ಟ ಜನಸಮುದಾಯವೇ ಕೊಡವರು. ಈ ಪ್ರದೇಶದಲ್ಲಿ ಇವರು ಬಹುಸಂಖ್ಯಾತರಲ್ಲದಿದ್ದರೂ ತಮ್ಮದೇ ಅದ ಭಾಷೆ, ವೇಷ, ಬದುಕುಗಳ ಮೂಲಕ ಗಮನ ಸೆಳೆದಿರುವ ಜನಾಂಗವಿದು. ಕೊಡವರು ವ್ಯವಸಾಯವನ್ನು ಮುಖ್ಯ ಕಸುಬನ್ನಾಗಿಸಿಕೊಂಡವರು. ಬಹುಪಾಲು ಕೊಡವರು ತಮ್ಮದೇ ಆದ ಎಸ್ಟೇಟ್‌ಗಳನ್ನು ಹೊಂದಿದ್ದು, ಕಾಫಿ, ಏಲಕ್ಕಿ, ಮೆಣಸು, ಕಿತ್ತಳೆ, ಭತ್ತ ಮೊದಲಾದ ಬೆಳೆಗಳನ್ನು ಬೆಳೆಯುತ್ತಾರೆ. ಈ ರೀತಿಯ ಸಾಂಪ್ರದಾಯಿಕ ಬದುಕಿನೊಂದಿಗೆ ಮಿಲಿಟರಿ ಸೇವೆ, ಸರ್ಕಾರಿ ಸೇವೆ, ಪತ್ರಿಕೋದ್ಯಮ ಹಾಗೂ ಕೈಗಾರಿಕೋದ್ಯಮಗಳಲ್ಲಿಯೂ ಗುರುತಿಸಿಕೊಂಡಿದ್ದಾರೆ.

ಹೀಗೆ ನಾನಾ ಕಾರಣಗಳಿಂದ ದೇಶದ ನೋಡುಗರಿಗೆ ಹಾಗೂ ಓದುಗರಿಗೆ ಕುತೂಹಲಕ್ಕೆ ಕಾರಣರಾಗಿರುವ ಈ ಕೊಡವರು ಯಾರು? ಇವರು ಮೂಲನಿವಾಸಿಗಳೇ ಅಥವಾ ವಲಸೆ ಬಂದವರೆ? ಎಲ್ಲಿಂದ ಬಂದಿರಬಹುದು? ಎಂಬ ವಿಚಾರವಾಗಿ ತುಂಬಾ ಅಧ್ಯಯನಗಳು, ಸಂಶೋಧನೆಗಳು ನಡೆದಿವೆ. ಬಿ.ಡಿ. ಗಣಪತಿಯವರು 'ಕೊಡವರು ಇಂತಹವರೇ, ಇಲ್ಲಿಂದಲೇ ಬಂದವರು ಎಂದು ಸಮರ್ಪಕವಾದ ಉತ್ತರ ಕೊಡಲು ಯಾವುದೇ ಆಧಾರಗಳಿಲ್ಲ'[೧] ಎಂದು ಹೇಳಿದರೆ, ಪಿ.ಎಸ್. ರಾಮನುಜಂ 'ಕೊಡವರು ಯಾರು ಎಂಬ ಪ್ರಶ್ನೆ ಬಹಳ ವಿವಾದಾತ್ಮಕವಾದ ವಿಷಯವಾಗಿ ಹೋಗಿದೆ. ಇಲ್ಲಿಯವರೆಗೆ ತೃಪ್ತಿಕರವಾಗಿ ಇದಕ್ಕೆ ಯಾರೂ ಉತ್ತರ ಹೇಳಿಲ್ಲ'[೨]

ಎನ್ನುತ್ತಾರೆ. ಇದರಿಂದ ಕೊಡವರ ಮೂಲದ ಚರ್ಚೆ ಬೆಳೆಯುತ್ತಲೇ ಹೋಗಿದೆ. ಕೊಡವರ ಜೀವನ ಶೈಲಿಯನ್ನು ಗಮನಿಸಿ ಕೆಲವರು ಅವರ ಶಾರೀರಿಕವಾದ, ಸಾಮಾಜಿಕವಾದ, ಸಾಂಸ್ಕೃತಿಕವಾದ ಹಾಗೂ ಚಾರಿತ್ರಿಕವಾದ ಅಂಶಗಳನ್ನು ಮುಖ್ಯವಾಗಿಟ್ಟು ಕೊಂಡು ಕೊಡವರ ಮೂಲವನ್ನು ಹುಡುಕಲು ಪ್ರಯತ್ನಿಸಿ ಅವರುಗಳದೇ ಆದಂತಹ ವಾದವನ್ನು ಮುಂದಿಟ್ಟಿದ್ದಾರೆ. ಕೊಡವರು ಆರ್ಯರೆಂದು, ದ್ರಾವಿಡರೆಂದು, ಇಂಡೋ ಸಿಥಿಯನ್ನರೆಂದು, ಅರಬ್ಬಿಯವರೆಂದು, ಕದಂಬರೆಂದು, ಕುರ್ದಿಸ್ತಾನದ ಕುರ್ದಿಗಳೆಂದು ವಾದಿಸಿದ್ದಾರೆ. ಕೊಡವರ ವೇಷಭೂಷಣಗಳು, ವಿವಾಹ ಪದ್ಧತಿಗಳು, ಹಬ್ಬಗಳ ಆಚರಣೆ ಮುಂತಾದವುಗಳನ್ನು ಗಮನಿಸಿದರೆ ಇವರು ಭಾರತದ ಹೊರಗಿನಿಂದ ಬಂದವರೆಂದು ಒಪ್ಪುವುದು ಕಷ್ಟ. ಏಕೆಂದರೆ ಇವರ ಎಲ್ಲಾ ಆಚರಣೆಗಳು ಭಾರತೀಯ ಸಂಸ್ಕೃತಿಯ ಹಿನ್ನೆಲೆಯಲ್ಲಿ ಆಚರಿಸಲ್ಪಡುತ್ತಿವೆ.

'ಕೊಡವರು ಕುರುಕ್ಷತ್ರಿಯ ಪಂಗಡಗಳ ಮೂಲವನ್ನು ಹೊಂದಿರುವವರು. 'ಕುರು' ಎಂಬ ಪದದಿಂದ 'ಕುಡು' ಶಬ್ದ ಬಂದಿದ್ದು 'ಕುಡುಗಳ' ದೇಶವೇ 'ಕೊಡಗು', ಇಲ್ಲಿ ವಾಸಿಸುವರೇ 'ಕೊಡವರು' ಅಥವಾ 'ಕೊಡಗರು'. ಉತ್ತರ ಭಾರತದಿಂದ ಇಲ್ಲಿಗೆ ಬಂದು ನೆಲೆಸಿ ಇಲ್ಲಿಯ ಜನರೊಂದಿಗೆ ಸೇರಿಕೊಂಡು, ವೈವಾಹಿಕ ಸಂಪರ್ಕವೇರ್ಪಡಿಸಿಕೊಂಡು ಇಲ್ಲಿಯ ವಾತಾವರಣಕ್ಕೆ ಹೊಂದಿಕೊಂಡು ತಮ್ಮದೇ ಆದ ಪದ್ಧತಿಗಳನ್ನು ರೂಪಿಸಿಕೊಂಡಿದ್ದಾರೆ'.[೩] ಎಂಬ ಮಾತು ಮತ್ತು 'ಕೊಡವರಿಗೆ ದಕ್ಷಿಣ ಭಾರತದ ಯಾವುದೇ ಜನಾಂಗದ ಹೋಲಿಕೆ ಇಲ್ಲ. ಶಾರೀರಿಕ ರಚನೆಯ ದೃಷ್ಟಿಯಿಂದ ಇವರು ದಕ್ಷಿಣ ಭಾರತದ ಜನಾಂಗಗಳ ಗುಂಪಿಗೆ ಸೇರಿಲ್ಲವೆಂಬುದು ನಿರ್ವಿವಾದ'[೪] ಎಂಬ ವಿಚಾರಗಳನ್ನು ಗಮನಿಸಿದರೆ ಕೊಡವರು ಉತ್ತರ ಭಾರತದಿಂದಲೇ ವಲಸೆ ಬಂದಿದ್ದಾರೆಂಬುದಕ್ಕೆ ಹತ್ತಿರವಾದ ಅಭಿಪ್ರಾಯವೆನಿಸುತ್ತದೆ.

ಕೊಡಗಿನಲ್ಲಿ ಬೇರೆ ಬೇರೆ ಧರ್ಮ, ಜಾತಿ, ಜನಾಂಗಗಳು ವಾಸಿಸುತ್ತಿದ್ದರೂ, ಕೊಡವರ ಮೂಲದ ಚರ್ಚೆಯೇ ಪ್ರಧಾನವಾಗಿರುವುದನ್ನು ಗಮನಿಸಿದರೆ ಕುತೂಹಲ ಹೆಚ್ಚಾಗುತ್ತದೆ. ಈ ಕುತೂಹಲಕ್ಕೆ ಅವರ ಜೀವನ ವಿಧಾನವೇ ಕಾರಣವಿರಬಹುದು. 'ಮೈಸೂರು ಮಿತ್ರ' ದಿನಪತ್ರಿಕೆಯ ಸಂಪಾದಕರಾದ ಕೆ. ಬಿ. ಗಣಪತಿಯವರು 'ಕೊಡವರು ಪ್ಯಾಲೇಸ್ಟೇನ್ ಮೂಲದವರಾಗಿದ್ದು, 'ಮುಸ್ತಫಾ' ಎಂಬ ಹೆಸರೇ 'ಮುತ್ತಪ್ಪ' ಎಂದು ಅಪಭ್ರಂಶಗೊಂಡಿದೆ'[೫] ಎಂಬ ಒಂದು ವಿಚಿತ್ರ ಅಭಿಪ್ರಾಯವನ್ನು ಮುಂದಿಡುತ್ತಾರೆ. ಆದರೆ ಇದೊಂದು ಹಾಸ್ಯಾಸ್ಪದ ವಿಚಾರ ಎಂದು ಈ ಅಭಿಪ್ರಾಯವನ್ನು ಸಾರಾಸಗಟಾಗಿ ನಿರಾಕರಿಸಿರುವುದು ಕಂಡು ಬರುತ್ತದೆ.[೬]

ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಬಲಿಷ್ಠವಾಗಿರುವ ಕೊಡವರ ಮೂಲದ ಬಗ್ಗೆ ನಡೆದಿರುವ ಊಹೆ, ಚರ್ಚೆ ಇಲ್ಲಿನ ಬೇರೆ ಜನಾಂಗದ ಕುರಿತು ನಡೆದಿಲ್ಲವೆಂದೇ ಹೇಳಬಹುದು. ಒಂದು ವೇಳೆ ನಡೆದಿದ್ದರೂ ಒಂದು ಒಮ್ಮತದ ಅಭಿಪ್ರಾಯಕ್ಕೆ ಬಂದಿರುವುದು ಅಧ್ಯಯನದಿಂದ ಗೊತ್ತಾಗುತ್ತದೆ. ಉದಾಹರಣೆಗೆ ಕೊಡಗಿನಲ್ಲಿಯೇ ವಾಸವಾಗಿರುವ ಎರವರು, ಪಣಿಯರು,

ಕೆಂಬಟ್ಟಿಯರು ಮೊದಲಾದ ಜನರ ಕುರಿತೂ ಅಧ್ಯಯನಗಳು ನಡೆದಿದ್ದು, ಇವರ ಮೂಲವನ್ನು ಕಂಡುಕೊಳ್ಳಲಾಗಿದೆ.

ಕೊಡವರ ಮೂಲವನ್ನು ಗುರುತಿಸಲು ಪೌರಾಣಿಕ ಅಂಶಗಳು ಹಾಗೂ ಇತಿಹಾಸವನ್ನು ತಿಳಿಯಬೇಕಾಗುತ್ತದೆ. ಇಲ್ಲಿಯ ಇತಿಹಾಸವನ್ನು ಅವಲೋಕಿಸಿದರೆ ಕ್ರಿ. ಶ. ೧೧ನೇ ಶತಮಾನದ 'ಹುಣಸೂರು ಶಾಸನದಲ್ಲಿ' "ಎಲ್ಲಾ ನಾಡ ಕೊಡಗರು"[೭] ಎಂದು ಬರೆಯಲಾಗಿದೆ. ಇಲ್ಲಿ 'ಕೊಡಗರು' ಎಂದರೆ ಇಲ್ಲಿನ ಎಲ್ಲ ನಿವಾಸಿಗಳು ಎಂಬರ್ಥದಲ್ಲಿ ಬಳಸಿರುವ ಸಾಧ್ಯತೆಯಿದೆ. ಆದರೂ ಇತ್ತೀಚಿನವರೆಗೂ ಕೊಡಗರೆಂದರೆ ಕೊಡವರೇ ಎಂದು ಅರ್ಥೈಸಲಾಗುತ್ತಿದ್ದುದರಿಂದ ಅವರು ಕೊಡವರೇ ಎಂದು ತಿಳಿಯಲಾಗಿದೆ. ಕೊಡವರು ಕೊಡಗಿಗೆ ಸುಮಾರು ೭ರಿಂದ ೮ನೇ ಶತಮಾನದ ಒಳಗೆ ಕದಂಬರ ಸೀಮೆಯಿಂದ ಇಲ್ಲಿಗೆ ವಲಸೆ ಬಂದಿರಬಹುದು[೮].

ಚಂದ್ರವಂಶದ ಅರಸುಕುಮಾರನು ವಲಸೆ ಬಂದು ಇಲ್ಲಿ ನೆಲೆಸಿ ತನ್ನ ಸಾಹಸದಿಂದ ಊರು ಕಟ್ಟಿರುವುದು ಅಧ್ಯಯನದ ಮೂಲಕ ತಿಳಿದು ಬರುತ್ತದೆ. ಕೆಲವು ಕ್ಷತ್ರಿಯ ಪಂಗಡಗಳು ಉತ್ತರದಿಂದ ಬಂದು ಇಲ್ಲಿಯೇ ನೆಲೆಸಿ ಇಲ್ಲಿನ ದೇಶೀಯರೊಡನೆ ಬೆರೆತು ಒಂದು ಹೊಸ ಪಂಗಡದಂತೆಯೆ ರೂಪುಗೊಂಡಿರಬಹುದು. ದೇಶೀಯ ಪದ್ಧತಿಗಳನ್ನೇ ಅವರು ಅಳವಡಿಸಿಕೊಂಡರು. ಅವುಗಳೂ ಹಿಂದೂ ಪದ್ಧತಿಗಳೇ ಆದುದರಿಂದ ಅಳವಡಿಸಿಕೊಳ್ಳುವುದು ಅವರಿಗೆ ಸುಲಭವಾಯಿತು. ಈ ಎಲ್ಲಾ ಆಧಾರಗಳನ್ನು ಒಟ್ಟುಗೂಡಿಸಿ ನೋಡಿದರೆ ಕೊಡವರು ಭಾರತದ ಹೊರಗಿನಿಂದ ಬಂದವರಲ್ಲ. ಅವರು ಭಾರತದ ಉತ್ತರ ಭಾಗದಿಂದ ಬಂದು ಇಲ್ಲಿ ನೆಲೆಸಿ ಇಲ್ಲಿಯೇ ಸಂಪರ್ಕ ಬೆಳೆಸಿ ಸಂಸ್ಕೃತಿಯನ್ನು ಅಳವಡಿಸಿಕೊಂಡು ದೇಶೀಯರಾಗಿ ತಮ್ಮದೇ ಒಂದು ಪಂಗಡವಾಗಿ ಬೆಳೆದಿರುವುದು ಚಾರಿತ್ರಿಕ ಸತ್ಯವೆಂದು[೯] ಹೇಳುವ ರಾಮಾನುಜಂ ಅವರ ಅಭಿಪ್ರಾಯವನ್ನು ಇಲ್ಲಿ ಉಲ್ಲೇಖಿಸಬಹುದು. 'ಕೊಡವ' ಎಂಬ ಶಬ್ದ 'ಕುರು' ಎಂಬ ಪದದಿಂದ ಬಂದಿದೆಯೆಂದು ತಿಳಿಯುವುದಾದರೆ ಕುರುಗಳೇ ಅಂದರೆ ಕುರುವಂಶದ ಕ್ಷತ್ರಿಯ ಪಂಗಡವೇ 'ಕುರುಗಳು'. ಈ ಕುರುಗಳೇ ಕೊಡವರಾಗಿರಬಹುದು ಎಂಬ ವಾದವೊಂದಿದೆ. ಕೊಡವರು ಕ್ಷತ್ರಿಯ ಮೂಲದವರು ಎನ್ನುವುದಕ್ಕೆ ಹತ್ತಿರವೆನಿಸುವ ಕೆಲವು ನಿದರ್ಶನಗಳು ಹೀಗಿವೆ– ಮೊದಲನೆಯದಾಗಿ ಕೊಡವ ಗಂಡಸರು ತೊಡುವ ಸಾಂಪ್ರದಾಯಿಕ ಉಡುಪು. ಇದು ಕುತ್ತಿಗೆಯಿಂದ ಮೊಣಕಾಲಿನವರೆಗೆ ಮುಚ್ಚುವ ಶರ್ಟ್‌ನ ಮೇಲೆ ತೊಡುವ ಕಪ್ಪು ಬಣ್ಣದ ನಿಲುವಂಗಿಯಾಗಿದ್ದು, ಸೊಂಟದ ಭಾಗದಲ್ಲಿ ಒಂದು ಪಟ್ಟಿಯಂತಹ ವಸ್ತ್ರವನ್ನು ಕಟ್ಟಿಕೊಂಡು ಅದಕ್ಕೆ ಪೀಚೆಕತ್ತಿಯನ್ನು ಸಿಕ್ಕಿಸಿಕೊಂಡಿರುತ್ತಾರೆ. ತಲೆಗೊಂದು 'ಪಾನಿಮಂಡೆತುಣಿ' ಎಂದು ಕರೆಯಲ್ಪಡುವ ರುಮಾಲು ಧರಿಸಲಾಗುತ್ತದೆ. ಈ ರೀತಿಯ ಉಡುಪು ಯುದ್ಧದ ಸಂಕೇತವೆಂದು ಭಾವಿಸಲಾಗಿದೆ. ಎರಡನೆಯದಾಗಿ ಕೊಡವರಲ್ಲಿ ಗಂಡುಮಗು ಜನಿಸಿದರೆ ಕೂಡಲೇ ಒಂದು ಸುತ್ತು ಗುಂಡು ಹಾರಿಸುವುದು, ನಾಮಕರಣದ ಸಮಯದಲ್ಲಿ ಮಗುವಿಗೆ ಬಿಲ್ಲು ಬಾಣದ ಪರಿಚಯ ಮಾಡಿಸುವುದು ಮತ್ತು ಮೂರನೆಯದಾಗಿ ಸಾಂಪ್ರದಾಯಿಕ 'ಪಡೆಕಳಿ' ಎಂಬ ಯುದ್ಧ

ಸಂಬಂಧಿಯಾದ ಕುಣಿತ ಕೊಡವರು ಕ್ಷತ್ರಿಯರೆಂಬುದಕ್ಕೆ ಸಾಕ್ಷಿಯಾಗಿವೆ ಎಂದು ಹೇಳುವುದನ್ನು ಕಾಣಬಹುದು.

ಕೊಡವರು ಕೊಡಗಿನಲ್ಲಿ ನೆಲೆನಿಂತು ಹಲವು ವರ್ಷಗಳೇ ಕಳೆದು ಹೋಗಿವೆ. ಇಂದಿಗೂ ಕೊಡವರ ಮೂಲ ಸ್ಪಷ್ಟನೆಯಾಗದಿರುವುದು ಸಂಶೋಧಕರಿಗೆ ಒಂದು ಸವಾಲೇ ಆಗಿ ಹೋಗಿದೆ. ಯಾವೊಬ್ಬ ಸಂಶೋಧಕನೂ ಇವರ ಮೂಲದ ಕುರಿತು ಕೇವಲ ತಮ್ಮ ತಮ್ಮ ವಾದಗಳನ್ನು ಮಾತ್ರ ಮುಂದಿಡುತ್ತಿದ್ದಾರೆಯೇ ವಿನ: ಒಂದು ಖಚಿತ ನಿಲುವಿಗೆ ಬರಲು ಸಾಧ್ಯವಾಗಿಲ್ಲ. ಕೊಡವರು ಎಲ್ಲಿಂದಲೇ ಬಂದಿರಲಿ ಅವರು ಇಲ್ಲಿಗೆ ಬಂದು ನೆಲೆಸಿದ ಮೇಲೆಯೇ ಕೊಡವರಾಗಿರಬಹುದು. ಕೊಡಗಿನಲ್ಲಿ ವಾಸಮಾಡುವ ಜನ ಸಮುದಾಯದಲ್ಲಿ 'ತಮ್ಮ ವರ್ಚಸ್ಸನ್ನು ಇತರರ ಮೇಲೆ ಬೀರಲು ಶಕ್ತರಾದುದರಿಂದ ಇವರು ಕೊಡಗರು ಅಥವಾ ಕೊಡವರು ಆಗಿದ್ದಾರೆ'[೧೦] ಎಂದು ಹೇಳಲಾಗಿದೆ ಆದರೆ ಇದು ಅಷ್ಟು ಸೂಕ್ತವೆನಿಸುವುದಿಲ್ಲ. ಏಕೆಂದರೆ ವರ್ಚಸ್ಸಿನ ಪ್ರಭಾವಕ್ಕೂ 'ಕೊಡವ' ಎಂಬ ಹೆಸರಿಗೂ ಸಂಬಂಧ ಕಂಡುಬರುವುದಿಲ್ಲ. ಆದುದರಿಂದ ಕೊಡವರನ್ನು ಕುರಿತು ಇನ್ನೂ ನಿರಂತರವಾಗಿ ಅಧ್ಯಯನ, ಸಂಶೋಧನೆಗಳು ಮುಂದುವರೆಯುತ್ತಲೇ ಇವೆ. ಇದೆಲ್ಲದರ ನಡುವೆ ಈ 'ಕೊಡವ' ಸುಮುದಾಯ ಇಂದಿಗೂ ಇದಾವುದರ ಜಿಜ್ಞಾಸೆಗೂ ತೊಡಗದೆ ಎಂದಿನ ತಮ್ಮ ತಮ್ಮ ದುಡಿಮೆಗಳಲ್ಲಿ ನಿರತವಾಗಿರುವುದನ್ನು ಕಾಣಬಹುದು.

ಕೊಡವರಲ್ಲಿರುವ ಮರುವಿವಾಹ ಅಂದರೆ ಅಣ್ಣನ ಹೆಂಡತಿ ವಿಧವೆಯಾದರೆ ಅವನ ತಮ್ಮನೇ ಅತ್ತಿಗೆಯನ್ನು ವಿವಾಹ ಮಾಡಿಕೊಳ್ಳುವುದು ಇವರ ವಿಶಿಷ್ಟತೆಗಳಲ್ಲಿ ಒಂದು. ಇದನ್ನು ಗಮನಿಸಿದರೆ ಕೊಡವರು ಹೊರಗಿನಿಂದಲೇ ಬಂದವರು ಎಂಬುದು ಸ್ಪಷ್ಟವಾಗುತ್ತದೆ. ಏಕೆಂದರೆ ಅತ್ತಿಗೆಯನ್ನು ಮೈದುನನೇ ವಿವಾಹವಾಗುವ ಪದ್ಧತಿ ಕೊಡಗಿನ ಕೆಂಬಟ್ಟಿ ಜನಾಂಗದ ಹೊರತು ಬೇರೆ ಯಾವ ಸಮುದಾಯದಲ್ಲೂ ಇಲ್ಲ. ಈ ಪದ್ಧತಿ ಕೊಡಗಿನದ್ದೇ ಆಗಿದ್ದರೆ ಎಲ್ಲಾ ಸಮುದಾಯಗಳೂ ಅಳವಡಿಸಿಕೊಳ್ಳುತ್ತಿದ್ದವೇನೊ. ಹೀಗಾಗಿ ಕೊಡವರು ಹೊರಗಿನಿಂದ ಇಲ್ಲಿಗೆ ಬಂದವರು ಎಂಬುದಕ್ಕೆ ಈ ಕಾರಣವೂ ಸೇರುತ್ತದೆ.

ಉತ್ತರ ಭಾಗದಿಂದ ಬಂದವರು ಎಂದರೆ ಅದು ಶ್ರೇಷ್ಠವಾದುದು ಎಂಬ ಕಲ್ಪನೆ ರಾಮಾಯಣ ಮತ್ತು ಮಹಾಭಾರತಗಳ ಕಾಲದಿಂದಲೂ ನಡೆದುಕೊಂಡು ಬಂದಿದೆ. ಯಾಕೆಂದರೆ ಇಂದಿಗೂ ದಕ್ಷಿಣ ಭಾರತದ ಅನೇಕ ಪ್ರದೇಶಗಳು ರಾಮಾಯಣ ಮತ್ತು ಮಹಾಭಾರತ ಕಾವ್ಯಗಳ ಪಾತ್ರಧಾರಿಗಳು ಉಳಿದಿದ್ದ ಸ್ಥಳ ಎಂದು ಹೇಳಿಕೊಳ್ಳುವುದರಿಂದ ಆ ಪ್ರದೇಶಗಳು ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತವೆ ಎಂಬ ನಂಬಿಕೆಯಿದೆ. ಈ ಕಾರಣದಿಂದ ಕೊಡವರು ಉತ್ತರದಿಂದ ಬಂದ ಕುರವಂಶದವರು, ಕ್ಷತ್ರಿಯರು ಎಂದು ಹೇಳುವುದು ಸಹಜವಾಗಿದೆ. ಆದರೆ ಯುದ್ಧ ಸಮಯದಲ್ಲಿ ತೊಡುವಂತಹ ವೇಷವಾಗಲಿ, ಕೋವಿ ಬಳಸುವುದಾಗಲಿ ಕೊಡವರು ಕುರುವಂಶದವರು ಎಂದು ಹೇಳಲು ಸಾಕ್ಷಿಗಳಾಗುವುದಿಲ್ಲ. ಕೋವಿ ಹಿಡಿದು ಬೇಟೆಯಲ್ಲಿ

ತೊಡಗಿರುವುದು ತಾವು ವಾಸ ಮಾಡುತ್ತಿರುವ ಸ್ಥಳದ ಪ್ರಭಾವದಿಂದಲೂ ಇರಬಹುದು. ಅರಣ್ಯ ಪ್ರದೇಶಗಳಲ್ಲಿ ವಾಸಿಸುವ ಜನರಿಗೆ ಸಹಜವಾಗಿ ಧೈರ್ಯ ಸಾಹಸ ಗುಣಗಳು ಅಗತ್ಯವಿರುತ್ತದೆ. ಇದನ್ನು ಕೊಡವರು ಅಳವಡಿಸಿಕೊಂಡು ಅಲ್ಲಿರುವ ಎಲ್ಲಾ ಜನಸಮುದಾಯದವರಿಗಿಂತ ವಿಶಿಷ್ಟ ಜೀವನ ಕ್ರಮವನ್ನು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ ಎಂಬುದೇ ವಾಸ್ತವ ಸಂಗತಿ ಏಕಾಗಬಾರದು.

'ಕೊಡವರೇನು ಸ್ವರ್ಗದಿಂದ ಇಳಿದು ಬಂದವರಲ್ಲ'[೧೧] ಎಂದು ಕೊಡವ ಸಮುದಾಯಕ್ಕೆ ಸೇರಿದ ತಿಮ್ಮಡುವನ್ನು ಕುರಿತು ಅದೇ ಸಮುದಾಯದ ಕುಶಾಲಪ್ಪ ಎಂಬ ವ್ಯಕ್ತಿ ಆಡುವ ಮಾತು ಕೊಡವರು ಎಲ್ಲರ ಹಾಗೇ ಸಾಮಾನ್ಯ ಮನುಷ್ಯರಾಗಿದ್ದು ಕೆಲವು ವಿಶಿಷ್ಟತೆಗಳೊಂದಿಗೆ ಶೌರ್ಯ ಸಾಹಸಗಳ ಕಡೆಗೆ ಒಲವು ತೋರಿ ವಿಭಿನ್ನ ಬದುಕನ್ನು ಕಟ್ಟಿಕೊಂಡಿದ್ದಾರೆಂಬುದು ಸ್ಪಷ್ಟವಾಗುತ್ತದೆ. ಕೊಡಗಿನ ಮೇಲೆ ದಂಡೆತ್ತಿ ಬಂದ ಚಿಕ್ಕವೀರರಾಜ ಒಡೆಯರ ದಳಪತಿ ಕುಮಾರಯ್ಯ ಇಲ್ಲಿನ ಜನರನ್ನು, ಮುಖ್ಯವಾಗಿ ಕೊಡವರನ್ನು ಕುರಿತು "ಇಲ್ಲಿನ ಜನರ ಬಗೆಗೆ ಸ್ವಲ್ಪ ಕೇಳಿ ತಿಳಿದಿದ್ದೇನೆ. ಅವರ ಭಾಷೆ ಬೇರೆ; ವೇಷ ಬೇರೆ. ಆ ಜನರಲ್ಲಿ ಭಿಕ್ಷುಕರಿಲ್ಲ, ಬೈರಾಗಿಗಳಿಲ್ಲ, ಕಣಿ ಹೇಳುವವರಿಲ್ಲ, ಜ್ಯೋತಿಷ್ಯ ಹೇಳುವವರಿಲ್ಲ. ಬೇಹುಗಾರರು ಯಾವ ವೇಷ ಹಾಕಿ ಹೋದರೂ, ಅವರು ತಮ್ಮವರಲ್ಲ ಎಂಬುದನ್ನು ಗುರುತಿಸುವವರು.[೧೨] ಎನ್ನುವ ಮಾತುಗಳಲ್ಲಿ ಕೊಡವರ ಚತುರತೆ, ವೃತ್ತಿನಿಷ್ಠತೆ ಮತ್ತು ದುಡಿದು ಬದುಕುವ ಛಲದವರು ಎಂಬುದು ವ್ಯಕ್ತವಾಗುತ್ತದೆ.

**ಅಮ್ಮಕೊಡವರು:** ಕೊಡಗಿನಲ್ಲಿ ಕೊಡವರಂತೆಯೇ ವೇಷಭೂಷಣಗಳನ್ನು ಧರಿಸಿಕೊಂಡು ಬದುಕುತ್ತಿರುವ ಒಂದು ಪಂಗಡವೇ ಅಮ್ಮ ಕೊಡವರು. ಕೊಡವರಲ್ಲಿ ಹಿಂದೆ ಅಮ್ಮ, ಸಣ್ಣ, ಮಲ್ಲ ಮತ್ತು ಜಮ್ಮ ಕೊಡವರೆಂದು ನಾಲ್ಕು ಭೇದಗಳಿದ್ದವೆಂದು ತಿಳಿದು ಬರುತ್ತದೆ. ಆದರೆ ಸಣ್ಣ ಮತ್ತು ಮಲ್ಲ ಕೊಡವರೆಂಬ ಭೇದವು ಈಗ ಇಲ್ಲವಾಗಿ ಅಮ್ಮ ಕೊಡವರು ಮತ್ತು ಜಮ್ಮ ಕೊಡವರು ಮಾತ್ರ ಉಳಿದಿದ್ದಾರೆ. ಅಮ್ಮ ಕೊಡವರು ಮತ್ತು ಕೊಡವರಲ್ಲಿ ಹಲವು ವಿಚಾರಗಳಲ್ಲಿ ಸಾಮ್ಯತೆಯ ಜೊತೆಗೆ ಭಿನ್ನತೆಯೂ ಇದೆ. ಕೊಡವ ಮಹಿಳೆಯರು ಹಿಂದೆ ನೆರಿಗೆ ಹಾಕಿ ಸೀರೆ ಉಟ್ಟುಕೊಂಡರೆ, ಅಮ್ಮಕೊಡವರು ಮುಂದೆ ನೆರಿಗೆ ಹಾಕಿ ಸೀರೆಯುಟ್ಟುಕೊಳ್ಳುತ್ತಾರೆ. ಕೊಡಗಿನಲ್ಲಿ ಲಿಂಗಾಯತ ಅರಸರ ಆಳ್ವಿಕೆಗೂ ಮೊದಲು ಇವರ ನಡುವೆ ವ್ಯತ್ಯಾಸವಿರಲಿಲ್ಲವಾದರೂ ಆನಂತರದಲ್ಲಿ ಭೇದ ಹೆಚ್ಚಾಗಿರುವುದು ಕಂಡುಬರುತ್ತದೆ. ಆದರೆ ಹತ್ತೊಂಬತ್ತನೇ ಶತಮಾನದಲ್ಲಿ ಬದಲಾದ ರಾಜಕೀಯ ಹಾಗೂ ಆರ್ಥಿಕ ವಿದ್ಯಮಾನಗಳಿಂದ ಒಂದಾಗಿ 'ಕೊಡವ' ಎನ್ನುವ ಒಂದೇ ಹೆಸರಿನಿಂದ ಗುರುತಿಸಿಕೊಂಡವು[೧೩] ಎಂಬ ಮಾತುಗಳೂ ಉಲ್ಲೇಖಗೊಂಡಿವೆ.

"ಅಮ್ಮಕೊಡವರು ಕೊಡಗಿನಲ್ಲಿ ಅರ್ಚಕ ಜಾತಿಗೆ ಸೇರಿದವರೆಂದು ಹೇಳಲಾಗುತ್ತದೆ. ಆದರೆ ಯಾವಾಗ ಅವರು ಅರ್ಚಕ ವೃತ್ತಿಯನ್ನು ಹೊಂದಿದ್ದರು ಮತ್ತು ಯಾವಾಗ ಈ ವೃತ್ತಿ ಅವರಿಗೆ ತಪ್ಪಿ ಹೋಯಿತು ಎಂಬುದು ರಹಸ್ಯದಲ್ಲಿ ಮುಸುಕಿದೆ".[೧೪] ಅವರು ಜನಿವಾರವನ್ನು ಧರಿಸುತ್ತಾರೆ, ಮಾಂಸ ಹಾಗೂ ಮದ್ಯಗಳನ್ನು ಸೇವಿಸುವುದಿಲ್ಲ. ಅಮ್ಮ ಕೊಡಗರು ೧೮೩೮ ರಲ್ಲಿ

ಕೊಡಗಿನ ರಾಜರ ಕೋಶಾಧಿಕಾರಿಯಾಗಿದ್ದ ಒಬ್ಬ ಹವೀಕ ಬ್ರಾಹ್ಮಣನ ಆದೇಶದ ಮೇರೆಗೆ ಜನಿವಾರವನ್ನು ಧರಿಸಿದರು. ಅಮ್ಮ ಕೊಡವರ ಹೆಸರಿನ ಕೊನೆಯಲ್ಲಿ 'ಅಮ್ಮ' ಎಂದಿರುತ್ತದೆ. ಉದಾಹರಣೆಗೆ ಅಯ್ಯಪ್ಪಮ್ಮ ಮತ್ತು ಮುತ್ತಣ್ಣಮ್ಮ. ಮೊದಲು ದಕ್ಷಿಣ ಕೊಡಗಿನಲ್ಲೇ ಹೆಚ್ಚಿನ ಸಂಖ್ಯೆಯಲ್ಲಿದ್ದ ಅಮ್ಮಕೊಡವರು ಮಲಬಾರಿನ ವೈನಾಡಿನಲ್ಲಿದ್ದ ಅವರದೇ ಆದ ರೀತಿಯ ಒಂದು ಪಂಗಡದವರೊಡನೆ ಸಂಬಂಧ ಹೊಂದಿದ್ದರೆಂದು ಹೇಳಿಕೊಳ್ಳಲಾಗುತ್ತದೆ."[೧೫] ಈಗ ಕೊಡಗಿನಲ್ಲಿ ಹೆಚ್ಚಾಗಿ ವಾಸಿಸುತ್ತಿರುವ ಕೊಡವರು ಮತ್ತು ಅಮ್ಮಕೊಡವರಲ್ಲಿ ಸಾಮ್ಯತೆಗಳಿದ್ದರೂ ಅಮ್ಮಕೊಡವರು ಶುದ್ಧ ಸಸ್ಯಾಹಾರಿಗಳು. ಹಾಗಾದರೆ ಇವರು ಕೊಡವರು ಆದದ್ದು ಹೇಗೆ? ಕೊಡಗಿಗೆ ಬಂದು ನೆಲೆ ನಿಂತಿದ್ದು ಯವಾಗ? ಒಂದೇ ಪಂಗಡವಿದ್ದ ಇವರು ನಂತರ ಬೇರೆ ಬೇರೆಯಾದರೆ ಎಂಬಿತ್ಯಾದಿ ಅನುಮಾನಗಳು ತಲೆದೋರುತ್ತವೆ.

ಅಮ್ಮಕೊಡವರು ಕೊಡವರಂತೆಯೇ ಮದುವೆ ಮತ್ತಿತರ ಸಮಾರಂಭಗಳಲ್ಲಿ ಕುಪ್ಪಸ, ದಟ್ಟಿ, ಪೀಚೆಕತ್ತಿಗಳನ್ನು ಧರಿಸಿದರೂ ಅದರೊಂದಿಗೆ ಜನಿವಾರವನ್ನು ಹಾಕುತ್ತಾರೆ ಮತ್ತು ಮಾಂಸಾಹಾರವನ್ನು ತ್ಯಜಿಸಿದ್ದಾರೆ. ಜನಿವಾರ ಮತ್ತು ಮಾಂಸಾಹಾರ ಕೊಡವರಿಂದ ಇವರು ಬೇರೆ ಎಂಬುದನ್ನು ಸೂಚಿಸುತ್ತದೆ. ಅಮ್ಮಕೊಡವರು ಪ್ರತಿ ವರ್ಷ ಓಣಂ ಹಬ್ಬದ ಸಮಯದಲ್ಲಿ ಜನಿವಾರ ಧಾರಣೆ ಮಾಡಿಸಿಕೊಳ್ಳುತ್ತಾರೆ. ಈ ಕಾರಣವೂ ಇವರು ಕೇರಳದ ಮಲಬಾರಿನಿಂದ ಕೊಡಗಿಗೆ ಬಂದವರು ಎಂಬುದಕ್ಕೆ ಒತ್ತುಕೊಡುತ್ತದೆ.

ಅಮ್ಮಕೊಡವರು ಹಿಂದೂ ದೇವತೆಗಳನ್ನು ಪೂಜಿಸುವುದರೊಂದಿಗೆ ಹಿಂದೂ ಹಬ್ಬಗಳನ್ನು ಆಚರಿಸುತ್ತಾರೆ. ಇವರು ಮದುವೆ ಮತ್ತಿತರ ಶುಭ ಸಮಾರಂಭಗಳಿಗೆ ಪುರೋಹಿತರನ್ನು ಕರೆಸುತ್ತಾರೆ. ಮದುವೆಯಲ್ಲಿ ಹುಡುಗಿಗೆ ಹುಡುಗನೇ ತಾಳಿ(ಪತ್ತಾಕ)ಯನ್ನು ಕಟ್ಟುತ್ತಾನೆ. ಆದರೆ ಕೊಡವರಲ್ಲಿ ಹುಡುಗಿಗೆ ತಾಯಿಯೇ ತಾಳಿ ಕಟ್ಟುವುದು ಮತ್ತು ಪುರೋಹಿತರನ್ನು ಕರೆಸದಿರುವುದು ಕಂಡು ಬರುತ್ತದೆ. ಹೀಗೆ ಇವರು ಪುರೋಹಿತರ ಸಾನ್ನಿಧ್ಯವನ್ನು ಅನುಸರಿಸುತ್ತಿರುವುದರಿಂದ ತಮ್ಮನ್ನು ತಾವು ಬ್ರಾಹ್ಮಣರಂತೆಯೇ[೧೬] ಎಂದು ಹೇಳಿಕೊಳ್ಳುತ್ತಾರೆಂಬ ಅಭಿಪ್ರಾಯವೂ ಇದೆ.

ಈ ಕಾರಣದಿಂದ ಅಮ್ಮಕೊಡವರ ಕುರಿತು ಹಲವು ಕಥೆಗಳೇ ಸೃಷ್ಟಿಯಾಗಿವೆ. ಅವುಗಳಲ್ಲಿ ಒಂದು ಹೀಗಿದೆ. 'ಬ್ರಾಹ್ಮಣ ಕನ್ಯೆಯು ಕೊಡವ ಯುವಕನನ್ನು ವಿವಾಹವಾಗಿ ಅವರಿಂದ ಜನಿಸಲ್ಪಟ್ಟ ವಂಶಸ್ಥರು ತಾಯಿ ಮತ್ತು ತಂದೆಯ ಎರಡೂ ಕಡೆಯ ಆಚಾರಗಳನ್ನು ಅಳವಡಿಸಿ ಕೊಂಡಿರುವುದರಿಂದ ಬ್ರಾಹ್ಮಣ ಸಂಪ್ರದಾಯದಂತೆ ಜನಿವಾರ ಧಾರಣೆ ಮತ್ತು ಮಾಂಸಾಹಾರ ವರ್ಜನೆ ಇದ್ದರೆ, ಕೊಡವರ ಸಂಪ್ರದಾಯವಾಗಿ ಉಡುಗೆ-ತೊಡುಗೆ ಕಾಣಿಸಿಕೊಳ್ಳುತ್ತಿದೆ[೧೭] ಎಂದು ಹೇಳುತ್ತಾರೆ.

ಮತ್ತೊಂದು ಐತಿಹ್ಯದ ಪ್ರಕಾರ "ಲೋಪಮುದ್ರೆಯನ್ನು ಅಗಸ್ತ್ಯ ಮುನಿಗಳು ತ್ಯಜಿಸಿ ಕನ್ನಿಕೆಯೊಂದಿಗೆ ತೆರಳುತ್ತಾರೆ. ಇದನ್ನು ಕಂಡ ಬ್ರಾಹ್ಮಣರು ಅಗಸ್ತ್ಯರನ್ನು ಅಣಕಿಸುತ್ತಾರೆ. ಈ

ಕಾರಣಕ್ಕಾಗಿ ಅಗಸ್ತ್ಯ ಋಷಿ ಉಗ್ರಕೋಪಗೊಂಡು ಬ್ರಾಹ್ಮಣರನ್ನು ಕುರಿತು 'ಈ ಹಾರುವ ಜಾತಿಯಿಂದಗಲಿ ಬಡತನದೆ ಬಡವಾಗಿ ಸೊರಗಲಿ' ಎಂಬ ಶಾಪದ ಮೂಲಕ ಅವರನ್ನು ಜಾತಿ ಭ್ರಷ್ಟರನ್ನಾಗಿಸುತ್ತಾರೆ. ಭಯದಿಂದ ಬ್ರಾಹ್ಮಣರು ಕಾವೇರಿಯ ಮೊರೆಹೊಕ್ಕು ನಮ್ಮನ್ನು ಕಾಪಾಡಬೇಕು ಎಂದು ವಿನಂತಿಸುತ್ತಾರೆ. ಪ್ರತಿಯಾಗಿ ಕಾವೇರಿ 'ಋಷಿ ಶಾಪಕ್ಕೂ, ಜಾತಿ ಭ್ರಷ್ಟಕ್ಕೂ ಯಾವ ವಿಮೋಚನೆಯೂ ಇಲ್ಲವೆಂದು, ದೀರ್ಘ ಕಾಲವಿದ್ದು ಸಾಧಾರಣ ಸುಖ ಸಂಪತ್ತಿನಿಂದ ಬಾಳಿರಿ' ಎಂದು ಹರಸಿ ನದಿರೂಪಿಯಾಗಿ ಹರಿಯುತ್ತಾಳೆ. ಕೊನೆಗೆ ಬ್ರಾಹಣರು ಶಾಪದ ತೀವ್ರತೆಯನ್ನು ನೆನಪಿಸಿಕೊಂಡು ಪರಿತಪಿಸುತ್ತಾ 'ಕಾವೇರಿ ಅಮ್ಮ'ನ ಸ್ಮರಣಾರ್ಥವಾಗಿ ತಮ್ಮ ಹೆಸರನ್ನು ನಂಜುಂಡಯ್ಯ-ನಂಜಮ್ಮ ಎಂದೂ, ನಾರಾಯಣಯ್ಯ-ನಾರಣಮ್ಮ ಎಂದೂ, ಸುಬ್ರಾಯ-ಸುಬ್ಬಮ್ಮ ಎಂದೂ ಬದಲಾಯಿಸಿಕೊಂಡು ತಮ್ಮ ಉಡುಪು, ಭಾಷೆ ಇತ್ಯಾದಿಗಳಲ್ಲಿ 'ಕ್ರೂಢದೇಶ'ದ ಜನರನ್ನೇ ಅನುಸರಿಸಿದರು"[೧೮] ಎನ್ನುವ ಮೂಲಕ ಅಮ್ಮಕೊಡವರ ಮೂಲವನ್ನು ಗುರುತಿಸಲಾಗಿದೆ.

ಅಮ್ಮಕೊಡವರು ನಾವು ಬ್ರಾಹ್ಮಣರಿಗೆ ಸಮಾನರೆಂದು ಹೇಳಿಕೊಳ್ಳುವುದರಿಂದಲೂ ಅವರ ಆಚರಣೆಗಳನ್ನು ಗಮನಿಸಿದರೆ ಇವರು ಬ್ರಹ್ಮಕೊಡವರಾಗಿದ್ದರೆಂದು ತೋರುತ್ತದೆ. ಬ್ರಹ್ಮಕೊಡವ ಎಂಬುದೇ ಕಾಲ ಕಳೆದಂತೆ ಅಪಭ್ರಂಶಗೊಂಡು 'ಅಮ್ಮಕೊಡವ'[೧೯] ಎಂದಾಗಿರಬೇಕು ಎಂದು ಅಭಿಪ್ರಾಯಪಡಲಾಗಿದೆ. ಅತ್ತ ಪೂರ್ಣ ಕೊಡವರೂ ಅಲ್ಲದ, ಇತ್ತ ಬ್ರಾಹಣರೂ ಅಲ್ಲದ ಸಂಪ್ರದಾಯಗಳನ್ನು ಅನುಸರಿಸಿರುವ ಇವರ ಸಂಖ್ಯೆ ಇತ್ತೀಚೆಗೆ ತೀರಾ ಕಡಿಮೆಯೆಂದೇ ಹೇಳಬಹುದು. ೧೯೩೧ರ ಜನಗಣತಿಯಲ್ಲಿ ಅಮ್ಮಕೊಡವರ ಸಂಖ್ಯೆ ಕೇವಲ ೬೬೬ ಎಂದು ದಾಖಲಾಗಿದೆ[೨೦]. ಇತ್ತೀಚೆಗೆ ಸಾವಿರಕ್ಕೂ ಕಡಿಮೆ ಸಂಖ್ಯೆಯ ಅಮ್ಮಕೊಡವರಿದ್ದಾರೆ.

## ೪.೨. ಕೊಡವರ ಹಬ್ಬಗಳು

ಕೊಡಗು ಕರ್ನಾಟಕದ ದಕ್ಷಿಣ ಭಾಗದಲ್ಲಿದ್ದು, ಚಿಕ್ಕಜಿಲ್ಲೆಯಾದರೂ ತಾನು ಹೊಂದಿರುವ ಐತಿಹಾಸಿಕ, ಭೌಗೋಳಿಕ ಹಾಗೂ ಸಾಂಸ್ಕೃತಿಕ ಆಧಾರದ ಮೇಲೆ ಭಾರತದಾದ್ಯಂತ ಗುರುತಿಸಿಕೊಂಡಿದೆ. 'ಕೊಡಗು' ಎಂಬ ಶಬ್ದವನ್ನು ಕೇಳಿದಾಗ ಒಂದು ಭಾವನೆ, ಒಂದು ಸಂಸ್ಕೃತಿ, ಒಂದು ಜನ ಮಾದರಿ ನಮ್ಮ ಮುಂದೆ ನಿಲ್ಲುತ್ತದೆ. ಇಲ್ಲಿನ ಜನರ ಜೀವನ ಮಾದರಿಯೇ ಅದನ್ನು ಹೇಳುತ್ತದೆ. ಕೊಡಗಿನಲ್ಲಿ ವಾಸಿಸುತ್ತಿರುವ ಯಾವುದೇ ಜನಸಮುದಾಯವಾಗಲಿ ಗುಂಪುಕಟ್ಟಿ ಜೀವಿಸಲು ಬಯಸುವುದಿಲ್ಲ ಎಂಬ ಮಾತೊಂದಿದೆ. ಕರಾವಳಿ ಜಿಲ್ಲೆಯ ಭಾಗವಾಗಿದ್ದು ಇಂದು ಪ್ರತ್ಯೇಕ ಅಸ್ತಿತ್ವವನ್ನು ಪಡೆದುಕೊಂಡಿರುವ ಕೊಡಗಿನ ಜನರು ತಮ್ಮದೇ ಆದ ಜಮೀನುಗಳಲ್ಲಿ, ಎಸ್ಟೇಟ್‌ಗಳಲ್ಲಿ ಮನೆಗಳನ್ನು ನಿರ್ಮಿಸಿಕೊಂಡು ವಾಸಿಸುತ್ತಿದ್ದಾರೆ. ಇದರೊಂದಿಗೆ ಕೊಡಗು ಜಿಲ್ಲೆಯಾದ್ಯಂತ ಸಾಮೂಹಿಕವಾಗಿ ವಾಸಿಸುವವರ ಸಂಖ್ಯೆಯೂ ಬಹಳಷ್ಟಿದೆ. ದಕ್ಷಿಣ ಕೊಡಗನ್ನು

ಹೊರತು ಪಡಿಸಿದರೆ ಬೇರೆ ಬೇರೆ ನಗರ, ಪಟ್ಟಣ, ಹಳ್ಳಿಗಳಲ್ಲಿ ಒಂದೇ ಕಡೆಯಲ್ಲಿ ಬಾಳುವೆ ನಡೆಸುತ್ತಿರುವುದನ್ನು ಕಾಣಬಹುದು.

ಇವೆಲ್ಲವುಗಳ ನಡುವೆ ಕೊಡಗು ಹತ್ತು ಹಲವು ಸಂಸ್ಕೃತಿಗಳಿಂದಾಗಿ ತನ್ನದೇ ಆದ ಅಸ್ತಿತ್ವವನ್ನು ಹೊಂದಿದೆ. "ಇಲ್ಲಿ ಬಹುರೂಢಿಪದ್ಧತಿಗಳು, ಬಹುಜನಪದರು, ಬಹುಭಾಷೆಗಳು, ಸಂಪ್ರದಾಯಗಳು, ಹಬ್ಬಹರಿದಿನಗಳು, ಉತ್ಸವಗಳು ಅಸ್ತಿತ್ವದಲ್ಲಿದ್ದು ಒಂದು ಸಂಕೀರ್ಣವಾದ ಸಂಸ್ಕೃತಿಯ ವಿಸ್ತಾರವನ್ನು ಕಾಣಬಹುದು".[೨೧]

ಕೊಡಗಿನಲ್ಲಿ ವಾಸಿಸುತ್ತಿರುವ ತಮ್ಮದೇ ಆದ ವಿಭಿನ್ನ ಜೀವನ ಶೈಲಿಯನ್ನು ಹೊಂದಿರುವ ಕೊಡವರು ಮತ್ತು ಬುಡಕಟ್ಟಿನವರು ಕೊಡಗಿನ ಸಂಸ್ಕೃತಿಯಲ್ಲಿ ಬಹು ಮುಖ್ಯ ಪಾತ್ರವಹಿಸುತ್ತಾರೆ. ಕೊಡವರು, ಅರೆಭಾಷೆ ಗೌಡರು, ಬುಡಕಟ್ಟು ಜನಾಂಗದವರೂ ಸೇರಿದ ಹಾಗೆ ಹಲವಾರು ಜಾತಿಯ ಜನರು ಇಲ್ಲಿ ವಾಸಿಸುತ್ತಿದ್ದು ತಮ್ಮದೇ ಅದ ಸಾಂಸ್ಕೃತಿಕ ಬದುಕನ್ನು ಅಳವಡಿಸಿಕೊಂಡಿದ್ದಾರೆ. ಇಂತಹ ಸಂಸ್ಕೃತಿಯ ಭಾಗವಾದ ಕೊಡವರ ಹಬ್ಬಗಳ ಮೂಲ, ಆಚರಣಾ ವಿಧಾನ, ಅವುಗಳು ಇಂದು ಪಡೆದುಕೊಳ್ಳುತ್ತಿರುವ ಸ್ವರೂಪಗಳನ್ನು ಕುರಿತು ವಿವೇಚಿಸಲಾಗಿದೆ.

ಪ್ರಾಚೀನ ಕಾಲದಲ್ಲಿ ಮನುಷ್ಯ ವ್ಯವಸಾಯವನ್ನೆ ಅವಲಂಬಿಸಿ ಬದುಕುತ್ತಿದ್ದು, ಹತ್ತು ಹಲವು ನಂಬಿಕೆಗಳನ್ನು ಅಳವಡಿಸಿಕೊಂಡು ಕೆಲವು ಆಚರಣೆಗಳನ್ನು ರೂಢಿಸಿಕೊಂಡು ಬಂದಿದ್ದಾನೆ. ಅವನು ಪ್ರಕೃತಿ, ನೀರು, ಭೂಮಿ, ಹೀಗೆ ತನಗೆ ಅನುಕೂಲವುಂಟುಮಾಡಿದ ಎಲ್ಲವನ್ನು ಪೂಜಿಸಿ ಆರಾಧಿಸಿಕೊಂಡು ಬಂದಿರುವುದು ಕಾಣುತ್ತದೆ. ಇಂತಹ ಆಚರಣೆಗಳಲ್ಲಿ ಕೆಲವು ಹಬ್ಬಗಳೂ ಸೇರಿವೆ.

ಹಬ್ಬಗಳಿಗೆ 'ನಂಬಿಕೆ' ಮತ್ತು 'ಆಚರಣೆ' ಎಂಬ ಎರಡು ಮುಖಗಳಿದ್ದು ಪರಸ್ಪರ ಪೂರಕವಾಗಿವೆ. ನಂಬಿಕೆ ಮೂಲ ಶ್ರದ್ಧೆಗೆ ಸಂಬಂಧಿಸಿದುದಾಗಿದ್ದರೆ, ಆಚರಣೆ ಆ ನಂಬಿಕೆಯನ್ನು ಆಧರಿಸಿದ ಶ್ರೇಯಸ್ಸಿಗೆ ಸಂಬಂಧಿಸಿದೆ. "ನಂಬಿಕೆ ಮತ್ತು ಸಂಪ್ರದಾಯಗಳ ಕ್ರಿಯಾರೂಪಗಳೇ ಹಬ್ಬಗಳು. ಅವುಗಳ ಬೇರು ಮೂಲಗಳಲ್ಲಿ ಅವಿತಿದೆ. ನಿಸರ್ಗಾರಾಧನೆಯಲ್ಲಿ ಪಸರಿಸಿದೆ. ಅವು ಕೃಷಿ ಸಂಸ್ಕೃತಿಯಲ್ಲಿ ಸ್ಪಷ್ಟ ರೂಪವನ್ನು ಪಡೆದು ಕಾಲಾಂತರದಲ್ಲಿ ವಿಕಾಸವಾಗುತ್ತಾ ಜಟಿಲವಾದದ್ದುಂಟು"[೨೨] ಎನ್ನುವ ಮಾತಿನಂತೆ ಕೊಡವರ ಹಬ್ಬಗಳೂ ಬರಬರುತ್ತಾ ವಿಭಿನ್ನ ಸ್ತರದ ಆಯಾಮಗಳನ್ನು ಪಡೆದುಕೊಂಡಿವೆ. 'ನಿಸರ್ಗವನ್ನು ನಿಯಂತ್ರಿಸುವ, ದೇವರನ್ನು ಒಲಿಸಿಕೊಳ್ಳುವ ಸತತ ಪ್ರಯತ್ನಗಳ ಫಲವಾಗಿ ಹಬ್ಬಗಳು ಹುಟ್ಟು ಪಡೆದವು'[೨೩] ಎಂಬ ಅಂಶಗಳು ಕೊಡಗಿನ ಹಬ್ಬಗಳಿಗೂ ಅನ್ವಯಿಸುತ್ತವೆ.

ಜನಪದರು ಆಚರಿಸುವ ಹಬ್ಬಗಳಲ್ಲಿ ಸಡಗರ, ವೈವಿಧ್ಯತೆ, ಹಾಗೂ ವಿವೇಕಗಳಿರುತ್ತವೆ. ಹಬ್ಬಗಳೆಂದರೆ ಕೇವಲ ತಿನ್ನುವ, ಕುಡಿಯುವ, ಕುಣಿದಾಡುವ, ಹರಟೆ ಹೊಡೆಯುವ

ಸಮಾರಂಭಗಳಾಗಿರುವುದಿಲ್ಲ. ಹಾಗೇನಾದರೂ ಆಗಿದ್ದರೆ, ನಮ್ಮ ಆರ್ಥಿಕ ಸ್ಥಿತಿಗತಿ, ಸಮಯ, ದೇಹಾರೋಗ್ಯ ಮೊದಲಾದವುಗಳ ಸೌಕರ್ಯಕ್ಕೆ ತಕ್ಕಂತೆ ಹಬ್ಬಗಳನ್ನು ಕಡಿತಗೊಳಿಸಿ ಆಚರಿಸಬಹುದಿತ್ತೇನೋ. ಆದರೆ ಪ್ರಾಕೃತಿಕ ನಿಯಮಗಳಿಗನುಗುಣವಾಗಿ ಕಾಲದ ಆಧಾರದ ಹಿನ್ನೆಲೆಯಲ್ಲಿ ಹಬ್ಬಗಳು ಆಚರಿಸಲ್ಪಡುತ್ತವೆ. ಪ್ರತಿಯೊಂದು ಹಬ್ಬದ ಹಿಂದೆ ಒಂದು ನಂಬಿಕೆ ಇರುವಂತೆ ಒಂದು ಉದ್ದೇಶವೂ ಇರುತ್ತದೆ. ಇಂತಹ ಹಬ್ಬಗಳು, ಪ್ರಾದೇಶಿಕ ಮಹತ್ವದಿಂದ ಕೂಡಿರುತ್ತವೆ. ಈ ಎಲ್ಲಾ ಹಿನ್ನೆಲೆಯಿಂದ ಗಮನಿಸಿದರೆ ಪ್ರಾದೇಶಿಕ ಮತ್ತು ಭೌಗೋಳಿಕ ವಿವಿಧತೆಯನ್ನು ಅಳವಡಿಸಿಕೊಂಡು ತನ್ನದೇ ಅಸ್ತಿತ್ವವನ್ನು ಹೊಂದಿರುವ ಕೊಡಗು ಇಲ್ಲಿನ ಕೊಡವರೂ ಸೇರಿದಂತೆ ಇತರ ಜನರು ಆಚರಿಸುವ ಕೆಲವು ಹಬ್ಬಗಳಿಂದಾಗಿ ಇನ್ನಷ್ಟು ಗಮನವನ್ನು ಸೆಳೆದಿದೆ.

ಒಂದು ಜನಾಂಗದ ಅಳತೆಗೋಲಾಗಿ ಅವರ ಅನೇಕ ನಡಾವಳಿಗಳೂ, ಹಬ್ಬ ಹರಿದಿನಗಳೂ, ಅವರ ಸಂಪ್ರದಾಯ ವೈಶಿಷ್ಟ್ಯಗಳೂ ನಿಲ್ಲುವಂತೆಯೇ ಕರ್ನಾಟಕದ ಭಾಗವಾಗಿ, ಗುಡ್ಡಗಾಡುಗಳಲ್ಲೆ ತಮ್ಮ ಬದುಕಿನ ಅಧಿಕ ಅವಧಿಯನ್ನು ಕಳೆದು, ಅಲ್ಲಿಯೇ ಬೆಳೆದು ಉಳಿದು ಬಂದಿರುವ 'ಕೊಡವ' ಜನಾಂಗದ ಸಂಸ್ಕೃತಿ, ನಾಗರೀಕತೆಗಳು ಅವರು ಆಚರಿಸುವ ಸಾಂಪ್ರದಾಯಿಕ ಹಬ್ಬಗಳಲ್ಲಿ ವ್ಯಕ್ತವಾಗಿರುವುದನ್ನು ಕಾಣಬಹುದು. ಇಂತಹ ಹಿನ್ನೆಲೆಯನ್ನು ಅಳವಡಿಸಿಕೊಂಡು ವಾರ್ಷಿಕಾವರ್ತನದ ಆಚರಣೆಗೊಳಪಟ್ಟಿರುವ 'ಕೈಲ್‌ಮುಹೂರ್ತ', 'ಕಾವೇರಿ ಸಂಕ್ರಮಣ' ಹಾಗೂ 'ಹುತ್ತರಿ' ಕೊಡವರ ಪ್ರಮುಖ ಹಬ್ಬಗಳು. ಇವುಗಳಲ್ಲದೆ ನಾಡಿನಾದ್ಯಂತ ಆಚರಿಸಲ್ಪಡುವ ಯುಗಾದಿ, ದೀಪಾವಳಿ, ಗಣೇಶ ಚತುರ್ಥಿ, ದಸರಾ ಮುಂತಾದ ಹಬ್ಬಗಳನ್ನು ಆಚರಿಸುವ ಮೂಲಕ ತಮ್ಮ ಧಾರ್ಮಿಕ ಶ್ರದ್ಧೆಯನ್ನು ಮೆರೆಯುತ್ತಿರುವುದನ್ನು ಗಮನಿಸಬಹುದು. ಪ್ರಸ್ತುತ ಭಾಗದಲ್ಲಿ ಕೊಡವರ ಈ ಮೇಲಿನ ಮೂರು ಪ್ರಮುಖ ಹಬ್ಬಗಳ ಜೊತೆಗೆ ಅವರು ಆಚರಿಸುವ ಉಳಿದ ಹಬ್ಬಗಳನ್ನು ಕುರಿತು 'ಕೊಡವ' ಸಂಸ್ಕೃತಿಯ ಹಿನ್ನೆಲೆಯಲ್ಲಿ ಚರ್ಚಿಸಲಾಗುವುದು.

### ಕೈಲ್ ಪೊಳ್ದ್

ಕೊಡವರಿಗೆ ವರ್ಷದ ಮೊದಲ ಹಬ್ಬವೇ ಕೈಲ್ ಪೊಳ್ದ್. ಕೃಷಿಯಾಧಾರಿತ ಬದುಕನ್ನು ಅವಲಂಬಿಸಿರುವ ಕೊಡವರು ಕೈಲ್ ಪೊಳ್ದ್‌ನ್ನು ಬಹಳ ಸಂಭ್ರಮದಿಂದ ಆಚರಿಸುತ್ತಾರೆ. ಪ್ರತಿ ವರ್ಷ ಸೆಪ್ಟೆಂಬರ್‌ನಲ್ಲಿ ಈ ಹಬ್ಬವನ್ನು ಆಚರಿಸಲಾಗುತ್ತದೆ. "ಕೈಲ್‌ಪೊಳ್ದ್" ಎಂದರೆ "ಆಯುಧಪೂಜೆ". ಇದನ್ನು "ಕೈದು ಪೊಳ್ದು" ಎಂದೂ ಕರೆಯಲಾಗುತ್ತದೆ. ಕೈದು ಎಂದರೆ ಆಯುಧ, ಪೊಳ್ದು ಎಂದರೆ ಸಮಯ, ಮುಹೂರ್ತ ಎಂದರ್ಥ. "ಕೈಲ್" ಪದವೆ "ಕೈದು"ವಿಳ ಆಗಿರಬೇಕೆಂದು ಪಿ. ಎಸ್. ರಾಮಾನುಜಂ ಅಭಿಪ್ರಾಯಪಟ್ಟರೆ, ನಡಿಕೇರಿಯಂಡ ಚಿಣ್ಣಪ್ಪನವರು "ಕೈಲ್" ಎಂಬುದು ಕೈಲ್ ಬರುವುದನ್ನು ಕುರಿತು ಮಾಡುವ ಹಬ್ಬವಾಗಿದೆ. ಕೈಲ್=ಕಾಯಿಯಾಪ್

ಕೊಂಬ್+ಪೊಳ್ದು. ಕೈಲ್ ಎಂಬುದು 'ಕಯಪ' ಎಂಬ ಕೃದ್ವಾಚಿಯ ನಾಮಪದ[೧೫] ಎಂದು ವ್ಯಾಖ್ಯಾನಿಸುತ್ತಾರೆ.

ಪಾಂಡವರು ಅಜ್ಞಾತವಾಸ ಮುಗಿಸಿ ರಹಸ್ಯವಾಗಿಟ್ಟಿದ್ದ ತಮ್ಮ ಶಸ್ತ್ರಾಸ್ತ್ರಗಳನ್ನು ತೆಗೆದು ಪೂಜಿಸಿ ಗೋಗ್ರಹಣಕ್ಕೆ ತೆರಳುವ ಕತೆಯ ಹಿನ್ನೆಲೆ ಈ ಹಬ್ಬಕ್ಕಿದೆ. ಆದುದರಿಂದ ಇಲ್ಲಿಯೂ ಕೊಡವರು ಬೇಟೆಗೆ ತೆರಳಲು ಸಿದ್ಧತೆ ಮಾಡಿಕೊಳ್ಳುವ ಹಬ್ಬವೆಂದೇ ಪರಿಗಣಿಸಬಹುದು. ಈ ಹಬ್ಬದ ಸಮಯದಲ್ಲಿ ಮನೆಯ ಅಟ್ಟವನ್ನು ಸೇರಿದ್ದ, ಹಿಂದೆ ರಾಜರ ಕಾಲದಲ್ಲಿ ಪಾರಿತೋಷಕಗಳಾಗಿ ದೊರೆತಿದ್ದ ಬಾಳು, ವಡಿಕತ್ತಿ, ರಡತಲೆ ಮೊದಲಾದ ಕೈದುಗಳನ್ನು ಹುಡುಕಿ ತೆಗೆದು ಶುಚಿಗೊಳಿಸುತ್ತಾರೆ.[೧೬] ಎಂಬ ಮಾತುಗಳ ಮೂಲಕ ಕೈಲ್ ಪೊಳ್ದು ಕೃಷಿ, ಬೇಟೆ ಮತ್ತು ಯುದ್ಧ ಸಂಬಂಧಿತ ಆಯುಧಗಳ ಪೂಜೆಯೇ ಎಂಬುದು ಸ್ಪಷ್ಟವಾಗುತ್ತದೆ. ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ "ಆಯುಧ ಪೂಜಾ" ಹಬ್ಬವನ್ನು ಮಾಡುವಂತೆ ಕೊಡವರಲ್ಲಿಯೂ ಈ ಸಂಪ್ರದಾಯ ಬೆಳೆದು ಬಂದಿರಬಹುದು. ಆದರೆ ಕೊಡವರು ಈ ಹಬ್ಬವನ್ನು ನವರಾತ್ರಿಗೂ ಮೊದಲೇ ಆಚರಿಸುತ್ತಾರೆ.

ಕೊಡವರಿಗೆ ವ್ಯವಸಾಯವೇ ಮುಖ್ಯ ವೃತ್ತಿಯಾಗಿದ್ದ ಕಾಲದಲ್ಲಿ ವ್ಯವಸಾಯ ಸಂದರ್ಭಗಳಲ್ಲಿ ತಮ್ಮ ಪೂರ್ಣ ಗಮನವನ್ನು ಕೊಡಬೇಕಾಗಿರುವುದರಿಂದ ಬೇಟೆಯನ್ನು ತ್ಯಜಿಸಿ ಕೃಷಿ, ಬೇಟೆ ಮತ್ತು ಯುದ್ಧ ಸಂಬಂಧಿತ ಆಯುಧಗಳನ್ನು ಕನ್ನಿಕೋಂಬರೆಯಲ್ಲಿ ಇಟ್ಟು ಬಿಡುತ್ತಾರೆ. ಹೀಗೆ ಇಡುವಾಗ ಕೆಲವು ನಿಯಮ ಸಂಪ್ರದಾಯಗಳನ್ನು ಅನುಸರಿಸ ಬೇಕಾಗುತ್ತದೆ. ಇದಕ್ಕೆ 'ಕೈಲ್ ಪೊಳ್ದ್‌ಕೆಟ್' ಎನ್ನುತ್ತಾರೆ. ವ್ಯವಸಾಯದ ಕೆಲಸವೆಲ್ಲಾ ಮುಗಿದ ಬಳಿಕ ಕೈಲ್ ಪೊಳ್ದ್ ನಿಯಮದ ಪ್ರಕಾರವೇ ತೆಗೆಯಲಾಗುತ್ತದೆ. ತೆಗೆದ ಆಯುಧಗಳನ್ನು ಶುಚಿಗೊಳಿಸಿ ಕನ್ನಿಕೋಂಬರೆ ಅಥವಾ ನೆಲ್ಲಕ್ಕಿ ನಡುಬಾಡೆಯಲ್ಲಿಟ್ಟು ಒಂದು ನಿರ್ದಿಷ್ಟವಾದ ಹೂವುಗಳಿಂದ ಅಲಂಕರಿಸಿ ಧೂಪದೀಪಾದಿ ಉಪಚಾರ ಮಾಡುತ್ತಾರೆ.

ಕೈಲ್‌ಪೊಳ್ದು ದಿನ ಹಂದಿ ಮಾಂಸದ ಸಾರು(ಪಂದಿಕರಿ) ಮತ್ತು ಅಕ್ಕಿಯಿಂದ ತಯಾರಿಸಿದ ಕಡುಬುಗಳನ್ನು ವಿಶೇಷ ಅಡುಗೆಯೆಂದು ಪರಿಗಣಿಸಿ ಊಟ ಮಾಡಲಾಗುತ್ತದೆ. ಊಟದ ನಂತರ ಮನಸ್ಸು ತೃಪ್ತಿಯಾಗುವವರೆಗೆ ಅವರವರ ಆರ್ಥಿಕ ಸ್ಥಿತಿಗೆ ತಕ್ಕಂತೆ ಮದ್ಯಪಾನ ಮಾಡುತ್ತಾರೆ. ಹಂದಿ ಮಾಂಸದಡುಗೆಯೇ ಈ ಹಬ್ಬದ ವಿಶೇಷವಾಗಿರುತ್ತದೆ. ಹಂದಿ ಸಾಕಲು ಸಾಧ್ಯವಾಗದವರು ಹಂದಿ ಮಾಂಸವನ್ನು ಬೇರೆಯವರಿಂದ ಅಥವಾ ಮಾರುಕಟ್ಟೆಯಿಂದ ಕೊಂಡಾದರೂ ತಂದು ಅಡುಗೆ ಮಾಡಬೇಕಾಗುತ್ತದೆ. ಹಿಂದೆ ಕೊಡಗಿನಲ್ಲಿ ಕೊಡವರು ಅರಣ್ಯಗಳಿಗೆ ತೆರಳಿ ಅಥವಾ ತಮ್ಮ ಜಮೀನುಗಳಿಗೆ ದಾಳಿಮಾಡುತ್ತಿದ್ದ ಹಂದಿಗಳನ್ನು ಬೇಟೆಯಾಡುತ್ತಿದ್ದರು. 'ತಿಮ್ಮುಡು ಹಬ್ಬದ ಹಿಂದಿನ ದಿನ ಸಂಜೆ ಹಂದಿಯನ್ನು ಹೊಡೆದು ಮಾಂಸವನ್ನು ಸಿದ್ಧಗೊಳಿಸಿದ'[೧೭] ಎಂಬ ವಿಚಾರವನ್ನು ಗಮನಿಸಿದರೆ ಯಾವ ನಿರ್ಬಂಧವಿಲ್ಲದೆ ಬೇಟೆಯಾಡುವುದನ್ನು ಕೊಡವರು ರೂಢಿಸಿಕೊಂಡಿದ್ದರು ಎಂಬುದಕ್ಕೆ ಸಾಕ್ಷಿಯಾಗುತ್ತದೆ.

ಕಾನೂನಿನ ಚೌಕಟ್ಟಿನಲ್ಲಿ ಇಂದು ಬೇಟೆಗೆ ನಿರ್ಬಂಧವಿರುವುದರಿಂದ ಮೊದಲಿನ ಹಾಗೆ ಸಾಮೂಹಿಕವಾಗಿ ಬೇಟೆಗೆ ತೆರಳುವುದು ಸ್ಥಗಿತಗೊಂಡಿದೆ.

ಮಧ್ಯಾಹ್ನದ ಊಟಕ್ಕೂ ಮೊದಲು ಇಟ್ಟಿರುವ ಎಲ್ಲಾ ಆಯುಧಗಳನ್ನು ಧೂಪ ಹಾಕಿ ಗಂಧದ ಬೊಟ್ಟುಗಳನ್ನಿಟ್ಟು ಕೋವಿಯ ಬಾಯಿಗೆ ಹೂವು ಸಿಕ್ಕಿಸಿ ಒಂದು ದೊಡ್ಡ ಬಾಳೆ ಎಲೆಯಲ್ಲಿ ಸಿದ್ಧಗೊಳಿಸಿದ ಎಲ್ಲಾ ಆಹಾರವನ್ನೂ ಆಯುಧಗಳ ಮುಂದಿಡಬೇಕು. ಸಂಜೆಯ ಹೊತ್ತಿಗೆ ಮನೆಯ ಸದಸ್ಯರೆಲ್ಲರೂ ಆಯುಧಗಳ ಮುಂದೆ ಮತ್ತೆ ಬಂದು ನಿಲ್ಲಬೇಕು. ನಂತರ ಕೊಡವ ಮನೆತನದ ಹಿರಿಯರು ಒಂದು ಕೋವಿಯನ್ನು ಕೈಯಲ್ಲಿ ಹಿಡಿದುಕೊಂಡು 'ನರಿನೊ ಪಂದಿನೊ ಬಟ್ಟೆ ಬುಟ್ಟ್ ಪಣಂಗ್, ಶತ್ರುನ ಎಣಂಗತೆ, ಶತ್ತುರು ಎಣಂಗ್ ಚೆಂಗಿ ಬಟ್ಟೆ ಕಟ್ಟಿ ಪರಾಂಗ್, ಮಿತ್ತುರಕ್ ತೋಣಿಯಾಯಿತ್ ನಿಲ್ಲ್, ರಾಜಂಗ್ ಮಿನಿಯತೆ, ದೇವರ ಮರೆಯತೆ"[೨೮] (ಹುಲಿ ಬರುವಾಗ, ಹಂದಿ ಬರುವಾಗ ದಾರಿಬಿಟ್ಟು ನಿಲ್ಲು, ಶತ್ರುವನ್ನು ತಡೆಯಲು ಹೋಗಬೇಡ, ಹಾಗೆ ತಡೆಯುವ ಹಾಗಿದ್ದರೆ, ಆತನು ಚಲಿಸದಂತೆ ಅಡ್ಡಗಟ್ಟಿ ತಡೆ, ಮಿತ್ರನಿಗೆ ಸಹಾಯಕನಾಗಿರು, ರಾಜನನ್ನು ಮೀರದೆ, ದೇವರನ್ನು ಮರೆಯದೆ ಇರು) ಎಂದು ಹೇಳುತ್ತಾ ಮತ್ತೊಬ್ಬ ಹಿರಿಯನಿಗೆ ನೀಡಬೇಕು. ಕೋವಿ ಪಡೆದವನು ಯಜಮಾನನಿಗೆ ನಮಸ್ಕರಿಸುತ್ತಾನೆ. ಉಳಿದವರೂ ನಮಸ್ಕರಿಸಿ ಊರಿನ ಮಂದ್‌ಗೆ ತೆರಳಬೇಕು.

ಹಬ್ಬದ ದಿನ ಸಂಜೆ ಊರಿನ ಎಲ್ಲಾ ಗಂಡಸರು ಸ್ಥಳೀಯ ದೇವಾಲಯದ ಹತ್ತಿರ ಸೇರಿ ಅಲ್ಲಿ ನಡೆಯುವ ವಿವಿಧ ರೀತಿಯ ಆಟೋಟಗಳ ಸ್ಪರ್ಧೆಯಲ್ಲಿ ಭಾಗವಹಿಸುತ್ತಾರೆ. ಈ ಸಮಯದಲ್ಲಿ ಒಂದು ಎತ್ತರದ ಮರದ ಕೊಂಬೆಗೆ ತೆಂಗಿನಕಾಯಿಗಳನ್ನು ಕಟ್ಟಲಾಗುತ್ತದೆ. ಇಲ್ಲಿ ಯಾರು ಬೇಕಾದರೂ ತಮ್ಮ ಗುರಿ ಪರೀಕ್ಷೆಯನ್ನು ಮಾಡಬಹುದು. ಇದಕ್ಕೆ ಈಡು ಹೊಡೆಯುವುದು ಎಂದು ಕರೆಯಲಾಗುತ್ತದೆ. ಆದರೆ ಮೊದಲು ಆ ಗ್ರಾಮತಕ್ಕನೇ ಗುಂಡು ಹಾರಿಸಿ ಈ ಸ್ಪರ್ಧೆಗೆ ಚಾಲನೆ ನೀಡಬೇಕಾಗುತ್ತದೆ. ಈ ಸ್ಥಳಕ್ಕೆ ಹೆಂಗಸರು ಹೋಗುವಂತಿಲ್ಲವೆಂಬ ನಿಯಮವಿದೆ. ಬಹುಷ ಕೋವಿ ಹಿಡಿದು ಗುಂಡು ಹಾರಿಸುವುದು ಗಂಡಸರಿಗೆ ಮೀಸಲಾದ ಗುಣವೆಂದು ಭಾವಿಸಿರುವಂತಿದೆ. ಇದಕ್ಕೆ ಅಪವಾದವೆಂಬಂತೆ ಬಯಲುದಾರಿ ಕಾದಂಬರಿಯ ಪಾತ್ರವಾದ ಚೋಂದಮ್ಮ ತನ್ನ ಅಣ್ಣನ ಜೊತೆ ಪುರುಷರ ವೇಷ ಧರಿಸಿ ಬೇಟೆಗೆ ತೆರಳಿ ಮೊಲವೊಂದನ್ನು ಕೊಂದು ತಾನು ಗಂಡಸರಿಗೇನು ಕಡಿಮೆಯಿಲ್ಲವೆಂದು ತೋರಿಸಿಕೊಟ್ಟದ್ದನ್ನು ಇಲ್ಲಿ ಉಲ್ಲೇಖಿಸಬಹುದು.[೨೯] ಭಾರತೀಸುತರು ಈಡು ಹೊಡೆಯುವಂತಹ ಶೌರ್ಯ ಪ್ರಧಾನ ಸನ್ನಿವೇಶವನ್ನು ತಿಮ್ಮುಡು ಎಂಬ ಸಾಮಾನ್ಯ ವ್ಯಕ್ತಿಯ ಮೂಲಕ ಇಡೀ ಕೊಡವರ ಪ್ರತಿನಿದಿಯಾಗಿ ಈಡು ಹೊಡೆಯುವ ಸ್ಪರ್ಧೆಯಲ್ಲಿ ಗೆಲ್ಲುವಂತೆ ಮಾಡಿ ಕೊಡವರ ಪಾಲಿನ ನಾಯಕನನ್ನಾಗಿಸುವುದನ್ನು ಕಾಣಬಹುದು.[೩೦] ಕೈಲ್ ಮುಹೂರ್ತದ ಮತ್ತೊಂದು ವಿಶೇಷವೆಂದರೆ ಹಬ್ಬದ ನಂತರದಲ್ಲಿ ಒಂದು ದಿನವನ್ನು ಗೊತ್ತುಮಾಡಿಕೊಂಡು ಬೇಟೆಗೆ ಹೋಗುವುದು. ಇದು ಬಹಳ ಹಿಂದಿನಿಂದಲೂ ನಡೆದುಕೊಂಡು ಬಂದ ಸಂಪ್ರದಾಯವಾಗಿದ್ದು, ಮನೆಗೊಬ್ಬ ಆಳಾದರೂ ಬೇಟೆಗೆ ತೆರಳಬೇಕೆಂಬುದು ರೂಢಿಯಲ್ಲಿ ಬಂದ ಕಟ್ಟಳೆಯಾಗಿದೆ.[೩೧]

ಬೇಟೆಯ ದಿನವನ್ನು ಹಬ್ಬದ ಸಂಜೆ ಊರ ಮಂದ್‌ನಲ್ಲಿ ನಿರ್ಧರಿಸಲಾಗುತ್ತದೆ. ಬೇಟೆ ಮತ್ತು ಈಡು ಹೊಡೆಯುವ ಈ ಪ್ರಕ್ರಿಯೆಗಳನ್ನು ನೋಡಿದರೆ ಕೊಡವರಲ್ಲಿ ಬೇಟೆಯ ಬಗೆಗಿನ ಪ್ರೀತಿ ಮತ್ತು ಅವರ ಸಾಹಸ ಮನೋಪ್ರವೃತ್ತಿ ವ್ಯಕ್ತವಾಗುತ್ತದೆ. ಬೇಟೆಗೆ ತೆರಳಿದವರಲ್ಲಿ ನಿಗದಿಪಡಿಸಿದಂತಹವರೇ ಮೊದಲು ಕೋವಿ ಹೊಡೆಯಬೇಕು ಎಂಬಂತಹ ನಿಯಮಗಳಿವೆ. ಬೇಟೆಯಾಡಿದ ಪ್ರಾಣಿಯನ್ನು ಅಲ್ಲಿಗೆ ತೆರಳಿದವರೆಲ್ಲರೂ ಸಮಾನವಾಗಿ ಹಂಚಿಕೊಳ್ಳುತ್ತಾರೆ. ಮತ್ತೊಂದು ವಿಶೇಷವೆಂದರೆ ಈ ಹಬ್ಬ ಬುಧವಾರ ಅಥವಾ ಶನಿವಾರ ಬಂದರೆ ಇವು ದೇವರ ದಿನಗಳೆಂದು ಪರಿಗಣಿಸಿ ಅಂದು ಬೇಟೆಗೆ ಹೋಗುವುದಿಲ್ಲ.[೩೨]

**ಕಾವೇರಿ ಸಂಕ್ರಮಣ**

ಕೊಡವರ ಮತ್ತೊಂದು ಪ್ರಮುಖವಾದ ಹಬ್ಬ 'ಕಾವೇರಿ ಸಂಕ್ರಮಣ' ಅಥವಾ 'ತುಲಾಸಂಕ್ರಮಣ'. ಇದು 'ಕಾವೇರಿ ಜಯಂತಿ' ಎಂಬುದೂ ಕೊಡವರ ಪರಂಪರಾಗತ ನಂಬಿಕೆಯಾಗಿದೆ.[೩೩] ಕೊಡಗಿನ ಜೀವನದಿಯೆನಿಸಿರುವ ಕಾವೇರಿ ನದಿಯಾಗಿ ಹರಿದು ಹೋಗುವಾಗ ನೀಡಿದ ವಚನದಂತೆ ಪ್ರತಿವರ್ಷ ತೀರ್ಥರೂಪದಲ್ಲಿ ಉದ್ಭವಿಸುವ ಸಂಭ್ರಮದ ದಿನವೇ ಕಾವೇರಿ ಸಂಕ್ರಮಣದ ಆಚರಣೆ. ದಕ್ಷಿಣ ಕನ್ನಡದಲ್ಲಿ ಇದನ್ನು 'ಕಾವೋರಿ ಸಂಕ್ರಾಂತಿ'[೩೪] ಎಂಬ ಹೆಸರಿನಲ್ಲಿ ಆಚರಿಸಲಾಗುತ್ತಿದೆ. ಪ್ರತಿವರ್ಷ ತುಲಾ ಸಂಕ್ರಮಣದ ಸಮಯದಲ್ಲಿ ತಲಕಾವೇರಿಯಲ್ಲಿರುವ ಕಾವೇರಿ ನದಿಯ ಉಗಮಸ್ಥಳ(ಕುಂಡಿಕೆ)ದಲ್ಲಿ ಒಂದು ನಿರ್ದಿಷ್ಟ ಸಮಯದಲ್ಲಿ ಕೊಡವರು ಆರಾಧಿಸುವ ಕಾವೇರಿ ಮಾತೆ ಆವಿರ್ಭವಿಸುತ್ತಾಳೆ ಎಂಬ ನಂಬಿಕೆ ಇಂದಿಗೂ ಇದೆ. ಅಲ್ಲದೆ ಕಾವೇರಿ ನದಿಯು ತುಲಾಸಂಕ್ರಮಣದ ದಿನಗಳಲ್ಲಿ ಕೊಡಗಿನ ಎಲ್ಲ ಬಾವಿ, ಕೆರೆ, ಹಳ್ಳ, ಹೊಳೆಗಳಲ್ಲಿ ಅಗೋಚರವಾಗಿ ಉಕ್ಕಿ ಹರಿಯುತ್ತಾಳೆ ಎಂಬುದು ಕೊಡವರ ಮತ್ತೊಂದು ನಂಬಿಕೆ.[೩೫]

ಭಾರತದಾದ್ಯಂತ ಜನವರಿ ೧೪ ಅಥವಾ ೧೫ ರಂದೇ ನಡೆಯುವ ಸಂಕ್ರಾಂತಿ ಹಬ್ಬದ ಹಾಗೆ ಕೊಡವರ ಕಾವೇರಿ ಸಂಕ್ರಮಣವೂ ಅಕ್ಟೋಬರ್ ೧೭ ಅಥವಾ ೧೮ ರಂದು ನಿಗದಿತವಾಗಿ ನಡೆಯುತ್ತದೆ. ಈ ಸಮಯದಲ್ಲಿ ಕಾವೇರಿ ಉಕ್ಕಿ ಹರಿಯುತ್ತಾಳೆಂಬ ನಂಬಿಕೆ ಇಲ್ಲಿನ ಜನರಲ್ಲಿದೆ. ಪ್ರತಿ ವರ್ಷ ಉದ್ಭವವಾಗುವ ಅವಧಿ ಆರು ಗಂಟೆಗಳ ಕಾಲ ಮುಂದೆ ಹೋಗುತ್ತದೆ. ಅಂದರೆ ಈ ಕಾಲಚಕ್ರದ ಕ್ರಮ ಒಂದು ಸುತ್ತು ಮುಗಿಯಲು ನಾಲ್ಕು ವರ್ಷಗಳು ಬೇಕಾಗುತ್ತವೆ. ಈ ಕಾರಣದಿಂದ ತಲಕಾವೇರಿಯಲ್ಲಿರುವ ಕುಂಡಿಕೆಯಿಂದ ಎರಡು ವರ್ಷ ಹಗಲು ಮತ್ತು ಎರಡು ವರ್ಷ ರಾತ್ರಿ ಸಮಯದಲ್ಲಿ ತೀರ್ಥೋದ್ಭವವಾಗುತ್ತದೆ.

ಕೊಡವರು ಹಬ್ಬದ ದಿನ ಹೆಚ್ಚಿನ ಸಂಖ್ಯೆಯಲ್ಲಿ ತಲಕಾವೇರಿಗೆ ಹೋಗುತ್ತಾರೆ. ವಿವಾಹವಾದ ದಂಪತಿಗಳು ಒಂದು ವರ್ಷದೊಳಗೆ ಕಾವೇರಿ ಕ್ಷೇತ್ರಕ್ಕೆ ಬಂದು ತ್ರಿವೇಣಿ ಸಂಗಮ, ತಲಕಾವೇರಿ ಕುಂಡಿಕೆಗಳಲ್ಲಿ ತೀರ್ಥಸ್ನಾನ ಮಾಡುವುದು ಮತ್ತು ಹಿರಿಯರಿಗೆ ಪಿಂಡ ಇಟ್ಟು ತೊಟ್ಟ ದೀಕ್ಷೆಯನ್ನು ಕಳಚುವುದು ಕೊಡವರು ರೂಢಿಸಿಕೊಂಡಿರುವ ಧಾರ್ಮಿಕ ನಿಯಮಗಳು. ಈ

ನಿಯಮಗಳಿಗನುಸಾರವಾಗಿ ಇಂದೂ ಕೂಡ ಕೊಡವರು ನಡೆದುಕೊಳ್ಳುತ್ತಿರುವುದನ್ನು ಕಾಣುತ್ತೇವೆ. ಹುಲಿಯ ಹಾಲಿನ ಮೇವು[೩೬] ಮತ್ತು ಬೆಳ್ಳಿಮೂಡಿತು[೩೭] ಕಾದಂಬರಿಗಳಲ್ಲಿ ಚಿತ್ರಣಗೊಂಡಿರುವ ಕೊಡವರ ಸಾಮಾಜಿಕ ಹಾಗೂ ಧಾರ್ಮಿಕ ವಿಧಿವಿಧಾನಗಳು ಪ್ರಸ್ತುತ ಸಮಯದಲ್ಲಿಯೂ ಆಚರಣೆಯಲ್ಲಿವೆ.

ಕಾವೇರಿ ಸಂಕ್ರಮಣದ ದಿನ ಒಂದು ನಿರ್ದಿಷ್ಟ ಸಮಯದಲ್ಲಿ ತೀರ್ಥೋದ್ಭವವಾಗುತ್ತದೆ. ಕೆಲವೊಮ್ಮೆ ರಾತ್ರಿ ಮುಂಜಾನೆ ಹೀಗೆ ಬೇರೆಬೇರೆ ಸಮಯದಲ್ಲಿ ಉದ್ಭವವಾಗುತ್ತದೆ. ಈ ಸಮಯದಲ್ಲಿ ಭಕ್ತರು ರಾಜ್ಯದ ನಾನಾ ಭಾಗಗಳಿಂದ ಉತ್ಸುಕತೆಯಿಂದ ಬಂದು ಸೇರುತ್ತಾರೆ. ಕುಂಡಿಕೆಯ ಮುಂದಿರುವ ಕೊಳದ ಸುತ್ತಲೂ ನಿಂತ ಜನರು ತೀರ್ಥೋದ್ಭವವಾಗಿರುವುದನ್ನು ನೋಡಿ ಅಥವಾ ತಿಳಿದುಕೊಂಡು ಅತ್ಯಂತ ಭಕ್ತಿ ಭಾವದಿಂದ ಕೊಳದಲ್ಲಿ ಮುಳುಗಿ ಪುನೀತರಾಗುತ್ತಾರೆ. ನೀರಿನಲ್ಲಿ ಮುಳುಗಿದವರು ಕುಂಡಿಕೆಯ ಹತ್ತಿರ ಪುರೋಹಿತರಿಂದ ತೀರ್ಥರೂಪದಲ್ಲಿ ಅಲ್ಲಿಯ ನೀರನ್ನು ಮೈಮೇಲೆ ಸುರಿಸಿಕೊಳ್ಳುತ್ತಾರೆ. ತುಲಾ ಸಂಕ್ರಮಣದಲ್ಲಿ ಭಾಗವಹಿಸಿದ ಭಕ್ತರು ಹಿಂತಿರುಗಿ ಬರುವಾಗ ಭಾಗಮಂಡಲದ ಭಗಂಡೇಶ್ವರ ದೇವರನ್ನು ಪೂಜಿಸುವುದು ಕೊಡವರ ದೃಷ್ಟಿಯಲ್ಲಿ ಬಹಳ ಮುಖ್ಯ. ಈ ಸುಸಂದರ್ಭದಲ್ಲಿ ತಲಕಾವೇರಿಗೆ ಹೋಗಲು ಅನಾನುಕೂಲವಾದವರು ಹರಿಶ್ಚಂದ್ರ ಅಥವಾ ಬಲಮುರಿಗೆ ನಂತರದ ದಿನಗಳಲ್ಲಿ ಹೋಗಿಬರಬಹುದು. ಒಂದು ವೇಳೆ ಕಾವೇರಿ ಸಂಕ್ರಮಣ ದಿನ ತಲಕಾವೇರಿಗೆ ಹೋಗಲು ಸಾಧ್ಯವಾಗದವರು ವೃಶ್ಚಿಕ ಸಂಕ್ರಮಣದವರೆಗೂ ಹೋಗುತ್ತಿರುತ್ತಾರೆ.

**ಆಚರಣಾ ವಿಧಾನ:** ಈ ಹಬ್ಬವನ್ನು ಕೊಡಗಿನಾದ್ಯಂತ ಕೊಡವರೊಂದಿಗೆ ಇನ್ನಿತರ ಜನಸಮುದಾಯದವರೂ ಎರಡು ದಿನಗಳ ಕಾಲ ಆಚರಿಸುತ್ತಾರೆ. ಬಹಳ ಮುಖ್ಯವಾಗಿ ಕೆಂಬಟ್ಟಿಗಳೂ ಕೊಡವರಷ್ಟೇ ಸಂಪ್ರದಾಯಬದ್ಧವಾಗಿ ಆಚರಿಸುವುದನ್ನು ಕಾಣಬಹುದು. ಹಬ್ಬದ ಮೊದಲ ದಿನ ಅಂದರೆ ತೀರ್ಥೋದ್ಭವದ ದಿನ ಎಲ್ಲರೂ ತಮ್ಮ ಮನೆ, ಭೂಮಿ, ತೋಟ ಹೀಗೆ ಪ್ರತಿಯೊಂದಕ್ಕೂ 'ಬೊತ್ತ್'(ನಿಶಾನೆ) ಹಾಕುವುದು ಕಡ್ಡಾಯ. ಬಿದಿರನ್ನು ಒಡೆದು ಸುಮಾರು ನಾಲ್ಕು ಅಡಿಗಳ ಉದ್ದದ ದಬ್ಬೆಗಳನ್ನು ಮಾಡಿ ಆ ಎರಡು ದಬ್ಬೆಗಳ ತುದಿಯನ್ನು ಒಡೆದು ಗದ್ದೆಯ ನಡುವಿನಲ್ಲಿ ಕತ್ತರಿ ಆಕಾರದಲ್ಲಿ ಚುಚ್ಚುತ್ತಾರೆ. ಅದಕ್ಕೆ 'ಕೈಬಳ ಬಳ್ಳಿ' ಎಂಬ ಒಂದು ಜಾತಿಯ ಬಳ್ಳಿಯನ್ನು ಸುರುಳಿಯಂತೆ ಮಾಡಿ ಹಾರದಂತೆ ಸುತ್ತಬೇಕು. ಇದೇ ದಿನ ಸಂಜೆ ಪ್ರತಿ ಮನೆಯಲ್ಲಿ 'ಕಣಿ ಪೂಜಿಸಲು'(ಕಾವೇರಿ ಮೂರ್ತಿ ರಚನೆಗೆ) ಬೇಕಾದ ಸಿದ್ದತೆಯನ್ನು ಮಾಡಿಕೊಳ್ಳುವುದು ರೂಢಿಯಲ್ಲಿದೆ.

ತೀರ್ಥೋದ್ಭವದ ಮರುದಿನ ಬೆಳಿಗ್ಗೆ ಎಲ್ಲರೂ ಎದ್ದು ಶುಚಿಯಾಗಿ ಸಾಧ್ಯವಾದರೆ ಹೊಸಬಟ್ಟೆಯನ್ನುಟ್ಟುಕೊಳ್ಳಬೇಕು. (ಹಿಂದೆ ಕಡ್ಡಾಯವಾಗಿ ಹೊಸ ಬಟ್ಟೆ ಉಡಬೇಕಾಗಿತ್ತು) ಮನೆಯ ಹೆಂಗಸು 'ತಳಿಯಕ್ಕಿ ಬೊಳಕು' ತಯಾರಿಸಿ ಅದರ ಮೇಲೆ ಸೌತೆ ಕಾಯಿ ಅಥವಾ ಇತರೆ ಕಾಯಿಪಲ್ಯೆಗಳನ್ನಿಟ್ಟು ಸೇವಂತಿಗೆ ಹೂವಿನಿಂದ ಅಲಂಕರಿಸಿದ ಕಾವೇರಿ ಮೂರ್ತಿಯನ್ನು

ರಚಿಸಿ ಇಡಬೇಕು. ಆ ಪ್ರತಿಮೆಗೆ ಆಭರಣಗಳನ್ನು ತೊಡಿಸಿ ವೀಳ್ಯದೆಲೆ, ಅಕ್ಕಿ ತುಂಬಿದ ತಟ್ಟೆಯ ಮೇಲಿಟ್ಟು ಅಷ್ಟನ್ನೂ ನೆಲ್ಲಕ್ಕಿ ನಡುಬಾಡೆಯಲ್ಲಿಡುತ್ತಾರೆ. ಅನಂತರ ಕುಟುಂಬದ ಎಲ್ಲರೂ 'ತಳಿಯಕ್ಕಿ ಬೊಳಕು'ನಿಂದ ದೀಪ ಬೆಳಗುತ್ತಾರೆ. ಮೊದಲು ಮುತ್ತೈದೆಯರು ಬೆಳಗಬೇಕು. ಈ ರೀತಿಯಲ್ಲಿ ಶೃಂಗರಿಸಿದ ಕಾವೇರಿ ಮಾತೆಯ ಮೂರ್ತಿಗೆ ಅಕ್ಕಿ ಹಾಕಿ ದೀಪ ಬೆಳಗಿಸಿ ಪೂಜಿಸುತ್ತಾರೆ. ಸಮೀಪದ ಬಂಧುಗಳು ಮತ್ತು ಮದುವೆಯಾಗಿ ಹೋದ ಹೆಣ್ಣು ಮಕ್ಕಳು ಈ ಹಬ್ಬಕ್ಕೆ ಬರಲೇ ಬೇಕಿತ್ತು. ಹೀಗೆ ಮೂರ್ತಿ ಪೂಜೆಯೆಲ್ಲಾ ಮುಗಿದ ನಂತರ ಸಮೀಪದ ನದಿಯಲ್ಲಿ ವಿಸರ್ಜಿಸುತ್ತಾರೆ ಅಥವಾ ಹಾಲು ಬರುವಂತಹ ಮರದ ಬುಡದಲ್ಲಿ ಇಡುವುದರ ಮೂಲಕ ಈ ಹಬ್ಬ ಪೂರ್ಣಗೊಳ್ಳುತ್ತದೆ.

ಕಾವೇರಿ ತೀರ್ಥೋದ್ಭವದ ಬಗ್ಗೆ ಸಾಕಷ್ಟು ಸಂದೇಹ, ಗೊಂದಲಗಳುಂಟು. ನಿಜವಾಗಿಯೂ ಆ ಸ್ಥಳದಲ್ಲಿ ನಿರ್ಧಿಷ್ಟ ಸಮಯದಲ್ಲಿ ಕುಂಡಿಕೆಯಿಂದ ನೀರು ಉಕ್ಕಿ ಹರಿಯುತ್ತದೆಯೇ ಅಥವಾ ಜನಮರುಳೋ, ಜಾತ್ರೆ ಮರುಳೋ ಎಂಬಂತಾಗಿದೆಯೋ ಎಂಬುದು ಹಲವರ ಜಿಜ್ಞಾಸೆಗೆ ಕಾರಣವಾಗಿದೆ. ಕಾವೇರಿ ಸಂಕ್ರಮಣದ ದಿನ ಕುಂಡಿಕೆಯ ಹತ್ತಿರ ಕುತೂಹಲ ಮತ್ತು ಭಕ್ತಿಯಿಂದ ನೆರೆದಿದ್ದ ಜನಜಂಗುಳಿಯನ್ನು ಕುರಿತು "ತೀರ್ಥೋದ್ಭವವಾಯಿತು ಎಂದು ಘೋಷಿಸಿದರು. ಕೊಳದಲ್ಲಿ ನಿಂತ ಸಾವಿರ ಸಂಖ್ಯೆಯ ಯಾತ್ರಿಕರು ನೀರಲ್ಲಿ ಮುಳುಗು ಹಾಕತೊಡಗಿದರು. ಕುಂಡಿಕೆಯ ದಡದಲ್ಲಿ ನಿಂತ ಬ್ರಾಹ್ಮಣರು 'ದಕ್ಷಿಣೆ'ಗಳನ್ನು ಕೇಳಿಕೊಂಡು ಭಕ್ತರ ಮೈಮೇಲೆ ತೀರ್ಥಜಲವನ್ನು ಎರಚತೊಡಗಿದರು[೩೮] ಮತ್ತು 'ತೀರ್ಥ ಬಂತು, ತೀರ್ಥ ಬಂತು ಎಂದು ಪುರೋಹಿತರು ಕೂಗಿದರು'[೩೮ಎ] ಎಂಬ ವಿಚಾರಗಳನ್ನು ಗಮನಿಸಿದರೆ ಇಲ್ಲಿ ಪುರೋಹಿತರೇ ಪ್ರಮುಖ ಪಾತ್ರ ನಿರ್ವಹಿಸುತ್ತಾರೆ ಎಂಬುದನ್ನು ಪರೋಕ್ಷವಾಗಿ ಹೇಳುತ್ತಿರುವಂತೆ ಸ್ಪಷ್ಟವಾಗುತ್ತದೆ. ಬಹುಸಂಖ್ಯೆಯಲ್ಲಿ ನೆರೆದಿರುವ ಜನಸಮೂಹಕ್ಕೆ ಚಿಕ್ಕ ಕುಂಡಿಕೆಯಲ್ಲಿ ಏನಾಗುತ್ತಿದೆ ಎಂಬುದು ತಿಳಿಯುವ ಮೊದಲೇ ಈ ಎಲ್ಲಾ ಘಟನೆಗಳು ನಡೆದು ಹೋಗಿರುತ್ತವೆ. ಈ ರೀತಿಯ ಗೊಂದಲಗಳಿಗೆ 'ಧಾರ್ಮಿಕವಾಗಿ ಈ ಪ್ರಕ್ರಿಯೆಗೆ ಪ್ರಾಮುಖ್ಯವಿದೆ ಮತ್ತು ಭೌಗೋಳಿಕ ವಿಜ್ಞಾನಿಗಳು ಇದರ ವೈಜ್ಞಾನಿಕ ಕಾರಣಗಳನ್ನು ಕಂಡುಹಿಡಿದಿದ್ದಾರೆ. ಇದು ನಿಜವಾಗಿಯೂ ಸಂಭವಿಸುತ್ತದೆ. ಜೋತಿರ್ವಿಜ್ಞಾನದ ಮೂಲಕ ಇದನ್ನು ಕಂಡು ಹಿಡಿಯುತ್ತಾರೆ'[೩೯] ಎಂದು ಸ್ಪಷ್ಟಪಡಿಸುವ ಮೂಲಕ ಧಾರ್ಮಿಕ ಭಾವನೆಗಳಿಗೆ ಕುಂದುಂಟಾಗದಂತೆ ನೋಡಿಕೊಂಡಿದ್ದಾರೆ.

ಕೇರಳದ ಶಬರಿಮಲೆಯೂ ಸೇರಿದ ಹಾಗೆ ಭಾರತದಾದ್ಯಂತ ಇಂತಹ ನಂಬಿಕೆಗಳಿವೆ. ಇಲ್ಲಿ ಜನರ ನಂಬಿಕೆಯೇ ಮೂಲವಾಗಿದ್ದು ಅದಕ್ಕೆ ಯಾವ ವೈಜ್ಞಾನಿಕ ಕಾರಣವೂ ಅಗತ್ಯವಿಲ್ಲ. ಕೆಲವು ಆಚರಣೆಗಳ ಹಿಂದೆ ಒಂದು ವೈಜ್ಞಾನಿಕ ಕಾರಣವಿದ್ದೇ ಇರುತ್ತದೆ. ಆದರೆ ಎಲ್ಲಾ ಆಚರಣೆಗಳಿಗೂ ವೈಜ್ಞಾನಿಕ ಕಾರಣಗಳನ್ನು ಕಂಡುಕೊಳ್ಳಲು ಪ್ರಯತ್ನಿಸಿದರೆ ಆಚರಣೆಯ ಹಿನ್ನೆಲೆಯೇ ನೀರಸವೆನಿಸಬಹುದು. ಏನೇ ಇರಲಿ ಇಂದಿನ ಆಧುನಿಕ ಯುಗದಲ್ಲೂ ಈ ರೀತಿಯ ಧಾರ್ಮಿಕ ಆಚರಣೆಗಳು ಶ್ರದ್ಧಾ ಭಕ್ತಿಯಿಂದ ನಡೆಯುತ್ತಿರುವುದು ಮನುಷ್ಯನ ನಂಬಿಕೆಯ ತಳಹದಿಯ ಮೇಲೆಯೇ ಎನ್ನಬಹುದು.

**ಹುತ್ತರಿ:**

ಹುತ್ತರಿ ಕೊಡವರ ಹಬ್ಬಗಳಲ್ಲೆಲ್ಲಾ ತುಂಬಾ ಜನಪ್ರಿಯವಾದ ಮತ್ತು ಆಕರ್ಷಕವಾದ ಹಬ್ಬವಾಗಿದ್ದು, ಕೃಷಿ ಸಂಬಂಧಿತವಾಗಿ ಆಚರಿಸಲ್ಪಡುತ್ತಿದೆ. ಹುತ್ತರಿಯನ್ನು ಕೊಡವರಲ್ಲದೆ ಇಲ್ಲಿನ ಬೇರೆಬೇರೆ ಜನರೂ ಬಹಳ ಸಂಭ್ರಮ, ಸಡಗರಗಳಿಂದ ಆಚರಿಸುವುದು ವಿಶೇಷವಾದದ್ದು. ಈ ಹಬ್ಬವನ್ನು ನವೆಂಬರ್ ಅಥವಾ ಡಿಸೆಂಬರ್ ತಿಂಗಳ ಹುಣ್ಣಿಮೆ ದಿನಗಳಲ್ಲಿ ಆಚರಿಸುತ್ತಾರೆ. ಹುತ್ತರಿ ಎಂದರೆ 'ಹೊಸ ಅಕ್ಕಿ, ಕೊಡಗಿನ ಸುಗ್ಗಿಹಬ್ಬ'[೪೦] ಎಂಬ ಅರ್ಥವನ್ನು ನೀಡಲಾಗಿದೆ. 'ಹುತ್ತರಿ' ಎಂಬ ಪದ 'ಪುತ್ತರಿ' ಎಂಬ ಪದದಿಂದ ಬಂದಿದೆ. ಪುತ್ತರಿ ಎಂದರೆ ಹೊಸ ಅಕ್ಕಿ ಎಂದರ್ಥ. 'ಅರಿ' ಎಂದರೆ ಮಲೆಯಾಳದಲ್ಲಿ ಅಕ್ಕಿ ಎಂದರ್ಥ. ಪುದಿ–ಅರಿ ಎಂದರೆ ಹೊಸ ಅಕ್ಕಿ[೪೧] ಎಂದರ್ಥ. ಗದ್ದೆಯಲ್ಲಿ ಬೆಳೆದು ನಿಂತ ಭತ್ತದ ಫಸಲನ್ನು ಕುಯಿಲು ಮಾಡಿ ವಿದ್ಯುಕ್ತವಾಗಿ ಮನೆಗೆ ತಂದುಕೊಳ್ಳುವ ಸಂಭ್ರಮದ ಸಂಕೇತವಾಗಿ ಆಚರಿಸುವಂತದ್ದೇ 'ಹುತ್ತರಿಹಬ್ಬ'. ಇದು ಈ ಹಿಂದೆ ದೇವಪೊಳ್ದು, ಅರಮನೆಪೊಳ್ದು ಮತ್ತು ನಾಡಪೊಳ್ದು ಎಂಬ ಹೆಸರಿನಲ್ಲಿ ಮೂರು ದಿನ ನಡೆಯುತ್ತಿತ್ತು. ಇತ್ತೀಚೆಗೆ ನಾಡಪೊಳ್ದು ಮಾತ್ರ ಆಚರಣೆಯಲ್ಲಿದೆ. ದಕ್ಷಿಣ ಕನ್ನಡದ ತುಳು ಸಂಸ್ಕೃತಿಯಲ್ಲಿ ಹುತ್ತರಿಗೆ ಸಮನಾದ 'ಕುರುಲ್ ಪರ್ಬ'[೪೨] ಅಚರಿಸಲಾಗುತ್ತದೆ. ಇವರಲ್ಲಿಯೂ ಕದಿರು ತರುವಂತಹ ಪ್ರಕ್ರಿಯೆ ಮುಖ್ಯವಾಗಿರುವುದನ್ನು ಗಮನಿಸಬಹುದು. ದಕ್ಷಿಣ ಭಾರತದ ಅನೇಕ ಕಡೆಗಳಲ್ಲಿ ಹುತ್ತರಿಯನ್ನೇ ಹೋಲುವ ಸುಗ್ಗಿ ಹಬ್ಬಗಳು ನಡೆಯುತ್ತಿವೆ. ಮಲಬಾರಿನ 'ಓಣಂ' ರೀತಿಯ ಪದ್ಧತಿಯನ್ನು ಇಲ್ಲಿ ಹುತ್ತರಿಯ ರೂಪದಲ್ಲಿ ಆಚರಿಸಲಾಗುತ್ತಿದೆ. ಏಕೆಂದರೆ 'ಇಗ್ಗುತ್ತಪ್ಪ' ದೇವರು ಈ ಹಬ್ಬದಲ್ಲಿ ಮುಖ್ಯವಾಗಿ ಆರಾಧಿಸಲ್ಪಡುವುದರಿಂದ ಈತನಿಂದಲೇ ಮಲಬಾರಿನಿಂದ ಈ ಪದ್ಧತಿಯನ್ನು ಅಳವಡಿಸಿಕೊಂಡಿರಬಹುದು ಎಂದು ಹೇಳಲಾಗುತ್ತಿದೆ.[೪೩] ಕೆಲವೊಂದು ಅಭಿಪ್ರಾಯಗಳ ಪ್ರಕಾರ ಹುತ್ತರಿ, ಓಣಂ ಹಬ್ಬದ ಒಂದು ತಿಂಗಳ ನಂತರ ನಡೆಯಲ್ಪಡುವುದರಿಂದ ಈ ಎರಡೂ ಹಬ್ಬಗಳು ಬೇರೆ ಬೇರೆಯಾಗಿವೆ ಎನ್ನಲಾಗುತ್ತಿದೆ.

**ಹಿನ್ನೆಲೆ:** ಎಲ್ಲಾ ಹಬ್ಬಗಳಿಗೂ ಒಂದು ಧಾರ್ಮಿಕ ಹಿನ್ನೆಲೆಯಿರುವಂತೆ ಕೊಡವರ ಹುತ್ತರಿ ಆಚರಣೆಯ ಹಿಂದೆಯೂ ಒಂದು ಕಾರಣವನ್ನು ತಿಳಿಯಬಹುದು. ಸಂಶೋಧಕರಾದ ಎಂ. ಜಿ. ನಾಗರಾಜ್ ಅವರು ಹುತ್ತರಿಯ ಹಿನ್ನೆಲೆಯನ್ನು ಹೀಗೆ ವಿವರಿಸುತ್ತಾರೆ. "ಕೊಡವರಿಗೆ ವ್ಯವಸಾಯದ ಅಧಿದೇವತೆ ಇಗ್ಗುತಪ್ಪ. ಇಗ್ಗುತಪ್ಪ ಕೊಡಗಿನ ಪ್ರತಿನಿಧಿಯಾಗಿ ಕೇರಳದಲ್ಲಿದ್ದ ತನ್ನ ಅಣ್ಣ ಬೇಂದ್ರುಕೋಲಪ್ಪನನ್ನು ಭೇಟಿಮಾಡಲು ಹೋದ. ಮನೆಗೆ ಹೊಸ ಭತ್ತ ತರುವ ಮುಹೂರ್ತ ತಿಳಿಸಲು ಕೇಳಿದ. ಬೇಂದ್ರುಕೋಲಪ್ಪ ಕೇರಳದ 'ಓಣಂ' ರೂಢಿಯಲ್ಲಿ ಅನುಸರಿಸಲು ಹೇಳಿದ. ನಂತರ ತಮ್ಮನಿಗೆ ಬೆಳೆ ಕೊಯ್ಯುವ ಕುಡುಗೋಲನ್ನು ಆಶೀರ್ವದಿಸಿ ನೀಡಿದ. ಇಗ್ಗುತಪ್ಪ ಕೊಡಗಿನ ಅಮ್ಮಂಗೇರಿಯ ತನ್ನ ದೇಗುಲದಲ್ಲಿಟ್ಟು ಕೊಡವರಿಗೆ ವಿಷಯ ತಿಳಿಸಿದ. ಹುತ್ತರಿಯ ಸಡಗರಗಳು ಶುರುವಾದವು."[೪೪] ಇದನ್ನು ಅವಲೋಕಿಸಿದರೆ ಕೊಡವರ ಹುತ್ತರಿಯ ಆಚರಣೆಯೂ ಈ ಹಿನ್ನೆಲೆಯಲ್ಲಿಯೇ ಬಂದು ಮುಂದುವರೆಯುತ್ತಿರುವುದನ್ನು ಗಮನಿಸಬಹದು.

**ಆಚರಣೆಯ ವಿಧಾನ:** ಹುತ್ತರಿನಮ್ಮೆ ಬಂತು ಗದ್ದೆಗಳಲ್ಲಿರುವ ಭತ್ತದ ತೆನೆಗಳಿಗೆ ಹಾಲು ತುಂಬಿತು. ನಾಯಕನ ಉತ್ತ ನಮ್ಮೆಯನ್ನು ಅದ್ಧೂರಿಯಿಂದಲೇ ಮಾಡಲು ನಿಶ್ಚಯಿಸಿದ[೪೫] ಎಂಬ ಮಾತನ್ನು ಗಮನಿಸಿದರೆ ಕೊಡವರು ತಮ್ಮ ಎಲ್ಲಾ ಕೆಲಸಗಳನ್ನು ಹೊರತುಪಡಿಸಿ ಆಚರಣೆಗೆ ಉತ್ಸುಕತೆಯಿಂದ ತಯಾರಾಗುವುದು ಹುತ್ತರಿಯ ಪ್ರಾಮುಖ್ಯತೆಯನ್ನು ತೋರ್ಪಡಿಸುತ್ತದೆ. ಈ ಹಬ್ಬದ ದಿನ ಪ್ರತಿಯೊಬ್ಬ ಕೊಡವನೂ ತಾನು ಎಲ್ಲಿದ್ದರೂ ತನ್ನ 'ಐನ್‌ಮನೆ'ಗೆ(ಮೂಲ ಪುರುಷನ ಮನೆ) ಬರಲೇ ಬೇಕು ಎಂಬ ಸಂಪ್ರದಾಯವಿದೆ. ಇದರಲ್ಲಿ ಜನರನ್ನು ಒಗ್ಗೂಡಿಸುವ ದೃಷ್ಟಿಯಿಂದಲೂ ಹಬ್ಬಗಳು ಬಹುಮುಖ್ಯವಾಗಿರುವುದನ್ನು ಕಾಣುತ್ತೇವೆ. ಹಬ್ಬದ ದಿನ ಕೊಡವರು ತಮ್ಮ ಸಾಂಪ್ರದಾಯಿಕ ಉಡುಗೆಗಳನ್ನು ಧರಿಸುತ್ತಾರೆ. ಜೊತೆಗೆ ತಮ್ಮ ಮನೆಗಳನ್ನು ಅಲಂಕರಿಸುವುದಲ್ಲದೆ ಅವರಲ್ಲಿರುವ ದನಕರುಗಳನ್ನು ತೊಳೆದು, ಬಣ್ಣ ಬಳಿದು ಸಿಂಗರಿಸುತ್ತಾರೆ. ದೂರದ ಊರಲ್ಲಿರುವ ತಮ್ಮ ದನಕರುಗಳನ್ನೂ ಹಬ್ಬದ ದಿನ ಬರಮಾಡಿಕೊಂಡು ಪೂಜಿಸುವುದು ಒಂದು ಪದ್ಧತಿಯಾಗಿತ್ತು. ಇತ್ತೀಚಿಗೆ ಈ ಪದ್ಧತಿ ಭಾಗಶಃ ಕಡಿಮೆಯಾಗಿರುವುದು ಕಂಡುಬರುತ್ತಿದೆ. ಈ ಸುದಿನದಲ್ಲಿ ಕೊಡಗಿನಲ್ಲಿ ಬೇರೆಬೇರೆ ವೃತ್ತಿಯನ್ನು ಮಾಡುವವರು ಅವರವರ ವೃತ್ತಿಗನುಗುಣವಾಗಿ ಹಬ್ಬಕ್ಕೆ ಬೇಕಾದ ಕತ್ತಿ, ಚಾಪೆ, ಕುಡಿಕೆ, ಕುಕ್ಕೆ ಮೊದಲಾದ ಸಲಕರಣೆಗಳನ್ನು ಒದಗಿಸಿಕೊಡುವುದು ವಾಡಿಕೆ. ಇವರಿಗೆ ಪ್ರತಿಯಾಗಿ ಕೊಡವರು ಬೆಲ್ಲ, ಅಕ್ಕಿ, ಬಾಳೆ, ತೆಂಗಿನ ಕಾಯಿ, ಹುತ್ತರಿ ಗೆಣಸು ಇತ್ಯಾದಿಗಳನ್ನು ನೀಡಿ ಸತ್ಕರಿಸುತ್ತಾರೆ.

ಹಬ್ಬದ ದಿನ ಮನೆಯ ಎಲ್ಲರ ಸಮ್ಮುಖದಲ್ಲಿ ನೆಲ್ಲಕ್ಕಿ ನಡುಬಾಡೆ(ಪೂಜಾಗೃಹ)ಯಲ್ಲಿ ಮನೆಯ ಮುಖ್ಯಸ್ಥ ಪೂಜಾ ಕೈಂಕರ್ಯಗಳನ್ನು ನೆರವೇರಿಸುತ್ತಾನೆ. ನಂತರ ಕದಿರು ತೆಗೆಯುವ ಕತ್ತಿಯನ್ನು ಅದಕ್ಕಾಗಿಯೇ ನೇಮಿಸಲ್ಪಟ್ಟ ವ್ಯಕ್ತಿಯೊಬ್ಬನಿಗೆ ನೀಡಬೇಕು. ಹೀಗೆ ಕೊಡುವಾಗ "ಕಾಲೋರಾಂಡಕ್ಕೊಮ್ಮೆ ಪುತ್ತರಿಪೊಳ್ದ್ ಕೊವ್ವಕ್ ಪ್ಯೂಪಾಂಗಾಯಿತ್ ಪಳದ್ ಕುತ್ತಿ ಎಡಪಲ್ಲಿಕ್ ತಟ್ ಮುಟ್ ಇಲ್ಲತನಕೆ ತಪ್ಪ ಭಾರ ಇಗ್ಗುತಪ್ಪ ನಡತಿಪ್ಪಂಗೊ, ಈ ಗುರು ಕಾರಣವಂಗೂ ಕೂಡಿತ್ತುಂಡ್"[೪೬] (ವರ್ಷಕ್ಕೆ ಒಂದೇ ಸಲ ಹುತ್ತರಿ ಹಬ್ಬ ಬರುತ್ತದೆ. ಕುಯ್ಲಿಗೆ ಹೋಗುವಾಗ, ಹಬ್ಬದ ಕುತ್ತಿ ತೆಗೆಯುವಾಗ ತಪ್ಪು ನೆಪ್ಪು ಇಲ್ಲದ ಹಾಗೆ ನಡೆಸು ಬಾ. ಇಗ್ಗುತಪ್ಪ, ಗುರು ಕಾರೋಣ ಇಬ್ಬರೂ ಕೂಡಿದ್ದಾರೆ) ಎಂದು ಬೇಡುವುದು ಸಂಪ್ರದಾಯ. ತದನಂತರ ಮನೆಯವರೆಲ್ಲಾ ಹಿರಿಯರ ಆಶೀರ್ವಾದ ಪಡೆದು ಕದಿರು ತರಲು ವಾದ್ಯಗಳ ಸಮೇತ 'ಪೊಲಿ ಪೊಲಿಯೇ ದೇವಾ' (ಅನ್ನಲಕ್ಷ್ಮಿಯೇ ಅಕ್ಷಯವಾಗು) ಎಂದು ಎಲ್ಲರೂ ಹೇಳುತ್ತಾ ಗದ್ದೆಗಳ ಕಡೆಗೆ ಹೊರಡುತ್ತಾರೆ. ಅಲ್ಲಿಗೆ ತೆಗೆದುಕೊಂಡು ಹೋದ ಹಾಲು, ಜೇನು ಮೊದಲಾದವುಗಳನ್ನು ಕದಿರಿನ ಬುಡಕ್ಕೆ ಸುರಿಯುತ್ತಿರುವಾಗ, ಅವರಲ್ಲೊಬ್ಬ ಆಕಾಶದತ್ತ ಕೋವಿ ಹಿಡಿದು ಕುಶಾಲುತೋಪು ಹಾರಿಸುತ್ತಾನೆ. ನಂತರ ದೇವರನ್ನು ನೆನೆದು ಕದಿರು ಕೊಯ್ಯಲು ಪ್ರಾರಂಭಿಸಲಾಗುತ್ತದೆ. ಸಂಪ್ರದಾಯದ ಪ್ರಕಾರ ಪ್ರಾರಂಭದಲ್ಲಿ ಕದಿರು ಕತ್ತರಿಸುವಾಗ ೩, ೫, ೭, ೯ ರಂತೆ ಬೆಸಸಂಖ್ಯೆಯಲ್ಲಿಯೆ ಕತ್ತರಿಸಬೇಕು ಎಂಬ ನಿಯಮವಿದೆ.[೪೭] ನಂತರ ಹಿಡಿಹಿಡಿಯಾಗಿ ಕತ್ತರಿಸಬಹುದು. ಕತ್ತರಿಸಿದ ಕದಿರನ್ನು ಕುತ್ತಿಯೊಳಗಿಟ್ಟುಕೊಂಡು ಮತ್ತೆ "ಪೊಲಿ ಪೊಲಿಯೇ

ದೇವಾ" ಎನ್ನುತ್ತಾ ಮನೆಯ ಕಡೆಗೆ ಮರಳುತ್ತಾರೆ. ಬರುವಾಗ ಕೈಮಠ, ಸಮಾಧಿ ಮುಂತಾದ ಸ್ಥಳಗಳಲ್ಲಿ ಕದಿರನ್ನಿಟ್ಟು ಮನೆಗೆ ಬರುತ್ತಾರೆ. ಬಂದವರಿಗೆ ಮನೆಯ ಮುತ್ತೈದೆಯೊಬ್ಬಳು ಕಾಲಿಗೆ ನೀರು ಕೊಟ್ಟು ಸ್ವಾಗತಿಸಿ, ಕುತ್ತಿ ತೆಗೆದವನ ಕಾಲು ತೊಳೆದ ಮೇಲೆ ಮನೆಯನ್ನು ಪ್ರವೇಶಿಸಿ ಒಂದು ನಿರ್ದಿಷ್ಟ ಜಾಗದಲ್ಲಿ ಅಂದರೆ ಮನೆಯ ತೊಲೆ, ನಿಲುವು, ಮೊದಲಾದ ಕಡೆಗಳಲ್ಲಿ ಕದಿರನ್ನು ಕಟ್ಟುತ್ತಾರೆ. ಕೆಲವರು ತಮ್ಮ ವಾಹನಗಳಿಗೂ ಕಟ್ಟಿಕೊಂಡು ಹುತ್ತರಿಯ ಮಹತ್ವವನ್ನು ಸಾರುತ್ತಾರೆ. ಇದೆಲ್ಲದರ ನಂತರ ಮನೆಯವರೆಲ್ಲ ಒಟ್ಟಿಗೆ ಕುಳಿತು ಹಬ್ಬದ ಅಡುಗೆ ಸವಿಯುತ್ತಾರೆ.

**ವಿಶೇಷ ಅಡುಗೆ:** ಹುತ್ತರಿ ಹಬ್ಬದಂದು ಹುರಿದ ಕುಸಲಕ್ಕಿ ಪುಡಿ, ಬೆಲ್ಲ, ಬಾಳೆ, ಕಲಸಿದ ತಂಬಿಟ್ಟು, ಜೇನು, ತುಪ್ಪ, ಸಕ್ಕರೆ ಹಾಕಿ ಬೇಯಿಸಿದ ಹುತ್ತರಿ ಗೆಣಸು, ಕದಿರು ಬಿಡಿಸಿ ತೆಗೆದ ಹೊಸ ಅಕ್ಕಿಯ ಪಾಯಸ ಇತ್ಯಾದಿಗಳನ್ನು ಹಬ್ಬದಡುಗೆಯಾಗಿ ಸೇವಿಸುತ್ತಾರೆ. ಜೊತೆಗೆ ಹಾಗಲ ಮುಳ್ಳು, ತೆಂಗಿನ ಚೂರು, ಜೇನು, ಬಾಳೆಹಣ್ಣು, ಅಕ್ಕಿ, ಎಳ್ಳು, ಕಲ್ಲುಹರಳುಗಳನ್ನು ಸೇರಿಸಿ ಉಂಡೆ ಮಾಡಿ ಹಂಚುತ್ತಾರೆ. ಹೀಗೆ ನೀಡಿದ ಉಂಡೆಗಳನ್ನು ತಿನ್ನುವಾಗ ಹಾಗಲ ಮುಳ್ಳು ಸಿಕ್ಕಿದವರಿಗೆ ಈ ವರ್ಷದ ಕಹಿ ಅಲ್ಲಿಗೇ ಮುಗಿಯಲಿ, ಕಲ್ಲು ಸಿಕ್ಕಿದವರಿಗೆ ದೀರ್ಘಾಯುಷ್ಯ ಸಿಗಲಿ ಎಂಬ ನಂಬಿಕೆಗಳಿರುವುದು ಕಂಡುಬರುತ್ತದೆ.

ಈ ಹುತ್ತರಿಯನ್ನು ಅರೇಬಿಯಾದ ಕುರ್ದಿಗಳು ಆಚರಿಸುತ್ತಿದ್ದರು ಮತ್ತು ಅದೇ ಹಬ್ಬ ಈಗ ಕೊಡವರಲ್ಲಿದೆ ಎಂಬ ಬಿ. ಡಿ. ಸುಬ್ಬಯ್ಯನವರ ಅಭಿಪ್ರಾಯವನ್ನು ನಿರಾಕರಿಸಿ, ಹುತ್ತರಿಯು ಕೇರಳದ "'ಓಣಂ' ಮಾದರಿಯಲ್ಲಿ ಕೊಡಗಿನಲ್ಲಿ ಪ್ರಾರಂಭವಾಗಿ ಇಗ್ಗುತಪ್ಪನ ಅಪ್ಪಣೆ ಮೇರೆಗೆ ನಡೆಯುವ ಹಬ್ಬ. ಇದು ಎಲ್ಲಿಂದಲೋ ಕೊಡಗಿಗೆ ಬಂದದ್ದಲ್ಲ"[೬೮] ಎಂಬ ವಿಚಾರವನ್ನು ಪಿ. ಎಸ್. ರಾಮಾನುಜಂ ಸ್ಪಷ್ಟಪಡಿಸುತ್ತಾರೆ. ಇದು ದೇಶೀಯವಾದ ಆಚರಣೆಯನ್ನು ಹೊಂದಿದೆ ಎಂದು ಹೇಳುವುದಕ್ಕೆ ಚಾಮರಾಜನಗರದ "ಉಪ್ಪಲಿಗ" ಎಂಬ ಜನಾಂಗದಲ್ಲಿ ಕೊಡವರ 'ಬೊಳಕಾಟ್'ದಲ್ಲಿ ನಡೆಯುವಂತೆಯೇ ಬೆಂಕಿ ಹಾಕಿ ಸುತ್ತಲೂ ಕೊಡವರ ನೃತ್ಯದಂತೆಯೇ ಇರುವ ಒಂದು ನೃತ್ಯವನ್ನು ಮಾಡುತ್ತಾರೆಂಬುದನ್ನು[೬೯] ಇಲ್ಲಿ ನೆನೆಯಬಹುದು. ಇದರ ಮೂಲಕ ಹುತ್ತರಿ ದೇಶೀಯ ಆಚರಣೆ ಎನ್ನುವುದನ್ನು ಮನಗಾಣಬಹುದಾಗಿದೆ.

ಹುತ್ತರಿ ಹಬ್ಬದ ಸಾಂಪ್ರದಾಯಿಕ ಆಚರಣೆಗೆ ಕೊಡವರು ಕೃಷಿಯೊಂದಿಗೆ ತಾವು ಹೊಂದಿರುವ ಅವಿನಾಭಾವ ಸಂಬಂಧವೇ ಮುಖ್ಯವೆನ್ನಬಹುದು. ತುಂಬಿದ ಬತ್ತದ ತೆನೆಗಳನ್ನು ಅತ್ಯಂತ ಶ್ರದ್ಧೆ ಭಕ್ತಿಗಳಿಂದ ವಿಧಿವತ್ತಾಗಿ ಪೂಜಿಸಿ ಮನೆ ತುಂಬಿಸಿಕೊಳ್ಳುವ ಸಂಭ್ರಮ ಎಂತಹವರನ್ನು ಬೆರಗುಗೊಳಿಸುತ್ತದೆ. ಈ ಹಬ್ಬಗಳು ಇಂದು ನಿನ್ನೆ ಹುಟ್ಟಿದವುಗಳಲ್ಲ. ಮನುಷ್ಯನ ಉಗಮದೊಂದಿಗೆ ಜನ್ಮ ತಾಳಿ ಬೆಳೆಯುತ್ತಾ ತಮ್ಮ ಮೂಲ ಸ್ವರೂಪಗಳಿಂದ ಭಿನ್ನವಾಗಿ ಇಂದು ಬೇರೊಂದು ರೂಪವನ್ನು ಪಡೆದುಕೊಂಡು ಆಚರಣೆಯಲ್ಲಿವೆ. ಪ್ರಾರಂಭದಲ್ಲಿ ಬಹುಪಾಲು ಕೊಡವರು ಜಮೀನುಗಳನ್ನು ಹೊಂದಿದ್ದು, ತಮ್ಮ ಬದುಕಿಗೆ ಮೂಲಾಧಾರವಾಗಿರುವ ಕೃಷಿಯನ್ನು ಒಂದಲ್ಲಾ ಒಂದು ವಿಧದಲ್ಲಿ ಆರಾಧಿಸುತ್ತಾ ಬಂದಿದ್ದಾರೆ. ಹುತ್ತರಿಯಲ್ಲಿ ಕದಿರು ತರುವಂತದ್ದು

ಅತ್ಯಂತ ಶ್ರೇಷ್ಠವೆಂದು ಭಾವಿಸಿ ನಡೆಸಿಕೊಂಡು ಬಂದಿರುತ್ತಾರೆ. ಈ ಹಬ್ಬಗಳು ತಮ್ಮ ಮೂಲ ಸ್ವರೂಪದಲ್ಲೇ ಇಂದೂ ಆಚರಿಸಲ್ಪಡುತ್ತಿವೆ.

ಆಧುನಿಕತೆಯಿಂದಾಗಿ ಕೃಷಿ ಪಲ್ಲಟಗಳು ನಡೆಯುತ್ತಿರುವ ಇಂತಹ ಸಮಯದಲ್ಲಿಯೂ ತಮಗೆ ಸ್ವಂತ ಜಮೀನಿಲ್ಲದಿದ್ದರೂ 'ಹುತ್ತರಿಹಬ್ಬ'ದ ದಿನದಂದು ಸಂಪ್ರದಾಯಬದ್ಧವಾಗಿ ಕದಿರು ಕತ್ತರಿಸಿದವರಿಂದ ತೆಗೆದುಕೊಂಡ ಕದಿರನ್ನು ತಮ್ಮ ಮನೆಯಲ್ಲಿ ಕಟ್ಟಿಕೊಳ್ಳುವುದು ಮತ್ತು ವಾಹನಗಳಿಗೂ ಸಿಕ್ಕಿಸಿಕೊಳ್ಳುವುದು 'ಹುತ್ತರಿ'ಯ ಪ್ರಾಮುಖ್ಯತೆಯನ್ನು ಸಾರುತ್ತಿರುವುದು ಕೊಡಗಿನಲ್ಲಿ ಕಂಡುಬರುತ್ತಿದೆ.

ಈ ಮೇಲಿನ ಹಬ್ಬಗಳಲ್ಲದೆ ಕೊಡವರು ಕರ್ನಾಟಕದಾದ್ಯಂತ ಆಚರಿಸಲ್ಪಡುವ ಯುಗಾದಿ, ಗಣೇಶ ಚತುರ್ಥಿ, ದೀಪಾವಳಿ, ಮೊದಲಾದ ಧಾರ್ಮಿಕ ಹಬ್ಬಗಳ ಜೊತೆಗೆ ಇಲ್ಲಿನ ಸ್ಥಳೀಯ ದೇವತೆಗಳಾದ ಇಗ್ಗುತಪ್ಪ ಹಬ್ಬ, ಪನ್ನಂಗಾಲತಮ್ಮೆ ಹಬ್ಬ, ಬೋಡುಹಬ್ಬ, ಗ್ರಾಮದೇವತೆಯಾದ ಭದ್ರಕಾಳಿ ಹಬ್ಬಗಳನ್ನೂ ಆಚರಿಸುವ ಮೂಲಕ ತಮ್ಮ ಧಾರ್ಮಿಕ ಶ್ರದ್ಧೆಯನ್ನು ಮೆರೆಯುತ್ತಿದ್ದಾರೆ.

### ೪.೩. ಕೊಡವರ ವಿವಾಹ

ಮದುವೆ ಅಥವಾ ವಿವಾಹವೆಂಬುದು ಸಾರ್ವತ್ರಿಕವಾದ ಒಂದು ಪ್ರಕ್ರಿಯೆ. ಮನುಷ್ಯ ವರ್ಗದಲ್ಲಿ ಮದುವೆಗೆ ವಿಶೇಷ ಸ್ಥಾನವಿದೆ. ವಿವಾಹ ವಿಧಾನಗಳು ಬೇರೆಬೇರೆಯಾಗಿದ್ದರೂ ಸಾಮಾಜಿಕ ಒಪ್ಪಂದವೆಂಬ ಕ್ರಮವೆಂಬುದೊಂದಿದೆ. 'ಹುಟ್ಟಿದ ಮಕ್ಕಳು ಪ್ರವಾಹದಲ್ಲಿ ಕೊಚ್ಚಿ ಹೋಗುವ ಗಿಡಗಂಟಿಗಳಂತೆ, ದಿಕ್ಕಿಲ್ಲದೆ, ಬೇರಿಲ್ಲದೆ ತೇಲಿಹೋಗಬಾರದೆಂದು ಮಾಡಿಕೊಂಡಿರುವ ಸಾಮಾಜಿಕ ನಿಯಮ'[೫೦] ಎಂಬ ಸಾಲುಗಳು ವಿವಾಹ ಪದ್ಧತಿಯ ಪ್ರಾಮುಖ್ಯತೆಯನ್ನೂ ತಿಳಿಸುತ್ತವೆಯಾದರೂ ವಿವಾಹ ಕೇವಲ ಮಕ್ಕಳನ್ನು ಪಡೆದು ಪೋಷಿಸುವುದು ಮಾತ್ರವಾಗಿರದೆ ಸಾಮಾಜಿಕ ಜವಾಬ್ದಾರಿಗಳ ನಿರ್ವಹಣೆಗೂ ಮುಖ್ಯವಾಗಿರುತ್ತದೆ. ಪ್ರಾಣಿಗಳನ್ನು ಹೊರತುಪಡಿಸಿ ಮನುಷ್ಯರು ಒಂದಿಲ್ಲೊಂದು ರೂಪದಲ್ಲಿ ಈ ವಿವಾಹ ಪದ್ಧತಿಯನ್ನು ರೂಢಿಸಿಕೊಂಡು ಬಂದಿದ್ದಾರೆ. ವಿವಾಹಗಳು ಸಾಮಾನ್ಯವಾಗಿ ಗುರು-ಹಿರಿಯರ ಮಾರ್ಗದರ್ಶನದಲ್ಲಿ ನಡೆಯುವಂತಹವುಗಳು. ಇವುಗಳಿಗೆ ಹೆಚ್ಚು ಪ್ರಾಶಸ್ತ್ಯವಿದ್ದು ಸಮಾಜದ ನಿಯಂತ್ರಣಕ್ಕೊಳಪಡುತ್ತವೆ. ಕೆಲವೊಮ್ಮೆ ಯುವಕ ಯುವತಿಯರು ಪರಸ್ಪರ ಪ್ರೀತಿಸಿ ಕುಟುಂಬದ ವಿರೋಧ ವ್ಯಕ್ತವಾದಾಗ ತಾವೇ ವಿವಾಹವಾಗುವ ಸಂದರ್ಭಗಳಿವೆ.

ಕೊಡವರ ವಿವಾಹ ಪದ್ಧತಿಯನ್ನು ಸಂಸ್ಕಾರಗಳ ಸಾಲಿಗೆ ಸೇರಿಸಬಹುದು. ಏಕೆಂದರೆ ಕೊಡವರಲ್ಲಿ ಹಲವು ಬಗೆಯ ವಿವಾಹಗಳಿವೆ. ಅವುಗಳೆಂದರೆ ಕಿವಿ ಚುಚ್ಚುವ ಸಮಯದಲ್ಲಿ ಕೆಮಿಕುತ್ತಿಮಂಗಲ, ಹುಲಿ ಕೊಂದ ವೀರನಿಗೆ ಮಾಡುವ ನರಿಮಂಗಲ ಹಾಗೂ ಬಾಳೆ ಮಂಗಲಗಳೆಂಬ ಹೆಂಡತಿಯಿಲ್ಲದೆ ನಡೆಯುವ ಮದುವೆಗಳೊಂದಿಗೆ, ಹೆಣ್ಣು ಗಂಡಿನ ನಡುವೆ

ನಡೆಯುವ ಕನ್ನಿಮಂಗಲ, ಕೂಡಾವಳಿಮಂಗಲ, ಒಕ್ಕ ಪರಿಜೆ ಹಾಗೂ ಮಕ್ಕ ಪರಿಜೆ ಮೊದಲಾದ ಒಂಬತ್ತು ವಿಧದ ವಿವಾಹಗಳುಂಟು. ಹೆಂಡತಿಯಿಲ್ಲದೇ ನಡೆಯುವ ವಿವಾಹಗಳು ನಿಜವಾದ ಮದುವೆಯಂತೆಯೇ ನಡೆಯುವುದರಿಂದ ಅವುಗಳಿಗೆ ಮಂಗಲ ಅಥವಾ ಮದುವೆ ಎಂಬ ಹೆಸರು ಬಂದಿದೆ. ಕೊಡವ ಭಾಷೆಯಲ್ಲಿ ಮಂಗಲ ಎಂದರೆ ಮದುವೆ ಎಂದರ್ಥವಿರುವುದರಿಂದ ನರಿಮಂಗಲ, ಕನ್ನಿಮಂಗಲ ಮೊದಲಾದ ಹೆಸರುಗಳು ರೂಢಿಯಲ್ಲಿವೆ. ಕೊಡವರಲ್ಲಿ ಅತಿಮುಖ್ಯವಾಗಿ ಸಮಾಜ, ಕುಟುಂಬದ ಬಂಧುಬಾಂಧವರು ಸೇರಿ ಹೆಣ್ಣು ಗಂಡು ನೋಡುವುದರಿಂದ ಮೊದಲ್ಗೊಂಡು ಎಲ್ಲಾ ರೀತಿಯ ಶಾಸ್ತ್ರೋಕ್ತಗಳಿಂದ ಕೂಡಿ ನಡೆಯುವ ವಿವಾಹವೆಂದರೆ 'ಕನ್ನಿಮಂಗಲ'. ಮೇಲಿನ ಎಲ್ಲಾ ವಿಧದ ವಿವಾಹಗಳಲ್ಲಿಯೂ ವೈಧಿಕ ಸಂಸ್ಕೃತಿಗಿಂತ ಭಿನ್ನವಾಗಿರುವುದರಿಂದ ಇದು ಕೊಡವರ ವಿವಾಹ ಪದ್ಧತಿಯ ವೈಶಿಷ್ಟ್ಯವೆಂದೇ ಗುರುತಿಸಲಾಗಿದೆ.

**ಕನ್ನಿಮಂಗಲ:** ವಿವಾಹ ಪದ್ಧತಿಗಳನ್ನು ಸಾಂಪ್ರದಾಯಿಕವಾಗಿ ಅನುಸರಿಸಿ ಹಿರಿಯರು ನಿಶ್ಚಯಿಸಿ ಏರ್ಪಡಿಸುವ ವಿವಾಹಕ್ಕೆ ಕೊಡವ ಭಾಷೆಯಲ್ಲಿ 'ಕನ್ನಿಮಂಗಲ' ಎನ್ನುತ್ತಾರೆ, ದಕ್ಷಿಣ ಭಾರತದಲ್ಲಿರುವ ಎಲ್ಲಾ ವಿವಾಹ ಪದ್ಧತಿಗಳಿಗಿಂತ ಕೊಡವರ ಈ ಕನ್ನಿಮಂಗಲ ಬಹಳ ವಿಶಿಷ್ಟವಾದುದು. ಹೆಣ್ಣಿಗೆ ಗಂಡು ತಾಳಿ ಕಟ್ಟದೆ ಹೆಣ್ಣಿನ ತಾಯಿ ತನ್ನ ಮಗಳಿಗೆ 'ಪತ್ತಾಕ'ವೆಂದು ಕರೆಯಲ್ಪಡುವ ಸರವನ್ನು ಕೊರಳಿಗೆ ಧರಿಸುವುದು ಕೊಡವರ ವಿಶಿಷ್ಟತೆಗಳಲ್ಲೊಂದು. ಇದರಂತೆಯೇ ಇವರ ವಿವಾಹ ಪದ್ಧತಿಗಳಲ್ಲಿ ಹಲವು ವೈಶಿಷ್ಟ್ಯಗಳನ್ನು ಗುರುತಿಸಬಹುದು.

ಕೆಲವು ವರ್ಷಗಳ ಹಿಂದೆ ಒಂದು ಕುಟುಂಬದ ಮದುವೆ ಎಂದರೆ ಅದು ಆ ಗ್ರಾಮದ ಮದುವೆಯಂತಿರುತ್ತಿತ್ತು. ಗ್ರಾಮದ ಪ್ರತಿ ಮನೆಯಿಂದ ಹೆಂಗಸು ಮತ್ತು ಗಂಡಸು ತಪ್ಪದೆ ಮದುವೆ ಮನೆಗೆ ಹೋಗಬೇಕು ಮಾತ್ರವಲ್ಲ ವಿವಾಹದ ಸರ್ವ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕಾಗಿತ್ತು. ಮಹೂರ್ತದ ಹಿಂದಿನ ದಿನ ಗ್ರಾಮದವರೆಲ್ಲಾ ಸೇರಿ ಚಪ್ಪರ ಹಾಕಬೇಕಾಗಿತ್ತು. ಈ ಪದ್ಧತಿ ಕೊಡವರಲ್ಲಿಯೂ ಇದ್ದು ಇದನ್ನು 'ಕರಿಕ್ ಮುರಿಪ್' ಎಂದು ಕರೆಯಲಾಗುತ್ತಿತ್ತು. ಇದು ಕೇವಲ ಕೊಡಗಿನಲ್ಲಿ ಮಾತ್ರವಲ್ಲ ದಕ್ಷಿಣ ಭಾರತದ ಅನೇಕ ಕಡೆ ಅನುಸರಿಸುತ್ತಿದ್ದ ಪದ್ಧತಿಯಾಗಿತ್ತು. ಆಧುನಿಕತೆಗೆ ತೆರೆದುಕೊಳ್ಳುತ್ತಿರುವ ಇಂದು ಈ ರೀತಿಯ ಸಹಕಾರ ಮನೋಭಾವವಾಗಲಿ, ಪರಸ್ಪರ ಹೊಂದಾಣಿಕೆಯಾಗಲಿ ಕಾಣಲು ಸಾಧ್ಯವಾಗದೆ ಇರುವುದು ಮನುಷ್ಯ ಸಮಾಜ ಜೀವಿ ಎಂಬುದನ್ನು ಮರೆತಿರುವ ಲಕ್ಷಣಗಳಾಗಿ ಗೋಚರಿಸುತ್ತವೆ.

ಕೊಡವರು ಕನ್ನಿಮಂಗಲ ಪದ್ಧತಿಯಲ್ಲಿ ಗಂಡು ಮತ್ತು ಹೆಣ್ಣಿನ ಜಾತಕದ ಮೂಲಕ ಅವರ ಗಣಗಳು ಕೂಡಿ ಬಂದರೆ ಹಿರಿಯರ ಸಮ್ಮುಖದಲ್ಲಿ ಮದುವೆ ನಿಶ್ಚಯಿಸಲಾಗುತ್ತದೆ. ಕೆಲವೊಮ್ಮೆ ಗಣಕೂಟ ಸರಿಹೊಂದದಿದ್ದರೂ ದೇವಸ್ಥಾನಕ್ಕೆ ಹೋಗಿ ಪೂಜೆ ಸಲ್ಲಿಸುತ್ತಾರೆ. ದೇವಸ್ಥಾನದಲ್ಲಿ ದೇವರ ವಿಗ್ರಹಕ್ಕೆ ಮುಡಿಸಿದ ಹೂವು ಯಾವ ಕಡೆಯಿಂದ ಬೀಳುತ್ತದೆ ಎಂಬುದರ ಆಧಾರದ ಮೇಲೆ ಗಂಡು ಹೆಣ್ಣಿನ ಒಳಿತು ಕೆಡಕುಗಳನ್ನು ಅರಿಯುತ್ತಾರೆ. ಕೆಂಪು

ಹೂವು ಬಿದ್ದರೆ ಅಪಶಕುನ, ಬಿಳಿ ಹೂವು ಬಿದ್ದರೆ ಶುಭಶಕುನ ಎಂದು ನಂಬಿ ವಿವಾಹ ನಿರ್ಧಾರ ಮಾಡುತ್ತಾರೆ. ಇದನ್ನು 'ಮಂಗಲ ಕುರಿಪ' ಎನ್ನುತ್ತಾರೆ. ಇದೇ ಪದ್ಧತಿಯನ್ನು ಇಲ್ಲಿನ ಗೌಡ ಸಮುದಾಯ, ಕೆಂಬಟ್ಟಿ ಸಮುದಾಯ ಅನುಸರಿಸುವುದು ಕಂಡುಬರುತ್ತದೆ.

ಮಂಗಲ ಕುರಿಪ ನಡೆಯುವಾಗ ತಳಿಯಕ್ಕಿ ಬೊಳಚ ದೀಪವನ್ನು ಹಚ್ಚಿ ಗಂಡಿನ ಮತ್ತು ಹೆಣ್ಣಿನ ಕಡೆಯವರು ಒಂದೊಂದು ಕಡೆ ನಿಂತುಕೊಳ್ಳುತ್ತಾರೆ. ಎರಡೂ ಕಡೆಯವರು ವಿವಾಹ ನಿಶ್ಚಯದ ಕುರಿತು ಮಾತನಾಡಿಕೊಳ್ಳುತ್ತಾರೆ. ದೀಪದ ಮುಂದೆ ಮದುವೆ ನಿಶ್ಚಯದ ಮಾತುಕತೆ ನಡೆಯುವುದು ಕೊಡವರ ಪ್ರಕಾರ ಅಗ್ನಿಸಾಕ್ಷಿಯಾಗಿ ಎಂದಿರಬೇಕು. ಮದುವೆ ನಿಶ್ಚಯವಾದ ಮೇಲೆ ವಧು-ವರರು ಮನೆಯಿಂದ ದೂರ ತೆರಳಬಾರದು, ನದಿ ದಾಟಬಾರದು ಎಂಬ ನಂಬಿಕೆಯೂ ಕೊಡವರಲ್ಲಿದೆ. ಮದುವೆ ನಿರ್ಧಾರವಾದ ನಂತರ ವಧು-ವರರು ಸುರಕ್ಷಿತವಾಗಿರಬೇಕು ಎಂಬುದೇ ಇದರ ಮುಖ್ಯ ಉದ್ದೇಶ. ಇಲ್ಲದಿದ್ದರೆ ಹೊರಗಡೆ ಸಂಚರಿಸುವಾಗ ದುರ್ಘಟನೆಗಳೇನಾದರೂ ಸಂಭವಿಸಬಹುದೆಂಬ ಭಯದಿಂದ ಇಂಥ ನಿಷೇಧಗಳನ್ನು ರೂಢಿಸಿಕೊಂಡಿದ್ದಾರೆ ಎಂದು ಹೇಳಬಹುದು.

ಕೊಡವರಲ್ಲಿ ವದು-ವರರ ಮುಹೂರ್ತ ಹಿಂದಿನ ದಿನ ಅವರವರ ಮನೆಯಲ್ಲಿಯೇ ನಡೆಯುತ್ತದೆ. ಈ ಸಂದರ್ಭದಲ್ಲಿ ಮನೆಯ ಮುಂದೆ ಹಾಲುಬರುವ ಏಳು ಕಂಬಗಳಿಂದ ಕೂಡಿದ ಚಪ್ಪರವನ್ನು ನಿರ್ಮಿಸುತ್ತಾರೆ. ಈ ದಿನ ಮದುವೆ ಮನೆಗೆ ಸೇರಿದ ಗ್ರಾಮದವರು ಮತ್ತು ಬಂಧುಗಳು ಹಂದಿ ಮಾಂಸದ ಔತಣವನ್ನು ಸವಿದು ತಮ್ಮ ತಮ್ಮ ಮನೆಗೆ ಹಿಂದಿರುಗಿ ಮಹೂರ್ತದ ದಿನಕ್ಕೆ ಸಿದ್ಧತೆ ಮಾಡಿಕೊಳ್ಳುತ್ತಾರೆ.

ಮದುವೆ ಮುಹೂರ್ತದ ದಿನ ವಧು-ವರರ ಕೈಗೆ ಗೋರಂಟಿ ಹಚ್ಚುವ ಶಾಸ್ತ್ರವಿರುತ್ತದೆ. ಇದನ್ನು 'ತೇರಣ ಶಾಸ್ತ್ರ'ವೆನ್ನುತ್ತಾರೆ. ನಂತರ ವಧುವಿಗೆ ಬಳೆಶಾಸ್ತ್ರ ಮತ್ತು ವರನಿಗೆ ಮುಖ ಕ್ಷೌರ ಮಾಡಿಸುವ ಶಾಸ್ತ್ರ ನಡೆಯುತ್ತದೆ. ವರ ಮದುವೆಯ ದಿನ ಕ್ಷೌರ ಮಾಡಿಸುವುದು ಉಳಿದ ಸಮುದಾಯಗಳಲ್ಲಿ ಸಹಜ ಪ್ರಕ್ರಿಯೆಯಾಗಿ ಕಂಡುಬಂದರೆ ಕೊಡವರಲ್ಲಿ ಇದು ಮದುವೆಯ ಒಂದು ಶಾಸ್ತ್ರದ ಭಾಗವಾಗಿ ಕಾಣಬರುತ್ತದೆ. ಕ್ಷೌರ ಮಾಡಿಸುವ ಸಮಯದಲ್ಲಿ ವರನು ಒಳಕುಪ್ಪಸ, ತಲೆಗೊಂದು ಕೆಂಪು ವಸ್ತ್ರ ಧರಿಸಿರುತ್ತಾನೆ. ನಂತರ ಕನ್ನಿಕೋಂಬರೆ ದೀಪಕ್ಕೆ, ಕನ್ನಿಕಂಬಕ್ಕೆ, ನೆಲ್ಲಕ್ಕಿ ನಡುಬಾಡೆಯ ದೀಪಕ್ಕೆ ಅಕ್ಷತೆ ಹಾಕಿ ಅವುಗಳಿಗೆ ನಮಸ್ಕರಿಸಿ ಅಲ್ಲಿ ನೆರೆದ ಹಿರಿಯರೆಲ್ಲರಿಗೂ ಕಾಲು ಮುಟ್ಟಿ ನಮಸ್ಕರಿಸಿ ಆಶೀರ್ವಾದ ಪಡೆದು ಕ್ಷೌರಕ್ಕೆ ತೆರಳುತ್ತಾನೆ. ಮುಗಿದ ನಂತರ ವರ ಕುಳಿತುಕೊಳ್ಳಲು ಹಾಕಿದ್ದ ಚಾಪೆ, ಕೆಂಪು ವಸ್ತ್ರ, ಕ್ಷೌರದ ಪಾತ್ರೆಗೆ ಹಾಕಿದ್ದ ಚಿನ್ನದ ಒಡವೆ ಮೊದಲಾದ ವಸ್ತುಗಳನ್ನು ಕ್ಷೌರಿಕನಿಗೆ ನೀಡಲಾಗುತ್ತದೆ. ಇದರಂತೆಯೇ ವಧುವಿಗೆ ಬಳೆ ಶಾಸ್ತ್ರ ಮಾಡುವಾಗ ಹಾಕಲಾಗಿದ್ದ ವಸ್ತುಗಳನ್ನೂ ಬಳೆಗಾರನಿಗೆ ನೀಡುತ್ತಾರೆ. ಹೀಗೆ ತಮ್ಮ ಮನೆ ಮದುವೆಗಳಿಗೆ ಸಹಕರಿಸಿದವರಿಗೆ ಉಡುಗೊರೆಯ ರೂಪದಲ್ಲಿ ಅವರನ್ನು ಸತ್ಕರಿಸುವುದನ್ನು ಕಾಣಬಹುದು.

ವರನಿಗೆ ಕ್ಷೌರ ಮತ್ತು ವಧುವಿಗೆ ಬಳೆಶಾಸ್ತ್ರ ಮುಗಿದ ಬಳಿಕ ಇಬ್ಬರಿಗೂ ಸ್ನಾನದ ಶಾಸ್ತ್ರವೊಂದಿರುತ್ತದೆ. ಸ್ನಾನದ ನಂತರ ವಧು-ವರರು ಮಹೂರ್ತಕ್ಕೆ ಶೃಂಗಾರವಾಗಬೇಕಾಗುತ್ತದೆ. ಹುಡುಗನಿಗೆ ಚೇಲೆ, ಪಾನಿಮಂಡೆತುಣಿ(ತಲೆ ರುಮಾಲು), ಪೀಚೆಕತ್ತಿ, ಚಿನ್ನದ ಸರ, ಒಡಿಕತ್ತಿ, ಕಡುಕು, ಚಿನ್ನದ ಬಳೆ, ಬೆರಳಿಗೆ ಉಂಗುರಗಳನ್ನು ತೊಡಿಸುತ್ತಾರೆ.

ಅಂತೆಯೇ ವಧುವಿಗೂ ವಿವಿಧ ಆಭರಣ ಮತ್ತು ವಸ್ತ್ರಗಳಿಂದ ಅಲಂಕರಿಸುತ್ತಾರೆ. ಹುಲಿಯ ಹಾಲಿನ ಮೇವು ಕಾದಂಬರಿಯಲ್ಲಿ ಪೂವಿಗೆ ಸ್ನಾನ ಮಾಡಿಸಿ ಮೂವರು ಸುಮಂಗಲೆಯರು ಅಲಂಕರಿಸುವ ರೀತಿ ಈ ಮುಂದಿನಂತಿದೆ. 'ತಂಗವ್ವ ಗೆಳತಿಗೆ ಕೆಂಪು ಪಟ್ ಪೊಡಿಯವನ್ನುಡಿಸಿ, ಮೈಗೆ ಉದ್ದ ಕೈಗಳುಳ್ಳ ಕೆಂಬಣ್ಣದ ರವಿಕೆಯನ್ನು ತೊಡಿಸಿದಳು. ಆಕೆಯ ಕೊರಳಿಗೆ ಕೊಕ್ಕೆ ತಾತಿ, ಸರಪಣಿ, ಕರಿಮಣಿಸರ ಮತ್ತು ಜೋಮಾಲೆ ಸರಗಳನ್ನು ಸೂಡಿದಳು. ಕಿವಿಗಳಿಗೆ ಹರಳಿನ ಬೆಂಡೋಲೆ, ತುರುಬಿಗೆ ಜಡೆಬಿಲ್ಲೆ ಕೈಗಳಿಗೆ ಚಿನ್ನದ ಕಡಗಗಳನ್ನು ತೊಡಿಸಿ ಸಿಂಗರಿಸಿದಳು. ಅವಳು ಪಾದಗಳಿಗೆ ತೊಡಿಸಿದ ಕಾಲುಸರ, ಕಾಲುಂಗುರಗಳು ಆಕೆಯ ಚರಣಗಳ ಶೋಭೆಯನ್ನು ಹೆಚ್ಚಿಸಿದವು. ತಂಗವ್ವ ವಧುವಿನ ಮುಖಕ್ಕೆ ಕೆಂಪು ಜರತಾರಿ ವಸ್ತ್ರದ ಮುಸುಕನ್ನು ಹಾಕಿದಳು. ಅವಳು ಎರಡು ಕೊಡಿಯೆಲೆಗಳಿಗೆ ಸುಣ್ಣವನ್ನು ಲೇಪಿಸಿ, ಲವಂಗ, ಜಾಯಿಕಾಯಿ, ಪತ್ರೆಗಳನ್ನು ಬೆರೆಸಿದ ಅಡಿಕೆಪುಡಿಯೊಡನೆ ಪೂವಿಗೆ ತಾಂಬೂಲವನ್ನು ಕೊಟ್ಟಳು. ಪೂವಿ ಕೊಡಿಯೆಲೆ ಅಡಿಕೆಗಳನ್ನು ಮೆದ್ದು ತುಟಿಗಳನ್ನು ಕೆಂಪು ಮಾಡಿಕೊಂಡಳು ಇನ್ನೊಬ್ಬ ಕನ್ಯೆ ಬೆಳ್ಗೊಡೆಯನ್ನು ಬಿಚ್ಚಿ ವಧುವಿನ ನೆತ್ತಿಯ ಮೇಲೆ ಹಿಡಿದಳು'.[೫೧] ಇದೇ ರೀತಿ ಇಂದಿಗೂ ಇದು ಮುಂದುವರೆದುಕೊಂಡು ಹೋಗುತ್ತಿರುವುದು ವಧುವಿನ ಅಲಂಕಾರದ ಪ್ರಾಮುಖ್ಯತೆಯನ್ನು ಸೂಚಿಸುತ್ತದೆ.

ಅಲಂಕೃತಗೊಂಡ ವಧು-ವರರು ವಿಭೂತಿ ಧರಿಸಿ ವೀಳ್ಯದೆಲೆಯನ್ನು ಮೆಲ್ಲಬೇಕು. ವಿವಾಹದವರೆಗೆ ವೀಳ್ಯದೆಲೆಯನ್ನು ತಿನ್ನಬಾರದೆಂಬ ಪ್ರತೀತಿಯಿದೆ. ಆ ಕಾರಣದಿಂದ ಮುಹೂರ್ತದ ಸಮಯದಲ್ಲಿ ವಧು-ವರರ ಬಾಯನ್ನು ತಾಂಬೂಲದ ಮೂಲಕ ಕೆಂಪಾಗುವಂತೆ ಮಾಡುತ್ತಾರೆ. ನಂತರ ವಾದ್ಯಗಳ ಸಮೇತ ಸ್ನಾನಗೃಹದಿಂದ ಮದುವೆ ಮಂಟಪದವರೆಗೆ ಕರೆದು ತರುತ್ತಾರೆ. ಊರಿನ ಮಡಿವಾಳ ಸ್ನಾನಗೃಹದಿಂದ ಮದುವೆ ಮಂಟಪದವರೆಗೆ ಶುಚಿಯಾದ ಬಿಳಿ ಬಟ್ಟೆಯನ್ನು ನೆಲಕ್ಕೆ ಹಾಸಿರುತ್ತಾನೆ. ಈ ಸಮಯದಲ್ಲಿ ಗಂಡಿಗೆ ಬೋಜಕಾರನು(ಗಂಡಿನ ಜೊತೆಗಾರ) ಹೆಣ್ಣಿಗೆ ಬೋಜಕಾರಿಯೂ(ಹೆಣ್ಣಿನ ಜೊತೆಗಾರ್ತಿ) ಬಿಳಿ ಕೊಡೆಯನ್ನು ಹಿಡಿಯುತ್ತಾರೆ. 'ಹೀಗೆ ಬಿಳಿ ಕೊಡೆಯನ್ನು ಹಿಡಿಯುವ ಪದ್ಧತಿ ಹಿಂದಿನ ಕ್ಷತ್ರಿಯ ರಾಜಮನೆತನದವರ ಶ್ವೇತಚ್ಛತ್ರದ ಸಂಕೇತವಾಗಿ ಉಳಿದಿದೆ'[೫೨] ಎನ್ನಲಾಗುತ್ತಿದೆ. ಆದರೆ ಹೀಗೆ ಬಿಳಿಕೊಡೆ ಹಿಡಿಯುವ ಪದ್ಧತಿ ಇತರ ಹಿಂದೂ ಸಮಾಜಗಳಲ್ಲಿಯೂ ಇದೆ. ಇತ್ತೀಚೆಗೆ ಬಿಳಿ ಕೊಡೆಗಳ ಅಲಭ್ಯತೆಯಿಂದಾಗಿ ಸಿಗುವ ಯಾವುದೇ ಬಣ್ಣದ ಕೊಡೆಗಳ ಮೇಲೆ ಬಿಳಿ ವಸ್ತ್ರಗಳನ್ನು ಹಾಕಿ ವಧು-ವರರಿಗೆ ಹಿಡಿಯವುದು ರೂಢಿಯಾಗಿದೆ. ವಧು-ವರರು ಸ್ನಾನಗೃಹದಿಂದ

ಬರುವಾಗ ನಡೆಯಲು ನೆಲಕ್ಕೆ ಬಿಳಿ ಬಟ್ಟೆಯನ್ನು ಹಾಸುವುದು ಕೊಡವರ ಮದುವೆಗಳ ಮತ್ತೊಂದು ವಿಶೇಷವಾಗಿದೆ.

ಶೃಂಗಾರಗೊಂಡ ವಧು-ವರರು ಶ್ವೇತವಸ್ತ್ರದ ಮೇಲೆ ನಡೆದು ಬರುವಾಗ ನಾಲ್ಕು ಜನ ಕೊಡವರು ದುಡಿ ಬಡಿಯುತ್ತಾ ಹಾಡುತ್ತಿರುತ್ತಾರೆ. ಈ ಹಾಡನ್ನು 'ಮಂಗಲ ಬಟ್ಟೆ ಪಾಟ್' ಎನ್ನುತ್ತಾರೆ.

ಲೇಲಾಲೆ, ಲಾಲೇಲಾ, ಲೇಲೆಲ, ಲೇಲೊ,
ಲೇಲೆಲೊ, ಪಾಡಿ ತರಕೊವ್ವ ಎಂಗ
ತಪ್ಪತ್ತೆ ನವು ಎಂಗಂಡು ತೊಂಡೆ
ಎಂಗನೊ ನಿನ್ನ ಪಲರ್ ತುದಿಕು
ಅಲ್ಲೇಂಗಿ ನಿನ್ನ ಪಲರ್ ಪಳಿಯು
ನೀಕ್ ಕೈಕೂಲಿ ನಾ ತಪ್ಪಿ ತೊಂಡೆ
ಏಳ್ ಮೊರ್‌ದ್‌ರತೆ ಕೂತಪ್ಪ ತೊಂಡ.
..................................................[೫೩]

ಎಂದು ದುಡಿ ಕುಟ್ಟುತ್ತಾ ಮಂಗಲ ಬಟ್ಟೆ ಪಾಟ್‌ನ್ನು ಹಾಡುತ್ತಾ ವಧು-ವರರನ್ನು ಮದುವೆ ಮಂಟಪಕ್ಕೆ ಕರೆದು ತರುತ್ತಾರೆ. ಮಂಟಪದಲ್ಲಿ ವಧು-ವರರು ಕುಳಿತುಕೊಳ್ಳಲು ಕೊಡವರಿಗೆ ಶುಭದ ಸಂಕೇತವಾದ ಕೆಂಪು ಬಣ್ಣದ ಬಟ್ಟೆ ಹಾಕಿರುವ 'ಮುಕ್ಕಾಲಿ'ಗಳನ್ನಿಟ್ಟಿರುತ್ತಾರೆ. ಇದು ಮೂರು ಕಾಲುಗಳ ವೃತ್ತಾಕಾರದ ಕುರ್ಚಿಯಾಗಿರುವುದರಿಂದ 'ಮುಕ್ಕಾಲಿ' ಎಂದು ಕರೆಯಲ್ಪಟ್ಟಿದೆ. ಇಂದಿಗೂ ಮೂಲದ ಮುಕ್ಕಾಲಿಗಳ ಬಳಕೆ ಕೊಡವರಲ್ಲಿರುವುದು ಇವರ ಸಾಂಸ್ಕೃತಿಕ ಬದುಕಿಗೆ ಸಾಕ್ಷಿಯೆನಿಸುತ್ತದೆ. ಕೆಲವು ಹಿಂದೂ ಸಂಪ್ರದಾಯದ ಮದುವೆಗಳಲ್ಲಿ ವಧು-ವರರಿಗೆ 'ಹಸೆಮಣೆ' ಎಂಬ ಮರದ ನೆಲ ಹಾಸುಗಳನ್ನು ಬಳಸುವುದು ರೂಢಿಯಲ್ಲಿದೆ. ಪ್ರತಿಯೊಬ್ಬರೂ ಇವುಗಳನ್ನು ಹೊಂದಿರುವುದಿಲ್ಲ. ಇರುವವರ ಮನೆಯಿಂದ ಇಲ್ಲದವರು ಕೇಳಿ ಪಡೆದು ವಿವಾಹ ಶಾಸ್ತ್ರಗಳನ್ನು ನೆರವೇರಿಸುತ್ತಾರೆ.

ಮುಕ್ಕಾಲಿಯ ಮೇಲೆ ಕುಳಿತ ವಧು-ವರರಿಗೆ ಹಿರಿಯರು ಅಕ್ಷತೆ ಹಾಕಿ ಹರಸುತ್ತಾರೆ. ವಧು-ವರರ ಎರಡೂ ಕಡೆಯೂ ಉರಿಯುವ ಕುತ್ತುಂಬೊಳಿಚ ಅಥವಾ ತೂಗುಂಬೊಳಿಚ (ಮಂಗಲದೀಪ ಅಥವಾ ತೂಗುದೀಪ)ಗಳಿರುತ್ತವೆ. ಜೊತೆಗೆ ಎದುರಲ್ಲಿ ಹಾಲು ತುಂಬಿದ ಗಿಂಡಿಗಳು ಹಾಗೂ ಅಕ್ಕಿ ತುಂಬಿದ ತಟ್ಟೆಗಳಿರುತ್ತವೆ.

ಕೊಡವರ ವಿವಾಹದಲ್ಲಿ ಇತರ ಸಮುದಾಯದವರಂತೆ ವಧುವಿಗೆ ಮಾಂಗಲ್ಯ ಧಾರಣೆಯ ಪ್ರಾಮುಖ್ಯತೆಯಿರುವುದಿಲ್ಲ. ಇವರಲ್ಲಿ ವರ ವಧುವಿಗೆ ತಾಳಿ ಕಟ್ಟುವ ಪದ್ಧತಿ

ಆಚರಣೆಯಲ್ಲಿಲ್ಲವಾದುದರಿಂದ ವಧುವಿನ ತಾಯಿಯೇ 'ಪತ್ತಾಕ'ವೆಂಬ ಪದಕವಿರುವ ಆಭರಣದ ಮಾಲೆಯನ್ನು ಹಾಕುತ್ತಾಳೆ. ಈ ಅಂಶವೂ ಕೊಡವರ ವಿವಾಹಗಳ ವಿಶಿಷ್ಟತೆಗಳಲ್ಲೊಂದಾಗಿದೆ.

ಮುಹೂರ್ತ ಮಂಟಪದಲ್ಲಿ ಕುಳಿತಿರುವ ವಧು-ವರರಿಗೆ ಹಿರಿಯರು ಆರತಿ ಮಾಡಿ ಅಕ್ಷತೆ ಹಾಕಿ ಹಾರೈಸುತ್ತಾರೆ. ಅಲ್ಲಿಯೇ ಇರುವ ಹಾಲಿನ ಗಿಂಡಿಯಿಂದ ಇಬ್ಬರಿಗೂ ಹಾಲು ಕುಡಿಸುವ ಮೂಲಕವೂ ಆಶೀರ್ವದಿಸುತ್ತಾರೆ. ದಂಪತಿಗಳನ್ನು ಹರಸುವವರು ಹಿರಿಯವರಾಗಿದ್ದರೆ ಅವರ ಕಾಲುಗಳನ್ನು ಮುಟ್ಟಿ ನಮಸ್ಕರಿಸುತ್ತಾರೆ. ಹೀಗೆ ನಮಸ್ಕಾರ ಮಾಡುವ ಸಂಸ್ಕಾರವನ್ನು ಕೊಡವರಲ್ಲಿ ಈಗಲೂ ಗಮನಿಸಬಹುದು. ಎಷ್ಟೇ ಹಿರಿಯರಿರಲಿ ಅವರಿಗಿಂತ ಹಿರಿಯರಿಗೆ ಕಾಲು ಮುಟ್ಟಿ ನಮಸ್ಕಾರ ಮಾಡುವ ಸಂಸ್ಕಾರಯುತ ಬದುಕನ್ನು ಕೊಡವರು ಇಂದಿಗೂ ಅಳವಡಿಸಿಕೊಂಡಿದ್ದಾರೆ. ಮಹೂರ್ತ ಮುಗಿಯುವವರೆಗೂ ವಾದ್ಯ ಘೋಷಗಳು ಮೊಳಗುತ್ತಿರಬೇಕು. ಮುಹೂರ್ತ ಮುಗಿದ ನಂತರ ಬೋಜಕಾರ ಮತ್ತು ಬೋಜಕಾರಿ ವಧು-ವರರನ್ನು ನೆಲ್ಲಕ್ಕಿ ನಡುಬಾಡೆಗೆ ಕರೆದು ತರುತ್ತಾರೆ. ಅಲ್ಲಿಗೆ ಗ್ರಾಮದ ಬ್ರಾಹ್ಮಣ ಬಂದು ತಾನು ತಂದ ತೀರ್ಥ ಪ್ರಸಾದಗಳನ್ನು ಇಬ್ಬರಿಗೂ ನೀಡುತ್ತಾನೆ. ಪ್ರಸಾದ ಸ್ವೀಕರಿಸಿದ ದಂಪತಿಗಳು ಬ್ರಾಹ್ಮಣನಿಗೆ ಕಾಣಿಕೆ ನೀಡಿ ಸತ್ಕರಿಸುತ್ತಾರೆ.

**ದಂಪತಿ ಮುಹೂರ್ತ:** ಸಾಮಾನ್ಯವಾಗಿ ನೆಲ್ಲಕ್ಕಿ ನಡುಬಾಡೆಯಲ್ಲಿ ಈ ದಂಪತಿ ಮುಹೂರ್ತವನ್ನು ನಡೆಸಲಾಗುತ್ತದೆ. ಈ ಹಿಂದಿನ ಮುಹೂರ್ತದ ಸಂಪ್ರದಾಯ, ಶಾಸ್ತ್ರಗಳನ್ನೇ ಇಲ್ಲಿಯೂ ಅನುಸರಿಸಲಾಗುತ್ತದೆ. ಪೋಳಿಯದ ಗಿಂಡಿ ಹಾಲನ್ನು ವಧುವಿಗೆ ಕುಡಿಸಲಾಗುತ್ತದೆ. ವಧುವಿನ ಮನೆಯ ಗಿಂಡಿಯ ಹಾಲನ್ನು ವರನಿಗೆ ಕುಡಿಸಲಾಗುತ್ತದೆ. ವಧುವಿನ ತಾಯಿ 'ಪೊಂಬಣ'ವನ್ನು ವರನಿಗೆ ಕೊಟ್ಟು ಅಕ್ಕಿ ಹಾಕಿ ಹರಸುತ್ತಾಳೆ. ವರನ ಕಡೆಯ ಮುಖ್ಯಸ್ಥನೂ ಹಣವನ್ನು ನೀಡಿ ದಂಪತಿಗಳಿಗೆ ಹರಸುತ್ತಾನೆ. ಎಲ್ಲರೂ ಹಣವನ್ನೂ ನೀಡಿದ ನಂತರ ವರನ ಮುಖ್ಯಸ್ಥನು ಸ್ವಲ್ಪ ಅಕ್ಕಿಯನ್ನೂ ಮತ್ತು ಹಣವನ್ನು ತಳಿಯಕ್ಕಿ ಬೊಳಕಿಗೆ ಹಾಕಿ ಇದು 'ಪಲಯ ಪಣ' ಎನ್ನುತ್ತಾನೆ. ಎಲ್ಲರೂ ಹಣಕೊಟ್ಟ ನಂತರ ವರನನ್ನು ಬೋಜಕಾರನು ಕೈ ನೀಡಿ ಏಳಿಸುತ್ತಾನೆ. ವರನು ಎದ್ದು ವಧುವಿಗೆ ಅಕ್ಷತೆ ಹಾಕಿ. ಹಾಲು ಕುಡಿಸಿ, ಚೇಲಪಣವನ್ನು ನೀಡುತ್ತಾನೆ. ವಧುವು ವರನ ಪಾದಕ್ಕೆ ಮೂರು ಬಾರಿ ನಮಸ್ಕರಿಸಿ ಚೇಲಪಣವನ್ನು ಪಡೆದು ಎಡಗೈಯಲ್ಲಿ ಹಿಡಿದುಕೊಳ್ಳುತ್ತಾಳೆ. ವರನು ವಧುವಿನ ಬಲಗೈ ಹಿಡಿದು ಕುಳಿತಲ್ಲಿಂದ ಎಬ್ಬಿಸುತ್ತಾನೆ. ದಂಪತಿ ಮುಹೂರ್ತದ ಸಂದರ್ಭ ಕೊಂಬುಕೊಟ್ ವಾಲಗವಾಗುತ್ತಿದ್ದು, ನಾಲ್ಕು ಜನ ಕೊಡವರು ಮಂಗಲಪಾಟ್‌ನ್ನು ದುಡಿ ಬಾರಿಸುತ್ತಾ ಹಾಡುತ್ತಿರುತ್ತಾರೆ.

ಕೊಡವರ ಮದುವೆಗಳು ಸಾಮಾನ್ಯವಾಗಿ ವಧು ಮತ್ತು ವರನ ಮನೆಗಳಲ್ಲಿಯೇ ಶಾಸ್ತ್ರೋಕ್ತವಾಗಿ ನಡೆಯುತ್ತವೆ. ವಧುವಿಗೆ ಪತ್ತಾಕ ಮಾಲೆಯನ್ನು ಧರಿಸುವುದು ಕೂಡ ವಧುವಿನ ಮನೆಯಲ್ಲಿಯೇ ಎಂಬುದು ತಿಳಿದು ಬರುತ್ತದೆ.[೫೪] ಅದೇ ರೀತಿ ವರನ ಮನೆಯಲ್ಲಿಯೂ ಮದುವೆ ಶಾಸ್ತ್ರಗಳು ನಡೆದಿರುತ್ತವೆ. ಮುಹೂರ್ತದ ದಿನ ವರ ವಧುವಿನ ಮನೆಗೆ ಬಂದು

ಆತಿಥ್ಯವನ್ನು ಸ್ವೀಕರಿಸಿ ನಂತರ ನಡೆಯುವ ದಂಪತಿ ಮಹೂರ್ತದಲ್ಲಿ ವಧು ಮತ್ತು ವರರು ಅಕ್ಕ ಪಕ್ಕ ಮುಕ್ಕಾಲಿಯ ಮೇಲೆ ಕುಳಿತುಕೊಳ್ಳುತ್ತಾರೆ. ಈ ಸಮಯದಲ್ಲಿ ಹಿರಿಯರು ದಂಪತಿಗಳನ್ನು ಅಕ್ಷತೆ ಹಾಕಿ ಗಿಂಡಿ ಹಾಲನ್ನು ಕುಡಿಸಿ ಆಶೀರ್ವದಿಸುತ್ತಾರೆ. ಭಾರತೀಸುತರ ಹುಲಿಯ ಹಾಲಿನ ಮೇವು[೫೫] ಮತ್ತು ಬೆಳ್ಳಿ ಮೂಡಿತು[೫೬] ಕಾದಂಬರಿಗಳಲ್ಲಿ ಕೊಡವರ ಸಾಂಪ್ರದಾಯಿಕ ವಿವಾಹದ ವಿವರಗಳು ದೊರೆಯುತ್ತವೆ. ಆದರೆ ಬದಲಾದ ಸನ್ನಿವೇಶಗಳಲ್ಲಿ ಈಗ ಕೊಡವರ ಮದುವೆಗಳೂ ಒಂದೇ ದಿನ ಒಂದೇ ಕಡೆ ನಡೆಯುತ್ತಿವೆ. ಆದರೂ ತಮ್ಮ ಸಾಂಪ್ರದಾಯಿಕ ಪದ್ಧತಿಗಳನ್ನು ರೂಢಿಸಿಕೊಂಡು ಬರುತ್ತಿರುವುದು ಕೊಡವರ ವಿಶಿಷ್ಟತೆಯೆನ್ನಬಹುದು.

**ಬಾಳೆ ಬಿರುದು:** ಇದು ಕೊಡವರು ರೂಢಿಸಿ ಆಚರಿಸಿಕೊಂಡು ಬರುತ್ತಿರುವ ಒಂದು ವಿಶಿಷ್ಟ ಪದ್ಧತಿ. ವರನ ಕಡೆಯವರಿಗೆ ವಧುವಿನ ಕಡೆಯವರು ಗೌರವದ ಸಂಕೇತವಾಗಿ ಏರ್ಪಡಿಸುವಂತದ್ದು. ಇದು ಚಾರಿತ್ರಿಕವಾದ ಆಚರಣೆಯಾಗಿದ್ದು ಕ್ಷತ್ರಿಯರ ಜೀವನ ಕ್ರಮ ಇದರಲ್ಲಿ ಅಡಕವಾಗಿದೆ[೫೭] ಎಂಬ ಅಭಿಪ್ರಾಯವಿದೆ. ಪುರಾಣ ಕಾವ್ಯಗಳಲ್ಲಿ ಸ್ವಯಂವರಗಳು ವರನ ಶೌರ್ಯ ಪರಾಕ್ರಮಗಳನ್ನು ತಿಳಿಯಲು ನಡೆಯುತ್ತಿದ್ದುದರ ಉದಾಹರಣೆಯನ್ನು ನೀಡುತ್ತಾ ಕೊಡವರಲ್ಲಿಯೂ ಇದು ಮುಂದುವರೆದಿರಬಹುದು ಎನ್ನಲಾಗಿದೆ. ಅದರೆ ಕೊಡವರಲ್ಲಿ ಮದುವೆ ಗಂಡಿಗೆ ಮಾತ್ರವಲ್ಲದೆ ಗಂಡಿನ ಕಡೆಯ ಕೆಲವು ಹಿರಿಯರಿಗೂ ಬಾಳೆ ಕತ್ತರಿಸಲು ಅವಕಾಶವಿರುವುದರಿಂದ ಇದನ್ನು ಕೇವಲ ಗೌರವದ ಸಂಕೇತವೆಂದು ಹೇಳಬಹುದು. ಕನ್ನಡದಲ್ಲಿ 'ಬಾಳೆ ಮರ ಕಡಿಯಲು ನನ್ನ ಗಂಡ ಶೂರ' ಎಂಬ ಗಾದೆ ಮಾತೊಂದಿದೆ. ಹಾಗಾಗಿ ಬಾಳೆ ಬಿರುದು ಗೌರವ ಸೂಚಕವೇ ಹೊರತು ಶೌರ್ಯದ ಸಂಕೇತವಲ್ಲವೆನ್ನಬಹುದು. ಕೊಡವರು ಶೌರ್ಯ ಪ್ರದರ್ಶನದಲ್ಲಿ ನಿಪುಣರು ಎಂಬುದು ತಿಳಿದಿರುವ ವಿಷಯವಾದರೂ ಬಾಳೆ ಬಿರುದು ಶೌರ್ಯದ ಸಂಕೇತವೆಂದು ಹೇಳಲು ಬರುವುದಿಲ್ಲ.

ಈ ಹಿಂದೆ ವರನ ಕಡೆಯವರು ವಧುವಿನ ಮನೆಗೆ ದಿಬ್ಬಣದೊಂದಿಗೆ ಬರುವಾಗ ತಮ್ಮ ಮನೆಗಳಿಂದ ಅನೇಕ ಆಹಾರ ಸಾಮಾಗ್ರಿಗಳನ್ನು ತಂದುಕೊಡುತ್ತಿದ್ದರು. ಇದಕ್ಕೆ 'ಕೇಟಾಮೆ' ಎಂದು ಕರೆಯುತ್ತಿದ್ದರು. ಇತ್ತೀಚೆಗೆ ಈ ಸಂಪ್ರದಾಯ ಕಡಿಮೆಯಾಗಿದೆ. ಹೀಗೆ ಕೇಟಾಮೆ ತಂದುಕೊಟ್ಟವರಿಗೆ ಬಾಳೆ ಬಿರುದಿನ ಮೂಲಕ ಸ್ವಾಗತಿಸುತ್ತಿದ್ದರು. ಇದು ಕೊಡವರಲ್ಲಿ ಈಗಲೂ ಆಚರಣೆಯಲ್ಲಿದೆ. ದಪ್ಪವಾದ ಬಾಳೆ ಕಂಬಗಳನ್ನು ಮೂರು ಅಡಿಗಳಷ್ಟಿರುವಂತೆ ಅಡಿಯಿಂದ ಮೇಲಕ್ಕೆ ಕತ್ತರಿಸಿ ತಂದು ನೆಲಕ್ಕೆ ಗೂಟ ಹೊಡೆದು ಅಥವಾ ಇತ್ತೀಚೆಗೆ ಸಿದ್ಧವಾಗಿಟ್ಟುಕೊಂಡಿರುವ ಕಬ್ಬಿಣದ ಕಂಬಗಳಿಗೆ ಚುಚ್ಚುತ್ತಾರೆ. ಬಾಳೆ ತುಂಡಿನ ಮೇಲ್ಭಾಗವನ್ನು ಬಾಳೆ ಪಟ್ಟೆಯಿಂದ ಕಟ್ಟಿ ಅದರ ಮೇಲೆ ಹೂಗಳನ್ನಿಟ್ಟು ಅಲಂಕಾರ ಮಾಡುತ್ತಾರೆ. ನಂತರ ಆಗಮಿಸಿದ ಬೀಗರನ್ನು ವಾದ್ಯಘೋಷಗಳೊಂದಿಗೆ ಬಾಳೆ ಕಂಬದ ಹತ್ತಿರ ಕರೆತರುತ್ತಾರೆ. ಈ ಸಮಯದಲ್ಲಿಯೂ ಬಟ್ಟೆ ಪಾಟ್(ದಾರಿ ಹಾಡು) ಹಾಡಲಾಗುತ್ತದೆ. 'ಅರುವ'ನು ಎಲೆ ಅಡಿಕೆಗಳನ್ನು ನೀಡಿ ಸ್ವಾಗತಿಸಿ, ಬಂದ ನೆಂಟರನ್ನು ಬಾಳೆ ಕಂಬಗಳನ್ನು ಕತ್ತರಿಸುವಂತೆ ಕೇಳಿಕೊಳ್ಳುತ್ತಾನೆ. ಅವರು ದೇವರನ್ನು ಪ್ರಾರ್ಥಿಸುತ್ತಾ ತಲೆಯ ಮೇಲಿನ ರುಮಾಲನ್ನು ತೆಗೆದಿರಿಸಿ ಅಲ್ಲಿ ನೆಡಲಾದ ಬಾಳೆ ಕಂಬಗಳನ್ನು

ಒಂದೊಂದಾಗಿ ಕತ್ತರಿಸುತ್ತಾರೆ. ಬಾಳೆ ಬಿರುದು ನೀಡುವಾಗ ಕೆಲವೊಂದು ನೀತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು. ಬಾಳೆಯನ್ನು ಕಡಿಯುವಾಗ ಅದು ತುಂಡಾಗದಿದ್ದಲ್ಲಿ ಇನ್ನೊಮ್ಮೆ ಕಡಿಯಬಾರದು. ಆ ಬಾಳೆ ದಿಂಡನ್ನು ಕತ್ತಿಯಿಂದ ದೂಡಿ ಕೆಳಗೆ ಉರುಳಿಸಬೇಕಾಗುತ್ತದೆ. ಬಾಳೆಯನ್ನು ಮೇಲಿನಿಂದ ಕೆಳಮುಖವಾಗಿ ಕಡಿಯಬೇಕೇ ಹೊರತು ಯಾವುದೇ ಕಾರಣಕ್ಕೂ ಕೆಳಗಿನಿಂದ ಮೇಲ್ಮುಖವಾಗಿಯೂ ಮತ್ತು ಎಡಬದಿಯಿಂದಲೂ ಕಡಿಯಬಾರದು. ಈ ಸಮಯದಲ್ಲಿ ಹಾಡುವ ಹಾಡು ಈ ರೀತಿಯಿದೆ.

"ಎಲ್ಲಾ ಬಂಧುಗಳು
ಅಂಗನೂ ಅರುವನೂ
ಎರಡು ಕೈ ಸೇರಿಸಿ
ಕೊಂಬುವಾದ್ಯ ಹಾಡಾಗಿ
ಬಿರುಸಿನಿಂದ ಬಂದು
ಅಯ್ಯಣ್ಣನೆಂಬ ಧೀರ
ಕಣ್ಣಿನಲ್ಲೇ ಲೆಕ್ಕಹಾಕಿ
ಗೌರವ ಸ್ವೀಕರಿಸಿ
ಎಲ್ಲಾ ಪದ್ಧತಿಯಂತೆ
ಎರಡು ಕಡೆಯ ಊರವರು
ಸಾಲಿನಲ್ಲಿ ನಿಂತು
ಬಾಳೆಯನ್ನು ಕಡಿದರು".[೨೮]

ಇತ್ತೀಚಿನ ದಿನಗಳಲ್ಲಿ ಕೊಡವರ ಮದುವೆಗಳು ಮನೆಯ ಸಮೀಪ ಅಥವಾ ಮುಂದೆ ನಡೆಯುವುದು ಅಪರೂಪ. ಏಕೆಂದರೆ ಇಂದು ಆಡಂಬರದ ಹೆಸರಿನಲ್ಲಿ ನಗರ ಪ್ರದೇಶ ಗಳಲ್ಲಿರುವ ಪ್ರತಿಷ್ಠಿತ ಕಲ್ಯಾಣ ಮಂಟಪಗಳಲ್ಲಿ ನಡೆಯುತ್ತಿವೆ. ಇಂಥ ಸಂದರ್ಭಗಳಲ್ಲಿಯೂ ಕೊಡವರು ಬಾಳೆ ಬಿರುದುಗಳನ್ನು ಏರ್ಪಡಿಸುವಂತದ್ದು ವಿಶೇಷವಾಗಿದೆ. ಕಲ್ಯಾಣ ಮಂಟಪದ ಎದುರಿನಲ್ಲೇ ತಮ್ಮ ಬಂಧುಗಳಿಗೆ ಈ ಗೌರವವನ್ನು ಒದಗಿಸಿಕೊಡುತ್ತಾರೆ.

**ಕೂಡಾವಳಿ ಮದುವೆ:** ಮರು ಮದುವೆಯಾಗುವುದನ್ನು ಕೊಡವರು 'ಕೂಡಾವಳಿ ಮದುವೆ' ಎಂದು ಕರೆದುಕೊಂಡಿದ್ದಾರೆ. ಈ ವಿವಾಹ ಪದ್ಧತಿಯಲ್ಲಿ ಮೂರು ಪ್ರಕಾರಗಳಿವೆ. ಅವುಗಳಲ್ಲಿ 'ಮೊದಲನೆಯದು ಗಂಡ ಸತ್ತು ಹೋದ ನಂತರ ವಿಧವೆಯನ್ನು ಸತ್ತ ಗಂಡನ ಸಹೋದರ ಇಲ್ಲವೇ ಆ ಕುಟುಂಬದ ಇತರರನ್ನು ಮದುವೆಯಾಗುವುದು. ಎರಡನೆಯದು ಬೇರೆ ಕುಟುಂಬದ ಇತರರನ್ನು ಮದುವೆಯಾಗುವುದು. ಮೂರನೆಯದು ಮದುವೆಯಾದವನು ಹೆಂಡತಿಯನ್ನು ತ್ಯಜಿಸಿದಾಗ ಆಕೆಯನ್ನು ಮತ್ತೊಬ್ಬ ಮದುವೆಯಾಗುವುದು'.[೨೯] ವಿಧವೆಯಾಗಿ ಅಥವಾ

ಪರಿತ್ಯಕ್ತೆಯಾಗಿ ನೋವಿನಲ್ಲಿಯೇ ಬದುಕನ್ನು ಕಳೆಯುವ ಎಷ್ಟೋ ಹೆಣ್ಣು ಮಕ್ಕಳಿಗೆ ಈ ಪದ್ಧತಿ ಅನುಕೂಲವಾಗಿದೆಯೆಂದೇ ವಿಶ್ಲೇಷಿಸಲಾಗಿದೆ.

ಇದು ಕೊಡಗು ಸೇರಿದಂತೆ ಇತರ ಭಾಗಗಳಲ್ಲಿಯೂ ಈ ಪದ್ಧತಿ ಕಂಡು ಬರುತ್ತದೆಯಾದರೂ ಇಲ್ಲಿ ಎಲ್ಲರಲ್ಲೂ ಕುತೂಹಲ ಕೆರಳಿಸಿರುವ ವಿಚಾರವೆಂದರೆ ಕೂಡಾವಳಿಯ ಮೊದಲ ಪ್ರಕಾರವಾದ ಗಂಡ ಸತ್ತಮೇಲೆ ಅವನ ಸಹೋದರನಲ್ಲೊಬ್ಬ ಅಥವಾ ದಾಯಾದಿಗಳಲ್ಲೊಬ್ಬನನ್ನು ಮದುವೆ ಮಾಡಿಕೊಳ್ಳುವುದು. ಈ ಪದ್ಧತಿಯಲ್ಲಿ ಕನ್ನಿಮಂಗಲದಂತೆ ಗಂಡಿಗೆ ಮುಹೂರ್ತದ ಎಲ್ಲಾ ಗೌರವಗಳಿರುತ್ತವೆ. ಅದರೆ ಹೆಣ್ಣಿಗೆ ಮರು ಮದುವೆಯಾಗುತ್ತಿರುವುದರಿಂದ ಅವಳ ಕನ್ಯತ್ವ ಕಳೆದಿರುತ್ತದೆ ಎಂಬ ಕಾರಣದಿಂದ ಅವಳು ಈ ಮುಹೂರ್ತದ ಗೌರವದಿಂದ ವಂಚಿತಳಾಗುತ್ತಾಳೆ. ಪುರುಷನಿಗೂ ಇದು ಮರುಮದುವೆಯೇ ಆಗಿರುತ್ತದೆ. ಎಲ್ಲಾ ಸಮಾಜಗಳಲ್ಲಿಯೂ ಸಾರ್ವತ್ರಿಕವಾಗಿ ಹೆಣ್ಣು ಇಂಥ ಶೋಷಣೆಗೊಳಗಾಗುತ್ತಲೇ ಇದ್ದಾಳೆ.

ಎರಡನೇ ವಿಧದ ಕೂಡಾವಳಿ ಕುಟುಂಬದ ಹೊರಗಿನವರೊಡನೆಯೂ ನೆರವೇರುತ್ತದೆ. ಈ ಪದ್ಧತಿಯಲ್ಲಿ ಮೊದಲಿಗೆ ಮೊದಲ ಗಂಡನ ಮನೆಯ ಸಂಬಂಧವನ್ನು ಶಾಸ್ತ್ರೋಕ್ತವಾಗಿ ತಪ್ಪಿಸಲಾಗುತ್ತದೆ. ಈ ವಿಧಾನಕ್ಕೆ 'ಕಲ್ಲ್‌ಮರ ಕೈಪ್' ಎಂದು ಕರೆಯಲಾಗುತ್ತದೆ. ಇಂಥ ಕೂಡಾವಳಿ ಮದುವೆಯಾಗಲು ಗಂಡ ಸತ್ತು ಕನಿಷ್ಠ ಒಂದು ವರ್ಷವಾದರೂ ಕಳೆದಿರಬೇಕಾಗಿರುತ್ತದೆ.

ಮೂರನೇ ಪ್ರಕಾರದ ಕೂಡಾವಳಿಯಲ್ಲಿ ಮದುವೆಯಾದ ಹೆಣ್ಣನ್ನು ಗಂಡನು ಬದುಕಿದ್ದೂ ಆತನು ಹೆಂಡತಿಯನ್ನು ತ್ಯಜಿಸಿದ್ದರೆ ಆಕೆಯನ್ನು ಬೇರೊಬ್ಬ ಕೂಡಾವಳಿ ಮಾಡಿಕೊಳ್ಳುವಂತದ್ದು. ಈ ಮಾದರಿಯಲ್ಲಿ ಕುಟುಂಬದ ಹೊರಗಿನವರೊಂದಿಗೆ ವಿವಾಹ ನಡೆಯುತ್ತದೆ. ಇಲ್ಲಿಯೂ ಮೊದಲ ಗಂಡನ ಸಂಬಂಧವನ್ನು ಸಂಪೂರ್ಣವಾಗಿ ಕಡಿದುಕೊಂಡ ನಂತರವೇ ಈ ವಿವಾಹ ಹೆಣ್ಣಿನ ಮನೆಯಲ್ಲಿ ನಡೆಯುತ್ತದೆ.

**ಕೆಮಿಕುತ್ತಿ ಮಂಗಲ(ಕಿವಿಚುಚ್ಚುವ ಮದುವೆ):** ಮನುಷ್ಯ ತನ್ನ ಬದುಕಿನುದ್ದಕ್ಕೂ ಒಂದಿಲ್ಲೊಂದು ಸಂಪ್ರದಾಯ, ಪದ್ಧತಿಗಳನ್ನು ಅಳವಡಿಸಿಕೊಂಡು ಸ್ವಾರಸ್ಯಕರ ಹಾಗೂ ಆಕರ್ಷಕವಾದ ಬಾಳುವೆಯನ್ನು ನಡೆಸುತ್ತಿದ್ದಾನೆ. ಬಾಲ್ಯದಿಂದ ಹಿಡಿದು ಮರಣದವರೆಗೂ ಹಲವಾರು ಹಂತಗಳ ಮೂಲಕ ಕೆಲವು ಶಾಸ್ತ್ರ, ವಿದಿ-ವಿಧಾನಗಳನ್ನು ಅಳವಡಿಸಿಕೊಳ್ಳುತ್ತಾನೆ. ಅಂತೆಯೇ ಕೊಡವರೂ ಕೂಡ ಅನೇಕ ಕ್ರಮಗಳನ್ನು ರೂಢಿಸಿಕೊಂಡಿದ್ದಾರೆ. ಅಂಥವುಗಳಲ್ಲಿ ಕೆಮಿಕುತ್ತಿ ಮಂಗಲವೂ ಒಂದು. ಇದನ್ನು ಇವರು ವಿವಾಹವೆಂದೇ ಪರಿಗಣಿಸಿಕೊಂಡಿದ್ದಾರೆ. ಈ ವಿವಾಹ ಪದ್ಧತಿ ಗಂಡು ಮಕ್ಕಳಿಗೆ ಮಾತ್ರ ಸಂಬಂಧಿಸಿದುದಾಗಿದೆ. ಹೆಣ್ಣು ಮಕ್ಕಳಿಗೆ ಕಿವಿ ಚುಚ್ಚುವುದು ಪರಂಪರೆಯ ಒಂದು ಭಾಗವಾಗಿರುವುದರಿಂದ ಅದು ವಿಶೇಷವೂ ಅಲ್ಲ ಸಂಭ್ರಮವೂ ಅಲ್ಲ. ಕೊಡವರಲ್ಲಿ ಗಂಡು ಮಕ್ಕಳಿಗೆ ಕಿವಿ ಚುಚ್ಚುವುದನ್ನು ಕಡ್ಡಾಯವಾಗಿ ಅನುಸರಿಸುತ್ತಿದ್ದಾರೆ.

ಚುಚ್ಚಿಸಿಕೊಂಡಿಲ್ಲವಾದರೆ ಆ ಹುಡುಗನಿಗೆ ಯಾರೂ ಹೆಣ್ಣು ಕೊಡುವುದಿಲ್ಲವೆಂಬ ನಂಬಿಕೆಯಿರುವುದರಿಂದ ಈ ಶಾಸ್ತ್ರಕ್ಕೆ ಪ್ರಾಮುಖ್ಯವಿದೆ. ಒಂದು ವೇಳೆ ಕಿವಿ ಚುಚ್ಚದಿರುವ ವ್ಯಕ್ತಿ ಅಕಾಲಿವಾಗಿ ಮರಣ ಹೊಂದಿದರೆ ಆತನ ಶವಕ್ಕಾದರು ಕಿವಿ ಚುಚ್ಚಿ ನಂತರ ಸಂಸ್ಕಾರ ಮಾಡುವ ವಿಧಾನ ಕೊಡವರು ತಮ್ಮ ಅಚರಣೆಗಳಿಗೆ ನೀಡಿರುವ ಪ್ರಾಮುಖ್ಯತೆಯನ್ನು ವಿವರಿಸುತ್ತದೆ.

ಈ ಸಂದರ್ಭದಲ್ಲಿ ತಮ್ಮ ಸಂಬಂಧಿಕರಿಗೆ ಊರವರಿಗೆ, ನೆರೆಹೊರೆಯವರಿಗೆ ಆಹ್ವಾನವಿರುತ್ತದೆ. ಎಲ್ಲಾ ಸಿದ್ಧತೆಗಳೂ ಕನ್ನಿಮಂಗಲದಂತೆಯೇ ಶಾಸ್ತ್ರೋಕ್ತವಾಗಿ ನಡೆಯುತ್ತವೆ. ವಿವಾಹದ ಸಂದರ್ಭದ ಹಾಡನ್ನು ಹಾಡುತ್ತಾ ಹುಡುಗನನ್ನು ಮುಹೂರ್ತಕ್ಕೆ ಕೂರಿಸುತ್ತಾರೆ. ಈ ಸಮಯದಲ್ಲಿ ಹುಡುಗನ ಹೆಗಲಿನ ಮೇಲೆ ಎರಡು ಕೆಂಪು ವಸ್ತ್ರಗಳನ್ನು ಹಾಕಲಾಗುತ್ತದೆ. ನಂತರ ಅಕ್ಕಸಾಲಿಗನು ಶಾಸ್ತ್ರೋಕ್ತವಾಗಿ ಕಿವಿ ಚುಚ್ಚುವ ಕಾರ್ಯವನ್ನು ನೆರವೇರಿಸಿ 'ಪತ್ತೊಂಟಿ ಕಡಕ್'ನ್ನು(ಓಲೆ) ಹಾಕುತ್ತಾನೆ. ಇಲ್ಲಿಗೆ ಕೆಮಿಕುತ್ತಿ ಮಂಗಲ ಕಾರ್ಯ ಮುಗಿಯುತ್ತದೆ. ನಂತರ ಅಕ್ಕಸಾಲಿಗನಿಗೆ ಗೌರವದ ಸೂಚಕವಾಗಿ ಎರಡು ಕೆಂಪು ವಸ್ತ್ರ, ಅಕ್ಕಿ, ತೆಂಗಿನಕಾಯಿ, ಬಾಳೆಹಣ್ಣು ಮತ್ತು ಹಣವನ್ನು ನೀಡಿ ಸತ್ಕರಿಸಿ ಕಳುಹಿಸಿಕೊಡುತ್ತಾರೆ.

ಕೆಲವು ಸಮುದಾಯಗಳಲ್ಲಿ ಗಂಡು ಮಕ್ಕಳಿಗೆ 'ಉಪನಯನ'ವೆಂಬ ಸಂಸ್ಕಾರವನ್ನು ಮಾಡುವುದನ್ನು ಇಲ್ಲಿ ಸ್ಮರಿಸಬಹುದು. ಇದಕ್ಕೂ ತಮ್ಮ ಬಂಧುಗಳು ಮತ್ತು ಸ್ನೇಹಿತರಿಗೆ ಆಹ್ವಾನಿಸುವುದಿದೆ. ಇಂತದ್ದೇ ಒಂದು ಸಂಪ್ರದಾಯ ಕೆಮಿಕುತ್ತಿ ಮಂಗಲದ ರೂಪದಲ್ಲಿ ಕೊಡವರಲ್ಲಿ ಆಚರಿಸಲ್ಪಡುತ್ತಿರಬಹುದು.

**ಒಕ್ಕ ಪರಿಜೆ ಮಂಗಲ:** ಕುಟುಂಬವೊಂದರಲ್ಲಿ ಗಂಡು ಸಂತಾನವಿಲ್ಲದೆ ಅಥವಾ ಇದ್ದೂ ವಿವಾಹಕ್ಕೂ ಮೊದಲೇ ಮರಣಿಸಿದರೆ ಅ ಕುಟುಂಬ ವಂಶೋದ್ಧಾರಕನಿಲ್ಲದೆ ಇಡೀ ವಂಶ ಅಲ್ಲಿಗೆ ಮುಗಿಯುತ್ತದೆ ಎಂಬ ನಂಬಿಕೆ ಸಾಮಾನ್ಯವಾಗಿ ಭಾರತೀಯ ಸಂಪ್ರದಾಯಗಳಲ್ಲಿರುವುದು ಗೊತ್ತಿರುವ ವಿಷಯ. ಇದು ಕೊಡವರನ್ನೂ ಬಿಟ್ಟಿಲ್ಲ. ಆ ಕಾರಣದಿಂದ ಇವರು 'ಒಕ್ಕ ಪರಿಜೆ' ಎಂಬ ವಿವಾಹ ಕ್ರಮವೊಂದನ್ನು ಅಳವಡಿಸಿಕೊಂಡಿದ್ದಾರೆ. ಇದನ್ನು 'ಕುತ್ತಿಕ್ ನಿಪ್ಪೊ' ಎಂದು ಕರೆಯುತ್ತಾರೆ. ಈ ವಿವಾಹದ ಪ್ರಕಾರ ಗಂಡು ಮಕ್ಕಳಿಲ್ಲದಿರುವ ಕುಟುಂಬದವರು ತಮ್ಮ ಮಗಳಿಗೆ ಮದುವೆ ಮಾಡಿಕೊಂಡು ಆತನನ್ನು ತಮ್ಮ ಮನೆಯಲ್ಲಿಯೇ ಉಳಿಸಿಕೊಳ್ಳುತ್ತಾರೆ. ಅಲ್ಲದೆ ಹೆಂಡತಿಯ ಕುಟುಂಬದ ಹೆಸರಿನೊಂದಿಗೇ ಗುರುತಿಸಿಕೊಳ್ಳಬೇಕಾಗುತ್ತದೆ. ಇಲ್ಲಿ ಅಳಿಯನೆ ಮನೆಯ ವಾರಸುದಾರನಾಗಿರುತ್ತಾನೆ. ಆದರೆ ಈತನಿಂದ ಜನಿಸಿದ ಮಕ್ಕಳು ಹೆಂಡತಿಯ ಕುಟುಂಬದ ನಿಯಂತ್ರಣಕ್ಕೊಳಪಡುತ್ತಾರೆ. ತಂದೆ ಮನೆಯ ಆಸ್ತಿಯ ಮೇಲೆ ಯಾವ ರೀತಿಯ ಹಕ್ಕು ಕೂಡ ಈ ಮಕ್ಕಳಿಗಿರುವುದಿಲ್ಲ. ಈ ಕ್ರಮ ಕೊಡವರಲ್ಲಿ ಮಾತ್ರವಲ್ಲದೆ ಗಂಡು ಸಂತಾನವಿಲ್ಲದ ಕುಟುಂಬದವರು ತಮ್ಮ ಮಗಳಿಗೆ ಮದುವೆ ಮಾಡಿಕೊಂಡು, ಅಳಿಯನನ್ನು ತಮ್ಮ ಮನೆಯಲ್ಲಿಯೇ ಉಳಿಸಿಕೊಂಡಿರುವ ನಿದರ್ಶನಗಳು ಇತರ ಸಮುದಾಯಗಳಲ್ಲೂ ಇವೆ.

ಆದರೆ ಕೊಡವರು ಅಳಿಯನನ್ನು ಮನೆಯ ವಾರಸುದಾರನಾಗಿ ಮಾಡಿಕೊಂಡಂತೆ ಬೇರೆ ಕುಟುಂಬಗಳಲ್ಲಿ ಆತನಿಗೆ ಯಾವುದೇ ಅಧಿಕಾರಗಳನ್ನು ವಹಿಸದಿರುವುದನ್ನು ಕಾಣಬಹುದು.

**ಮಕ್ಕ ಪರಿಜೆ ಮಂಗಲ:** ಕೇವಲ ಮಕ್ಕಳನ್ನು ಪಡೆಯುವುದಕ್ಕೋಸ್ಕರ ಏರ್ಪಾಟಾಗಿರುವ ವಿವಾಹ ಸಂಬಂಧವಿದು. ಒಂದು ಒಕ್ಕದಲ್ಲಿ ಗಂಡು ಮಕ್ಕಳಿಲ್ಲದೆ ಕೇವಲ ಮಗಳು ಮಾತ್ರವಿದ್ದು ಆಕೆಯನ್ನು ಯಾರೂ ಒಕ್ಕ ಪರಿಜೆ ಮಂಗಲವಾಗಲು ಒಪ್ಪದಿದ್ದರೆ ಆ ಸಂದರ್ಭದಲ್ಲಿ ಆಕೆಗೆ ಮಕ್ಕ ಪರಿಜೆಯನ್ನು ಏರ್ಪಾಡು ಮಾಡುತ್ತಾರೆ. ವಿವಾಹಿತನೊಬ್ಬನಿಗೆ ಹೆಂಡತಿಯಿದ್ದರೂ ಅವನಿಗೆ ಮಕ್ಕ ಪರಿಜೆಗೆ ಅವಕಾಶವಿದೆ. ಈತನು ಈ ವಿವಾಹ ಪದ್ಧತಿ ಪ್ರಕಾರ ವಿವಾಹವಾದ ಹೆಂಡತಿಯ ಮನೆಯಲ್ಲಿಯೇ ಇರಬೇಕಾದ ಅಗತ್ಯವಿರುವುದಿಲ್ಲ. ಆಗಾಗ ಬಂದು ಹೋಗುತ್ತಿರಬಹುದು. ಇದಲ್ಲದೆ ಹೆಣ್ಣಿನ ಮನೆಯ ಆಸ್ತಿ ಮತ್ತಿತರ ವಿಷಯಗಳಲ್ಲಿ ಗಂಡಿಗೆ ಯಾವುದೇ ರೀತಿಯ ಹಕ್ಕಿರುವುದಿಲ್ಲ. ಇದು ಕೂಡಾವಳಿಯಂತೆಯೇ ಕಂಡರೂ ಇಲ್ಲಿ ಮಕ್ಕಳನ್ನು ಪಡೆಯುವುದೇ ಪ್ರಮುಖವಾಗಿರುತ್ತದೆ.

ಈ ವಿವಾಹ ಪದ್ಧತಿಯಲ್ಲಿ ಕೇವಲ ಮಕ್ಕಳನ್ನು ಕರುಣಿಸುವುದೇ ಮುಖ್ಯವಾಗಿದ್ದು ಇತರೆ ಯಾವುದೇ ಸಾಮಾಜಿಕ ಕಟ್ಟುಪಾಡುಗಳಿಲ್ಲದಿರುವುದನ್ನು ಕಂಡಾಗ ಈ ಪದ್ಧತಿಗೆ ಜನಮನ್ನಣೆ ದೊರೆತಿದ್ದಾದರೂ ಹೇಗೆ? ಸಮಾಜ ಸ್ವೀಕಾರಾರ್ಹವಾದುದು ಹೇಗೆ? ಎಂಬ ಪ್ರಶ್ನೆಗಳು ಕಾಡುತ್ತವೆ. ಸಮಾಜದಲ್ಲಿ ಯಾವುದೇ ಕಟ್ಟುಪಾಡುಗಳು ರೂಪಿತಗೊಂಡರೂ ಅದು ಮೇಲ್ವರ್ಗದವರಿಂದ ಮತ್ತು ಅದನ್ನು ಉಳಿದವರ ಮೇಲೆ ಒತ್ತಾಯವಾಗಿಯಾದರೂ ಹೇರಲಾಗುತ್ತದೆ ಎಂಬ ವಿಚಾರಗಳು ಪರಂಪರೆಯಿಂದಲೇ ಬಂದಿರುವುದನ್ನು ಇಲ್ಲಿ ಗಮನಿಸ ಬೇಕಾಗುತ್ತದೆ. ಹಾಗಾಗಿ ಇಲ್ಲಿಯೂ ಕೊಡವರು ರೂಪಿಸಿಕೊಂಡಿರುವ ಈ ಮಕ್ಕ ಪರಿಜೆಗೆ ಸಾಮಾಜಿಕ ಮನ್ನಣೆಯಿರುವುದು ಸ್ಪಷ್ಟವಾಗುತ್ತದೆ.

ಕೊಡವರಲ್ಲಿ ಕಂಡುಬರುತ್ತಿದ್ದ ಈ ಮಕ್ಕಪರಿಜೆಗೆ ಮಹಾಭಾರತದ ಪ್ರಭಾವವಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ.[೬೦] ಸುಗಂಧಿಯ ಮಕ್ಕಳ ಮರಣದ ನಂತರ ಅಂಬೆ ಮತ್ತು ಅಂಬಾಲಿಕೆಯರಿಗೆ ವೇದವ್ಯಾಸರಿಂದ ಗರ್ಭಧಾನ ಮಾಡಿಸಿ ಮಕ್ಕಳನ್ನು ಪಡೆದ ಪ್ರಸಂಗವನ್ನು ಕೊಡವರು ಅನುಸರಿಸುತ್ತಿದ್ದಾರೆ ಎಂದೇ ಹೇಳಲಾಗುತ್ತಿದೆ.

ಆದರೂ ಈ ವಿವಾಹ ಪದ್ಧತಿಯನ್ನು ಒಪ್ಪಿಕೊಳ್ಳುವುದು ಹೇಗೆ ಎಂಬ ಪ್ರಶ್ನೆಯೂ ಕಾಡುತ್ತದೆ. ಒಬ್ಬ ಕನ್ಯೆಯನ್ನು ಹೀಗೆ ಮಕ್ಕಳನ್ನು ಪಡೆದುಕೊಳ್ಳುವುದಕ್ಕಾಗಿ ವಿವಾಹಿತ ಪುರುಷನೊಬ್ಬನಿಗೆ ಮದುವೆ ಮಾಡಿಕೊಟ್ಟು ಆಗಾಗ ಬಂದು ಹೋಗುವ ಗಂಡನಿಗೆ ಕೊಡುವುದಕ್ಕಿಂತ ಒಬ್ಬ ಯೋಗ್ಯ ವರನಿಗೆ ಗೌರವಾದರಗಳಿಂದ ಶಾಸ್ತ್ರೋಕ್ತವಾಗಿ ಧಾರೆ ಎರೆದುಕೊಟ್ಟು ಅವಳಿಗೆ ಜನಿಸಿದ ಮಗನಿಗೆ ತನ್ನ ಮನೆಯ ಸಮಸ್ತ ಹಕ್ಕನ್ನೂ ನೀಡುವುದು ಉತ್ತಮವೆನಿಸುತ್ತದೆ. ಇತ್ತೀಚೆಗೆ ಒಕ್ಕ ಪರಿಜೆ ಮತ್ತು ಮಕ್ಕ ಪರಿಜೆ ಮಂಗಲಗಳು ಆಚರಣೆಯಲ್ಲಿಲ್ಲದಿರುವುದನ್ನು ಗುರುತಿಸಲಾಗಿದೆ.

ಕೊಡವರಲ್ಲಿ ಅಂತರ್ಜಾತಿ ವಿವಾಹಗಳು ಕಂಡುಬರುವುದಿಲ್ಲ. ಆ ಕಾಲದಲ್ಲಿ ಅನುಸರಿಸುತ್ತಿದ್ದ ಕಟ್ಟುಪಾಡುಗಳಲ್ಲಿ ಇದೂ ಒಂದಾಗಿದೆ. ಕೊಡಗಿನ ಜನರು ತಮ್ಮ ಕುಲಾಚಾರಾದಿ ಪದ್ಧತಿ ಉಳಿಸಿಕೊಂಡು ಬರಬೇಕು. ಆಯಾ ಜಾತಿಗಳವರು ಸ್ವಕೀಯರನ್ನೇ ಮದುವೆಯಾಗಬೇಕು. ತಪ್ಪಿದರೆ ಉಗ್ರ ಶಿಕ್ಷೆಗೆ ಗುರಿಯಾಗಬೇಕಾಗುತ್ತದೆ ಎಂದು ಲಿಂಗರಾಜ ದೊರೆ 'ಹುಕುಂನಾಮೆ' ಹೊರಡಿಸಿದ್ದನು[೬೧] ಎಂಬ ಮಾಹಿತಿ ದೊರೆಯುತ್ತದೆ. ಬಹುಶಃ ಇಂಥ ಕಟ್ಟುಪಾಡುಗಳು ಅಂತರ್ಜಾತೀಯ ವಿವಾಹಗಳಿಗೆ ಕಡಿವಾಣವಾಗಿರಬೇಕು ಎನಿಸುತ್ತದೆ. ಆದರೂ ಆ ಕಾಲದಲ್ಲಿ ಬೇರೆ ಬೇರೆ ಜಾತಿಗಳ ನಡುವೆ ಪ್ರೀತಿ, ಪ್ರೇಮಗಳು ಅಂಕುರಿಸಿ ಪರಸ್ಪರ ಪ್ರೀತಿಸಿರುವ ಅನೇಕ ನಿದರ್ಶನಗಳು ಸಿಗುತ್ತವೆ.

ಮಲೆಯಾಳಿ ರಾಮಕುಣಿಯನ್ ಮಗಳು ಮತ್ತು ಕೊಡಗಿನ ಜಮಾದಾರ ಮಾಚಯ್ಯನ ನಡುವೆ ಪರಸ್ಪರ ಪ್ರೀತಿ ಹುಟ್ಟಿ ವಿವಾಹಕ್ಕೆ ಅವರ ಜಾತಿ ಅಡ್ಡಿಯಾಗುತ್ತದೆ. ಈ ಪ್ರಸಂಗವನ್ನು ಪ್ರಭುಗಳೇ ನಿವಾರಿಸಬೇಕು ಎಂದು ಕೇಳಿಕೊಂಡಾಗ ಲಿಂಗರಾಜನು ಅವರ ವಿವಾಹಕ್ಕೆ ಅವಕಾಶ ನಿರಾಕರಿಸಿ ಅವರಿಬ್ಬರನ್ನು ಬೇರ್ಪಡಿಸುವ ಪ್ರಯತ್ನ ನಡೆಸುತ್ತಾನೆ. ಕೊನೆಗೆ ಅವರಿಬ್ಬರ ವಿರೋಧ ವ್ಯಕ್ತವಾದಾಗ ರಾಜನಿಗೆ ತನ್ನ ತಪ್ಪಿನ ಅರಿವಾಗಿ ತಾನು ಹೊರಡಿಸಿರುವ ಹುಕುಂನಾಮೆ ಅರ್ಥಹೀನವಾದದ್ದು ಎಂದು ತಿಳಿದು ಮತ್ತು ಹಾಲೇರಿ ಸಂಸ್ಥಾಪಕ ವೀರಪ್ಪರಾಜನು ಒಕ್ಕಲಿಗರ ಹೆಣ್ಣನ್ನು ಮದುವೆ ಮಾಡಿಕೊಂಡ ಪ್ರಸಂಗವನ್ನು ನೆನೆದು ತನ್ನ ಹುಕುಂನಾಮೆಯನ್ನು ರದ್ದುಗೊಳಿಸುವುದನ್ನು ಕಾಣುತ್ತೇವೆ.[೬೨] ಬಯಲುದಾರಿ ಕಾದಂಬರಿಯಲ್ಲಿಯೂ ಅಂತರ್ಜಾತಿ ವಿವಾಹಕ್ಕೆ ವಿರೋಧ ವ್ಯಕ್ತವಾಗುವ ಪ್ರಸಂಗ ಕಂಡುಬರುತ್ತದೆ. ಕೊಡವನಾದ ಮಾದಪ್ಪನ ಮಗ ಕರುಂಬಯ್ಯ ಮಲೆಯಾಳಿ ಹುಡುಗಿ ಕಾತ್ಯಾಯಿನಿಯನ್ನು ಪ್ರೀತಿಸಿ ವಿವಾಹವಾಗಲು ಬಯಸಿರುತ್ತಾನೆ. ಈ ನಂಬಿಕೆಯ ಮೇಲೆ ಅವಳೊಂದಿಗೆ ದೈಹಿಕ ಸಂಪರ್ಕವನ್ನೂ ಹೊಂದಿರುತ್ತಾನೆ. ಇದರಿಂದ ಅವಳು ಗರ್ಭಿಣಿಯಾಗಿರುತ್ತಾಳೆ. ಈ ವಿಷಯವನ್ನು ಚರ್ಚಿಸಿ ಸಮಸ್ಯೆಯನ್ನು ಬಗೆಹರಿಸಲೆಂದು ಕಾತ್ಯಾಯಿನಿಯ ತಂದೆ ಶಂಕರನ್ ಮೇಸ್ತ್ರಿ ಮಾದಪ್ಪನವರ ಮನೆಗೆ ಬರುತ್ತಾನೆ. ಇದನ್ನು ಕೇಳಿ ಕುಪಿತರಾದ ಮಾದಪ್ಪ ವಿವಾಹಕ್ಕೆ ಒಪ್ಪದಿದ್ದಾಗ ಶಂಕರನ್ ಮೇಸ್ತ್ರಿಯೇ ಮಗಳ ಗರ್ಭದಲ್ಲಿರುವ ಭ್ರೂಣವನ್ನು ತೆಗೆಸಲು ಒಂದು ಸಾವಿರ ರೂಪಾಯಿಗಳನ್ನು ಬೇಡುತ್ತಾನೆ. ಕೊಡುವುದಾಗಿ ಹೇಳಿ ಆತನನ್ನು ಕರೆಸಿ ಆಳುಗಳಿಂದ ತೋಟದ ಕಂಬಕ್ಕೆ ಕಟ್ಟಿ ಮನಸೋ ಇಚ್ಛೆ ಥಳಿಸಿದ ಘಟನೆಯನ್ನು ಅವಲೋಕಿಸಿದರೆ ಕೊಡವರು ಅಂತರ್ಜಾತಿ ವಿವಾಹಕ್ಕೆ ಒಪ್ಪುತ್ತಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ.[೬೩]

### ನರಿಮಂಗಲ

ಕೊಡಗಿನಲ್ಲಿ ಕೊಡವರ ವಿಶಿಷ್ಟ ಆಚರಣೆಯಾಗಿ ಕಂಡುಬರುವ ಈ ಮಂಗಲ ವ್ಯಕ್ತಿಯೋರ್ವನ ಶೌರ್ಯ ಪರಾಕ್ರಮಗಳಿಗೆ ಸಾಕ್ಷಿಯಾಗುವ ಒಂದು ವಿವಾಹ ಪದ್ಧತಿಯಾಗಿದೆ. ಇದು ವಧುವಿಲ್ಲದೇ ನಡೆಯುವ ವಿವಾಹ ಪದ್ಧತಿಗಳ ಸಾಲಿಗೆ ಸೇರುತ್ತದೆ. 'ನರಿ' ಎಂದರೆ ಕೊಡವ ಬಾಷೆಯಲ್ಲಿ 'ಹುಲಿ' ಎಂದರ್ಥ. ಬೇಟೆಯಾಡಿ ಹುಲಿಯನ್ನು ಕೊಂದವರಿಗೆ ಅದೇ

ಹುಲಿಯೊಂದಿಗೆ ಮಂಗಲ ಅಥವಾ ಮದುವೆ ಮಾಡಿಸುವುದು. ಈ ಸಂದರ್ಭದಲ್ಲಿ ಹುಲಿ ಕೊಂದವನಿಗೆ ಬಹುಮಾನಗಳನ್ನಿತ್ತು ಅತನ ಶೌರ್ಯ ಸಾಹಸಗಳನ್ನು ಹೊಗಳಿ ಅಂತಹ ಪರಾಕ್ರಮದ ಕೆಲಸ ಇನ್ನೂ ಮುಂದುವರೆಯಲಿ ಎಂಬ ಪ್ರಚೋದನೆ ಹಾಗೂ ಮೆಚ್ಚುಗೆಯ ಮಾತುಗಳು ಕೇಳಿಬರುತ್ತವೆ.

ನರಿಮಂಗಲದ ಸಮಯದಲ್ಲಿ ಹುಲಿ ಕೊಂದವರು ಹೆಣ್ಣಾಗಲಿ, ಗಂಡಾಗಲಿ ಅವರೊಂದಿಗೆ ಹುಲಿಯನ್ನೂ ಊರಿನಲ್ಲೆಲ್ಲಾ ಮೆರವಣಿಗೆ ಮಾಡಿಸಿ ನಂತರ ಆ ಸತ್ತ ಹುಲಿಯೊಂದಿಗೆ ಅವರನ್ನು ಕೂರಿಸಿ ಮದುವೆ ಮಾಡಿಸುತ್ತಾರೆ. ಈ ಮುಹೂರ್ತದ ಸಮಯದಲ್ಲಿ ಹುಲಿ ಇಲ್ಲದಿದ್ದರೆ ಅದರ ಚರ್ಮವಾಗಲಿ ಅಥವಾ ಬಾಲವಾಗಲಿ ಇರಲೇಬೇಕು ಎಂಬ ನಿಯಮವಿದೆ.[೬೪] ಆ ನಂತರದ ದಿನಗಳಲ್ಲಿ ಆತ ಹುಲಿ ಕೊಂದ ವೀರನೆಂದು ಪರಿಗಣಿಸಿ ವಿಶೇಷ ಗೌರವವನ್ನು ಕೊಡಲಾಗುತ್ತದೆ.

ನರಿಮಂಗಲದ ಮುಹೂರ್ತ ನಡೆಯುವಾಗ ಹಾಡುವ ಹಾಡು ಈ ರೀತಿಯಿದೆ

ಬಾಳೋ ಕೇಳೊ ಸಂಜಾದಿ
ಪಾಡುವ ಕವಿ ಕೇಳ್
ಈ ನಾಡ್ ನಡುವುಲ್
ಬಾಂಗಾಡ್ ಬನತ್‌ಲ್
ಬಾಯಲಂದ ಪೆಬ್ಬುಲ್
ಪಯಿಪುಗೊಂಡಡಗಿಂಜ
ಆ ಸುದ್ದಿ ಕೇಟಿತ್
ನಾಡಡಂಗ ಬಾಲರೂ
ಒತ್ತೊರಮೆ ಕೊಂಡಿತ್
ಕಾಡ್ ಬೋಟೆ ಕೂಡ್‌ಚಿ
ಚೀಲನಲ್ಲಿ ಬಾಲಂಗ
ನಾಯಾಟಿತ್ ಪೋಕಣೆ
ಬಿಲ್ಲ್ ಕಾರ ಬಾಲಂಗ
ಬಾಂಗಾಡ್ ಬನತ್‌ಲ್
ಮಂಗಡುಲ್ ನಿಂದತ್
ಓರಂಡೀರಂಡೆಣ್ಣನೆ
ನಾಯಿಕಾರ ಬಾಲಂಗ
ಬೈಕಡುರ್ ನಿಂದಿತ್
ನಾಯಿನ್‌ಡಿ ಕೂಟಣೆ
ಚೀಲನಲ್ಲಿ ನಾಯಿಯ

ಮಿಞಬಯ್ಯ ನೋಚಿತ್
ಕಾಡ್ ನುಗ್ಗ ತಾಚಿಲ, ಆಕ್ಕಣಿಕೆ ಚಂಜೌದಿ, ಇದೋರ್‌ಕತೆ ಕೊಶ್.[೬೫]

ಇದರ ಕನ್ನಡದ ಸಾರಾಂಶವೆಂದರೆ: ಹುಲಿಯನ್ನು ಕೊಂದ ವೀರನ ಕತೆ ಹೇಳುತ್ತೇನೆ ಕೇಳಿ, ಈ ನಾಡಿನ ಕಾಡಿನಲ್ಲಿ ಹಸಿವು ಹಿಂಗದ ಹೆಬ್ಬುಲಿಯೊಂದಿತ್ತು. ಈ ವರ್ತಮಾನ ಕೇಳಿ ಗ್ರಾಮದ ಯುವಕರು ಕೋವಿ ಹಿಡಿದು ಕಾಡಿಗೆ ನಾಯಿ ಸಮೇತ ನುಗ್ಗಿದರು. ಆದರೆ ನಾಯಿ ಕಾಡಿನೊಳಗೆ ನುಗ್ಗಲು ಹಿಂಜರಿಯಿತು. ಇದನ್ನು ಅರಿತ ಬೇಟೆಗಾರರು ಹುಲಿ ಹತ್ತಿರದಲ್ಲಿಯೇ ಇದೆಯೆಂಬುದನ್ನು ಗುರುತಿಸಿದರು. ಕಾಡಿನಲ್ಲಿ ಮರದಡಿಯಲ್ಲಿ ನಿದ್ರಿಸುತ್ತಿದ್ದ ಹುಲಿಯು ಗರ್ಜಿಸಿತು. ನಿಪುಣ ಬೇಟೆಗಾರ ಕೋವಿಯನ್ನು ಹಿಡಿದು ಹುಲಿಯ ಜಾಡನ್ನು ಹಿಡಿದು ಗುಂಡು ಹಾರಿಸಿದನು. ಭಯಂಕರ ಗುಂಡಿನ ಶಬ್ದ ಕಾಡಿನೊಳಗೆ ಮೊಳಗುತ್ತದೆ. ಗುಂಡು ತಾಗಿದ ಹುಲಿಯನ್ನು ವೀರ ಬೇಟೆಗಾರರು ನಾಮುಂದೆ, ತಾಮುಂದೆ ಎಂದು ಓಡಿ ಪ್ರಾಣಿಯನ್ನು ಮುಟ್ಟುತ್ತಾರೆ. ಹೆಬ್ಬುಲಿಯನ್ನು ನಾಡಿನ ಮೈದಾನ (ಮಂದ್)ಕ್ಕೆ ತಂದು ಹುಲಿ ಮದುವೆ ಮಾಡಲಾಗುತ್ತದೆ. 'ಮುಕ್ಕಾಲಿ'ಯ (ಮೂರು ಕಾಲಿನ ಮಣೆ) ಮೇಲೆ ಕೋವಿ ಹಿಡಿದು ಸರ್ವಾಲಂಕೃತನಾಗಿ ಕುಳಿತ ವೀರಪುತ್ರನಿಗೆ ತಾಯಿ ತಲೆಗೆ ಅಕ್ಕಿಯನ್ನು ಹಾಕಿ ಆಶೀರ್ವದಿಸಿ ಚಿನ್ನದ ನಾಣ್ಯವನ್ನು ಬಹುಮಾನವಾಗಿ ಕೊಡುತ್ತಾಳೆ. ಹಿರಿಯರು 'ಇಂದು ನಾವು ನೋಡಿದ ಧೈರ್ಯ, ಸಾಹಸದ ಪ್ರಸಂಗ ಎಂದೂ ನಿನ್ನ ಜೀವನದಲ್ಲಿ ಮೂಡಿ ಬರಲಿ, ಜೀವನದಲ್ಲಿ ಕೀರ್ತಿಯನ್ನು ಪಡೆ' ಎಂದು ಹಾರೈಸುತ್ತಾರೆ.

ನರಿಮಂಗಲ ಮಾಡಿಸಿಕೊಳ್ಳುವುದು ಕೊಡವರ ವೈಯಕ್ತಿಕ ಪ್ರತಿಷ್ಠೆಯಾಗಿರುವುದೂ ಅಲ್ಲಲ್ಲಿ ಕಂಡುಬರುತ್ತದೆ. ಭಾರತೀಸುತರ ಕಾದಂಬರಿಯೊಂದರಲ್ಲಿ ಮಾದಪ್ಪ ನರಿ ಬೇಂಟೆಗಾರನೆಂಬ ಗೌರವ, ಬಿರುದುಗಳನ್ನು ಪಡೆದು ಕೊಂಡಿದ್ದರೂ ಹುಲಿ ಬೇಟೆಯೇ ಅವನಿಗೆ ಮುಳುವಾಗಿದ್ದನ್ನು ಗಮನಿಸಬಹುದು. ಈತನು ನಾಲ್ಕು ಸಲ ನರಿಮಂಗಲಕ್ಕೆ ಪಾತ್ರನಾಗಿದ್ದರೂ ಹುಲಿ ಬೇಟೆಗೆ ತೆರಳಿದ್ದ ಸಮಯದಲ್ಲಿ ತನ್ನಿಂದ ಉಂಟಾದ ಪ್ರಮಾದದಿಂದ ಹುಲಿಯ ಬಾಯಿಗೆ ತುತ್ತಾಗುತ್ತಾನೆ. ಆದರೂ ಛಲ ಬಿಡದ ಮಾದಪ್ಪ ತನಗೆ ಗಂಭೀರ ಗಾಯವಾಗಿದ್ದರೂ ಹುಲಿಯನ್ನು ಕೊಂದು ತನ್ನ ಸೇಡನ್ನು ಪೂರ್ಣಗೊಳಿಸುತ್ತಾನೆ.[೬೬] ಬೆಳ್ಳಿ ಮೂಡಿತು ಕಾದಂಬರಿಯ ನಾಯಕ ತಿಮ್ಮಡು ಬಡವನಾಗಿದ್ದರೂ ತಾನು ವೀರನೆಂದು ತೋರಿಸಿಕೊಳ್ಳುವ ಹಂಬಲದಿಂದ ನರಿಮಂಗಲ ಮಾಡಿಸಿಕೊಳ್ಳುವ ಹಠಕ್ಕೆ ಬೀಳುತ್ತಾನೆ. "ನಾವು ದಿನ ನಿತ್ಯ ಹುಲಿಗಳನ್ನು ಹೊಡೆಯುವುದಿಲ್ಲ, ನಾಲ್ಕು ದಿನ ಗೆಯ್ತ ತಪ್ಪಿದರೇನು? ನಮ್ಮ ಗ್ರಾಮದಲ್ಲಿ ಹುಲಿ ಹೊಡೆಯಲು ಎಷ್ಟು ಜನರಿದ್ದಾರೆ ಹೇಳು? ಆ ಮರ್ಯಾದೇನ ನಾವು ಪಡಯೋದು ಬೇಡವೇ?"[೬೭] ಎಂದು ಸಮರ್ಥಿಸಿಕೊಳ್ಳುವ ಮೂಲಕ ನರಿಮಂಗಲ ವಿರೋಧಿಸಿದ ನಂಜಪ್ಪನನ್ನು ಒಪ್ಪಿಸುತ್ತಾನೆ. ಆರ್ಥಿಕವಾಗಿ ಹಿಂದುಳಿದ ತಿಮ್ಮಡು ತನ್ನ ಸಂಸಾರವನ್ನು ನಡೆಸಿಕೊಂಡು ಹೋಗುವುದೇ ಕಷ್ಟವಾಗಿದ್ದರೂ ಸಾಲ ಮಾಡಿ ನರಿಮಂಗಲಕ್ಕಾಗಿ ಸಿದ್ಧತೆ ಮಾಡಿಕೊಳ್ಳುವುದು ಒಂದು ಪ್ರತಿಷ್ಠೆಯ ವಿಷಯವೆಂಬುದು ತಿಳಿಯುತ್ತದೆ.

ಸರ್ಕಾರದ ಕಾನೂನುಗಳು ಕಠಿಣವಾಗಿ ರೂಪಿತಗೊಂಡ ನಂತರದಲ್ಲಿ ಕೊಡಗಿನಲ್ಲಿ ಬೇಟೆ ಕ್ಷೀಣಿಸಿದೆ. ಬೇಟೆಗಾರರಿಗೆ ಕಾನೂನಿನ ಭಯವಿರುವುದರಿಂದ ಯಾರೂ ಹುಲಿ ಅಥವಾ ಇತರೆ ಯಾವುದೇ ಪ್ರಾಣಿಯ ಬೇಟೆಗೂ ಆಸಕ್ತಿ ತೋರುತ್ತಿಲ್ಲ. ಮೊದಲು ಹುಲಿ ಕೊಂದವನಿಗೆ ಊರವರೆಲ್ಲಾ ಸೇರಿ 'ನರಿಮಂಗಲ' ಏರ್ಪಡಿಸಿ ಸಂಭ್ರಮಿಸುತ್ತಿದ್ದರು. ಇಂದು ಸಂಪೂರ್ಣವಾಗಿ ನಿಂತಿರುವುದು ಕಾಣುತ್ತಿದೆ. ಮುಖ್ಯವಾಗಿ ಇಂಥಹ ಅಪಾಯಕಾರಿ ಸನ್ನಿವೇಶಗಳಿಗೂ ಯಾರೂ ಮನಸ್ಸು ಮಾಡುವುದಿಲ್ಲ.

ಕೊಡಗಿನಲ್ಲಿ ಕೊಡವರ ಹೊರತಾಗಿ ಇಲ್ಲಿನ ಅರೆಭಾಷೆ ಗೌಡರು ಬೇಟೆಯಾಡುವುದನ್ನು ಕಾಣಬಹುದು. ಹಿಂದೆ ಇವರೂ ಸಹ ಹುಲಿಮದುವೆಗೆ ಅರ್ಹರಾಗುತಿದ್ದರು. ಇತ್ತೀಚೆಗೆ ಮರೆಯಾಗಿದೆ. ಇವರಲ್ಲದೆ ಇಲ್ಲಿನ ಬೇರೆ ಬೇರೆ ಜನಾಂಗದವರೂ ಕೂಡ ಬೇಟೆಯಲ್ಲಿ ತೊಡಗಿರುವುದು ಕಂಡುಬಂದರೂ ಅವರಿಗೆ ಹುಲಿಯಂತಹ ಪ್ರಾಣಿಯನ್ನು ಕೊಲ್ಲುವುದಾಗಲಿ, ಕೊಂದರೂ ಅವರಿಗೆ ಹುಲಿಯೊಂದಿಗೆ ಮದುವೆ ಮಾಡಿಸುವುದಾಗಲಿ ಎಲ್ಲಿಯೂ ಕಂಡುಬರುವುದಿಲ್ಲ. ಪ್ರಸ್ತುತ ಕೊಡಗಿನಲ್ಲಿ ನರಿಮಂಗಲ ಸಂಪೂರ್ಣವಾಗಿ ನಿಂತು ಹೋಗಿದೆ.

## ೪.೪. ಕೊಡವರ ಆಚರಣೆಗಳು

**ಜನನ:** ಪ್ರತಿಯೊಂದು ಕುಟುಂಬವೂ ತಮ್ಮ ಮಗುವಿನ ನಿರೀಕ್ಷೆಯಲ್ಲಿರುತ್ತದೆ. ಸುರಕ್ಷಿತ ಮತ್ತು ಆರೋಗ್ಯಕರವಾಗಿ ಜನಿಸಬೇಕೆಂಬ ಸದಾಶಯ ಎಲ್ಲರಿಗೂ ಇರುತ್ತದೆ. ಬಾಹ್ಯಜಗತ್ತಿಗೆ ಆಗಮಿಸುವ ಸಮಯದಲ್ಲಿ ಮಗುವಿಗೆ ಶುಭ್ರವಾದ ವಾತಾವರಣದ ಅಗತ್ಯವಿರುತ್ತದೆ. ಯಾವುದೇ ಮಾಲಿನ್ಯ ಅಲ್ಲಿ ಇರಬಾರದು ಎಂಬ ಮನ್ನೆಚ್ಚರಿಕೆಯನ್ನು ವಹಿಸುವುದು ತೀರಾ ಅಗತ್ಯವಾಗಿರುತ್ತದೆ. ಕೊಡವರು ಹಿಂದಿನಿಂದಲೂ ಈ ಎಲ್ಲಾ ಎಚ್ಚರಿಕೆಯನ್ನು ಅಳವಡಿಸಿಕೊಂಡು ಮಗುವಿನ ಆಗಮನವನ್ನು ಕಾಯುತ್ತಾರೆ.

ಮಗುವಿನ ಜನನದ ಸಮಯದಲ್ಲಿ ಕೊಡವರು ಅನುಸರಿಸುವ ಕೆಲವು ವಿಧಾನಗಳು, ಕ್ರಮಗಳು ವಿಶೇಷವೆನಿಸುತ್ತವೆ. ಹುಟ್ಟಿದ ಮಗು ಗಂಡಾಗಿದ್ದರೆ ಕೋವಿಯಿಂದ ಗುಂಡು ಹಾರಿಸುವ ಮೂಲಕ ಈ ವಿಷಯವನ್ನು ಸುತ್ತಲಿನ ಗ್ರಾಮಗಳಿಗೂ ತಿಳಿಸುತ್ತಾರೆ. ಆ ಮಗುವಿನ ಕೈಯಲ್ಲಿ ಹರಳು ಗಿಡದ ಎಲೆಯ ದಂಟಿನಿಂದ ಬಿಲ್ಲು ಬಾಣಗಳನ್ನು ಮಾಡಿ ಹಿಡಿಸುತ್ತಾರೆ. ಮಗು ಭವಿಷ್ಯದಲ್ಲಿ ವೀರಯೋಧನಾಗಿ ಬಾಳಲಿ ಎಂಬುದು ಇದರ ಉದ್ದೇಶವಾಗಿರುತ್ತದೆ. ಹೆಣ್ಣು ಮಗು ಜನಿಸಿದರೆ 'ತಳಿಯಮಣೆ'ಯನ್ನು ಬಡಿಯುವ ಮೂಲಕ ಅದು ಸಂಗೀತ ಮತ್ತು ಲಲಿತ ಕಲೆಗಳಲ್ಲಿ ಪರಿಣತಿಯನ್ನು ಗಳಿಸುವಂತಾಗಲಿ ಎಂದು ಹಾರೈಸುತ್ತಾರೆ. ಈ ಸಂಪ್ರದಾಯಗಳನ್ನು ಕೊಡಗಿನಲ್ಲಿ ವಾಸಿಸುತ್ತಿರುವ ಅರೆಭಾಷೆ ಗೌಡರು ಸಂಪೂರ್ಣವಾಗಿ ಅನುಸರಿಸಿದರೆ, ಕೋವಿಯಲ್ಲಿ ಗುಂಡು ಹಾರಿಸುವ(ಗಂಡು ಮಗು ಜನಿಸಿದರೆ) ಪದ್ಧತಿಯನ್ನು ಕೆಲವು ಕೆಂಬಟ್ಟಿಯರು ಅನುಸರಿಸುತ್ತಿದ್ದಾರೆ.

ಹುಟ್ಟಿದ ಮಗುವನ್ನು ಸ್ನಾನ ಮಾಡಿಸಿ ಶುಚಿಯಾಗಿಸಿದ ನಂತರ ಬೆಲ್ಲ, ತುಪ್ಪ ಮತ್ತು ಕರಿಮೆಣಸಿನಪುಡಿ ಮಿಶ್ರ ಮಾಡಿ ಮಗುವಿನ ಬಾಯಿಗೆ ತೀಡುತ್ತಾ 'ಬೆಲ್ಲದಂತೆ ಜೀವನದಲ್ಲಿ ನಿನ್ನ ವರ್ತನೆ ಸಿಹಿಯಿರಲಿ, ಬಿಸಿಗೆ ತುಪ್ಪ ಕರಗಿದಂತೆ ಇತರರ ಕಷ್ಟಗಳಿಗೆ ನಿನ್ನ ಹೃದಯ ಕರಗಲಿ, ಮೆಣಸಿನ ಕಾರದಂತೆ ನೀತಿ ಪಥದಲ್ಲಿ ನಿನ್ನ ವರ್ತನೆ ದಾಕ್ಷಿಣ್ಯಕ್ಕೊಳಗಾಗಿರಲಿ' ಎಂದು ಶುಭ ಹಾರೈಸುತ್ತಾರೆ.[೬೮]

ಹೆರಿಗೆಯಾದ ಕುಟುಂಬ ಸೂತಕಕ್ಕೊಳಗಾಗಿದೆ ಎಂದು ಪರಿಗಣಿಸಿ ಸುಮಾರು ಹನ್ನೆರಡು ದಿನಗಳವರೆಗೆ ಯಾವುದೇ ಹಬ್ಬಗಳಲ್ಲಿ ಭಾಗವಹಿಸುವಂತಿಲ್ಲ. ಗ್ರಾಮದ 'ಮಂದ್' ಮತ್ತು ದೇವಸ್ಥಾನಗಳಿಗೆ ಪ್ರವೇಶಿಸುವಂತಿಲ್ಲವೆಂಬ ನಿಷೇಧಗಳನ್ನು ರೂಢಿಸಿಕೊಂಡಿದ್ದಾರೆ. ಕೊಡವರ ಪದ್ಧತಿಯಂತೆ ಹನ್ನೆರಡನೇ ದಿನದಂದು ಮಗುವಿಗೆ ನಾಮಕರಣ ಮಾಡಲಾಗುತ್ತದೆ. ಇದೇ ದಿನ ತೊಟ್ಟಿಲಿಗೆ ಹಾಕುವ ಶಾಸ್ತ್ರವೂ ನೆರವೇರುತ್ತದೆ. ತೊಟ್ಟಿಲಿಗೆ ಹಾಕುವ ಮೊದಲು ಗಂಡು ಮಗುವಿಗೆ ಸೊಂಟ, ಕೈ, ಹಾಗೂ ಕಾಲಿನ ಮಣಿಗಂಟುಗಳಿಗೆ ಕಪ್ಪು ಉಡಿದಾರವನ್ನು ಕಟ್ಟುತ್ತಾರೆ. ಹೆಣ್ಣುಮಗುವಿಗೆ ಕೇವಲ ಕೈ ಮತ್ತು ಕಾಲುಗಳಿಗೆ ಮಾತ್ರ ಕಟ್ಟಲಾಗುತ್ತದೆ. ಕೊಡವರು ಈ ಹಿಂದೆ ಮಗುವನ್ನು ತೊಟ್ಟಿಲಿಗೆ ಹಾಕುವ ಸಮಯದಲ್ಲಿ ಅನುಸರಿಸುತ್ತಿದ್ದ ಮತ್ತೊಂದು ಸಂಪ್ರದಾಯವೆಂದರೆ ಅರೆಯುವ ಅಥವಾ ಕಡೆಯುವ ಕಲ್ಲನ್ನು ಮೂರು ಸಲ ತೊಟ್ಟಿಲಿಗೆ ಹಾಕಿ ತೆಗೆದು ನೆಲದಲ್ಲಿಡುತ್ತಾ ಕಲ್ಲಿನಂತೆ ದೀರ್ಘಾಯುಸ್ಸಿನಿಂದ ಬದುಕು ಎಂದು ಹೇಳಲಾಗುತ್ತದೆ. ಇತ್ತೀಚೆಗೆ ಈ ಪದ್ಧತಿಯನ್ನು ಅನುಸರಿಸುವುದು ಭಾಗಶ: ಕಡಿಮೆಯಾಗಿದೆ. ಮೊದಲು ಪ್ರತಿಯೊಬ್ಬರ ಮನೆಯಲ್ಲೂ ಕಡೆಯುವ ಅಥವಾ ಅರೆಯುವ ಕಲ್ಲುಗಳಿರುತ್ತಿದ್ದವು. ಈಗ ಮರೆಯಾಗುತ್ತಿರುವುದರಿಂದ ತೊಟ್ಟಿಲಿಗೆ ಕಲ್ಲು ಹಾಕುವ ಪದ್ಧತಿಯೂ ಕಡಿಮೆಯಾಗಿದೆ.

**ಮರಣ:** ಕೊಡವರು ತಮ್ಮ ಬದುಕಿನ ಎಲ್ಲಾ ಹಂತಗಳಲ್ಲಿಯೂ ವಿಶಿಷ್ಟವಾದ ಮತ್ತು ಶಾಸ್ತ್ರಬದ್ಧವಾದ ಆಚರಣೆಗಳನ್ನು ರೂಢಿಸಿಕೊಂಡು ಬಂದಿರುವುದು ಅಧ್ಯಯನದಿಂದ ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲಿ ಕೊಡವರ ಮರಣ ಅಥವಾ ಸಾವು ಪದ್ಧತಿಯೂ ಆಸಕ್ತಿಯನ್ನು ಮೂಡಿಸುತ್ತದೆ.

ವಯಸ್ಸಾದ ವ್ಯಕ್ತಿ ಅಥವಾ ಯಾವುದಾದರು ಖಾಯಿಲೆಗೆ ತುತ್ತಾದ ವ್ಯಕ್ತಿಯ ಪ್ರಾಣ ಹೋಗುತ್ತದೆ ಎಂಬ ಸೂಚನೆ ಸಿಕ್ಕಿದೊಡನೆಯೇ ಆತನ ಬಾಯಿಗೆ ತೆಂಗಿನ ಕಾಯಿ ನೀರನ್ನು ತುಳಸಿ ಮತ್ತು ಗರಿಕೆ ಹುಲ್ಲಿನ ಮೂಲಕ ಹಾಕುತ್ತಾರೆ. ಕೊಡವರು ಸಾವನ್ನೂ ಅದೆಷ್ಟು ವ್ಯವಸ್ಥಿತವಾಗಿ ಬರಮಾಡಿಕೊಳ್ಳುತ್ತಾರೆಂದರೆ, ಮರಣ ಶಯ್ಯೆಯಲ್ಲಿರುವ ವ್ಯಕ್ತಿಯನ್ನು ನಡುಮನೆಯಲ್ಲಿ ಮಲಗಿಸಿಕೊಂಡು ಸಮೀಪದಲ್ಲಿಯೇ ತೆಂಗಿನಕಾಯಿ, ಒಂದು ಕತ್ತಿ, ತುಳಸಿ ಮತ್ತು ಗರಿಕೆ ಹುಲ್ಲನ್ನು ಇಟ್ಟುಕೊಂಡಿರುತ್ತಾರೆ. ಇನ್ನೇನು ಜೀವ ಹೋಗುತ್ತಿದೆಯೆಂದು ಗೊತ್ತಾದೊಡನೆ ಅವುಗಳನ್ನು ಬಳಸುತ್ತಾರೆ.

ಇವರಲ್ಲಿ ವ್ಯಕ್ತಿಯೊಬ್ಬ ತೀರಿಕೊಂಡಾಗ ಆ ವಿಷಯವನ್ನು ಊರಿನವರಿಗೆ ಸಾರಿ ಹೇಳಬೇಕಾಗಿಲ್ಲ. ಅದರ ಬದಲಿಗೆ ಗುಂಡು ಹಾರಿಸುತ್ತಾರೆ. ಗುಂಡಿನ ಶಬ್ದವನ್ನು ಕೇಳಿದ ಕೂಡಲೇ ಎಂಥ ಕೆಲಸಗಳಿದ್ದರೂ ಬಿಟ್ಟು ಸಾವಿನ ಮನೆಗೆ ತೆರಳಬೇಕು. ಇವರು ಗುಂಡು ಹಾರಿಸುವುದರಲ್ಲಿ ವಿಶೇಷವೊಂದನ್ನು ಕಾಣಬಹುದು. ವಿವಾಹಿತರು ಅಥವಾ ವಯಸ್ಸಾದವರು ಮರಣವಾದರೆ ಎರಡು ಗುಂಡು ಹಾರಿಸುತ್ತಾರೆ. ಅದೇ ರೀತಿ ಅವಿವಾಹಿತರು ಅಥವಾ ಕಡಿಮೆ ವಯಸ್ಸಿನವರು ತೀರಿಕೊಂಡರೆ ಒಂದು ಗುಂಡು ಹೊಡೆಯುತ್ತಾರೆ. ಇದರ ಮೂಲಕ ಸಾವು ಯಾರದಿರಬಹುದೆಂದು ಭಾವಿಸಿ ಸಾವಿನ ಮನೆಗೆ ಧಾವಿಸುತ್ತಾರೆ.

ಮರಣ ಹೊಂದಿದ ವ್ಯಕ್ತಿಯ ಸಮೀಪದ ಬಂಧುಗಳು ಬಟ್ಟೆ ಸಮೇತ ನೀರಿನಲ್ಲಿ ಮುಳುಗಿ ಗಂಡಸರಾದರೆ ಒಂದು ಜೊತೆ ಬಿಳಿ ಕುಪ್ಪಸ ದಟ್ಟಿ ಹಾಕಿಕೊಳ್ಳಬೇಕು. ಹೆಂಗಸರು ಬಿಳಿ ಬಟ್ಟೆಯುಡಬೇಕು. ತಲೆ ಕೂದಲನ್ನು ಕಟ್ಟಿದ್ದರೆ ಅದನ್ನು ಬಿಚ್ಚಬೇಕು. ಈ ರೀತಿಯ ಪದ್ಧತಿಯನ್ನು ಸತ್ತ ವ್ಯಕ್ತಿಗಿಂತ ಕಿರಿಯರು ಮಾಡುವಂತದ್ದಾಗಿರುತ್ತದೆ. ಶವವನ್ನು ಸ್ನಾನ ಮಾಡಿಸಿ ಯೋಗ್ಯವಾದ ಉಡುಪುಗಳಿಂದ ಅಲಂಕರಿಸಬೇಕು. ಸಾಮಾನ್ಯವಾಗಿ ಕೊಡವ ಸಂಸ್ಕೃತಿಯ ಪ್ರತೀಕವಾದ ಸಾಂಪ್ರದಾಯಿಕ ವಸ್ತ್ರಗಳನ್ನೇ ಧರಿಸಲಾಗುತ್ತದೆ. ನಂತರ ಶವವನ್ನು 'ನಾಲ್‌ಕೆಟ್ಟ್' ಮನೆಯಾದರೆ ಐಮರದ ಮೇಲೂ 'ಬತ್ತೆಪೊರೆ' ಮನೆಯಾಗಿದ್ದರೆ ಕಯ್ಯಾಲೆ ಅಥವಾ ನಡುಮನೆಯಲ್ಲಿ ಮಂಚದ ಮೇಲೆ ಮಲಗಿಸಬೇಕು. ಈ ಸ್ಥಳದಲ್ಲಿ ಕರ್ಪೂರ ಧೂಪ ದೀಪಗಳಿರಬೇಕು. ಎಲ್ಲಾ ಸಮುದಾಯಗಳಲ್ಲೂ ಶವ ವಾಸನೆ ಬಂದರೆ ಅದನ್ನು ದೂರ ಮಾಡಲು ಶವದ ಹತ್ತಿರ ಈ ರೀತಿಯ ಸುವಾಸನೆಯುಕ್ತ ಧೂಪಗಳಿರುವಂತೆ ನೋಡಿ ಕೊಳ್ಳುತ್ತಾರೆ.

ಕೊಡವರು ಶವವನ್ನು ಹೂಳುವ ಮತ್ತು ಸುಡುವ ಎರಡೂ ಪದ್ಧತಿಗಳನ್ನು ಅಳವಡಿಸಿಕೊಂಡಿದ್ದಾರೆ. ಶವವನ್ನು ಸುಟ್ಟಿದ್ದರೆ ಮಾರನೇ ದಿನ ಅರುವನು, ಮೃತನ ಮನೆಯವರು ಮತ್ತು ಸಂಬಂಧಿಕರೊಂದಿಗೆ ಸ್ಮಶಾನಕ್ಕೆ ತೆರಳಿ ಚಿತಾಭಸ್ಮವನ್ನು ಸಂಗ್ರಹಿಸಿಕೊಂಡು ಬಂದು ಹತ್ತಿರದ ನದಿಗೆ ಬಿಡುತ್ತಾರೆ. ನಂತರ ಸುಟ್ಟ ಸ್ಥಳ ತಂಪಾಗಲೆಂದು ನೀರು ಸುರಿಯುವುದುಂಟು. ನಂತರ ಆ ಸ್ಥಳದಲ್ಲಿ ಭತ್ತ, ಸಾಸಿವೆ ಮೊದಲಾದವುಗಳನ್ನು ಬಿತ್ತುತ್ತಾರೆ. ಅವುಗಳು ಮೊಳಕೆಯೊಡೆದರೆ ಸತ್ತವರ ಹೃದಯ ತಂಪಾಗಿ ಶಾಂತಿ ದೊರೆಯುತ್ತದೆಂದು ನಂಬುತ್ತಾರೆ. ಎಲ್ಲಾ ಜನಾಂಗಗಳಲ್ಲಿರುವಂತೆಯೇ ಕೊಡವರೂ ಸಹ ಶವ ಸಂಸ್ಕಾರ ಮುಗಿಸಿದ ನಂತರ ಮನೆಗೆ ಹಿಂತಿರುಗಿ ಸ್ನಾನ ಮಾಡಿ, ಮಡಿಯುಟ್ಟುಕೊಂಡು ಒಳಗೆ ಪ್ರವೇಶಿಸುತ್ತಾರೆ. ಆದರೆ ಈ ಸಮಯದಲ್ಲಿ ಕೊಡವರು ಅನುಸರಿಸುವ ಮತ್ತೊಂದು ವಿಧಾನವೆಂದರೆ ಒಂದು ಸುತ್ತು ಗುಂಡು ಹಾರಿಸುವುದು.

ಕೊಡವರಲ್ಲಿ 'ಒಕ್ಕ'ದ ಅಂದರೆ ಕುಟುಂಬದ ಪಟ್ಟೆದಾರರು ಮೃತರಾದರೆ ಅಥವಾ ಕುಟುಂಬದ ಹಿರಿಯ ವ್ಯಕ್ತಿ ತುಂಬಾ ವಯಸ್ಸಾಗಿ ಮೃತಪಟ್ಟಲ್ಲಿ ಅಂತಹವರಿಗೆ 'ಅಂಗಕಳಿ' ಎಂಬ ಕುಣಿತ ಮಾಡಿಸುತ್ತಾರೆ. ಊರಿನಲ್ಲಿರುವ ಕೆಂಬಟ್ಟಿ ಹೊಲೆಯರನ್ನು ಆಹ್ವಾನಿಸಿ ಮನೆಯಾಚೆ

ಅಂಗಳದಲ್ಲಿ ಈ ಕುಣಿತವನ್ನು ಮಾಡಿಸುವಂತದ್ದು. ಮಣೆಯ ಮೇಲೆ ಕೈ ಎಣ್ಣೆ ದೀಪ ಇಟ್ಟು ಇದರ ಪಕ್ಕದಲ್ಲಿ 'ಪುತ್ತರಿ ಪಚ್ಚೆ' (ಬಿದಿರಿನಲ್ಲಿ ನೇಯ್ದ ಕುಕ್ಕೆ)ಯಲ್ಲಿ ಭತ್ತವನ್ನು ತುಂಬಿಟ್ಟು, ಇನ್ನೊಂದರಲ್ಲಿ ಅಕ್ಕಿ, ತೆಂಗಿನಕಾಯಿಯನ್ನಿಟ್ಟು, ಅಕ್ಕಿ ಮೇಲೆ ಕಬ್ಬಿಣದ ಸಣ್ಣ ಸಲಾಕೆ ಚುಚ್ಚಲಾಗುತ್ತದೆ. "ಅಂಗಕಳಿ ಆಡುವ ಹೊಲೆಯರಲ್ಲಿ ಒಬ್ಬನಿಗೆ 'ಮುಂಡು' (ಬಿಳಿಪಂಚೆ) ಕೊಡಬೇಕು. ಆ 'ಮುಂಡು' ಬಟ್ಟೆಯನ್ನು ಸುತ್ತಿಕೊಂಡು ಸಾವಿಗೆ ಕೈ ಕೊಡುವಂತೆ ಮಾಡಿ "ಕೆಟ್ಟಿರೋ ಆದನೆ(ಒಡೆಯ), ಬೊಳ್ಳ", ಅಥವಾ 'ಕೆಟ್ಟಿರೀ ಅಬ್ಬೆಯೆ' ಎಂದು ಮೂರು ಬಾರಿ ಶವದ ಕೈ ಹಿಡಿದು ದೀಪದ ಸುತ್ತಲೂ ಮಾಲೆ ಪೊಯಿತ್ ಹೊಡೆಯುತ್ತಾ ಡೋಲಿಗೆ ತಕ್ಕಂತೆ ವಿಶೇಷವಾದ ರೀತಿಯಲ್ಲಿ ಕುಣಿತವನ್ನು ಮಾಡುತ್ತಾನೆ. ಅಂಗಕಳಿ ಮಾಡುವವನು ಸತ್ತ ವ್ಯಕ್ತಿಗಿಂತ ಕಿರಿಯವನಾದರೆ ಆತ ಕೊಡವರ ಸಂಪ್ರದಾಯದಂತೆ ನಡೆದುಕೊಳ್ಳಬೇಕು. ವಿಧಿವಿಧಾನಗಳು ಮುಗಿಯುವ ತನಕ ಹಲವು ಶಿಸ್ತುಬದ್ಧ ಕಟ್ಟುಪಾಡನ್ನು ಪಾಲಿಸಬೇಕು.

## ೪.೫. ಕೊಡವರ ಪ್ರದರ್ಶನ ಕಲೆಗಳು

ಕೊಡವರು ಪ್ರದರ್ಶನ ಕಲೆಗಳ ಮೂಲಕವೂ ತಮ್ಮ ವಿಶೇಷತೆಯನ್ನು ಹೊಂದಿದ್ದಾರೆ. ಮನೋರಂಜನೆಗೆ ಬೇರೆ ಯಾವುದೇ ಸೌಲಭ್ಯಗಳಿಲ್ಲದ ಕಾಲದಲ್ಲಿ ನಡೆಯುತ್ತಿದ್ದ ಕ್ರೀಡಾ ಚಟುವಟಿಕೆಗಳು ಕೈಬೆರಳ ತುದಿಯಲ್ಲೇ ಇಡೀ ಜಗತ್ತನ್ನು ಸ್ಪರ್ಶಿಸುವ ಅವಕಾಶವಿರುವ ಪ್ರಸ್ತುತ ಸಂದರ್ಭದಲ್ಲೂ ಸೀಮಿತ ಅವಧಿಗೆ ಒಳಪಟ್ಟು ಪ್ರದರ್ಶಿಸಲ್ಪಡುತ್ತಿವೆ. ಹಬ್ಬ ಹರಿದಿನಗಳಲ್ಲಿ ಕೋಲಾಟ, ಬೊಳಕಾಟ್, ಕೊಡವಪಾಟ್, ಜೋಯಿಪಾಟ್, ಉಮ್ಮತ್ತಾಟ್ ಹಾಗೂ ಯುದ್ಧ ಪರಂಪರೆಯನ್ನು ನೆನಪಿಸುವ 'ಪಡೆಕಳಿ' ಅಥವಾ 'ಪರಿಯಕಳಿ'ಯಂತಹ ವಿವಿಧ ರೀತಿಯ ಆಕರ್ಷಕ ಕ್ರೀಡೆಗಳು ಹಾಡುಗಳೊಂದಿಗೆ ಪ್ರದರ್ಶಿತಗೊಳ್ಳುತ್ತವೆ. ಪ್ರಸ್ತುತ ಭಾಗದಲ್ಲಿ ಉಮ್ಮತ್ತಾಟ್, ಕೊಂಬಾಟ್, ಹುತ್ತರಿ ಕುಣಿತ, ಬೊಳಕಾಟ್ ಮತ್ತು 'ಪಡೆಕಳಿ'ಗಳನ್ನು ಚರ್ಚಿಸಲಾಗಿದೆ.

**ಉಮ್ಮತ್ತಾಟ್**: ಮಹಿಳಾ ಪ್ರಧಾನ ನೃತ್ಯವಿದು. ಅಮೃತ ಹಂಚುವ ಸಮಯದಲ್ಲಿ ವಿಷ್ಣು ಮೋಹಿನಿ ರೂಪ ತಾಳಿ ರಾಕ್ಷಸರಿಗೆ ವಂಚಿಸಲು 'ಉಮೆಯ ಲಾಸ್ಯ'ವನ್ನು ನೃತ್ಯವನ್ನಾಗಿಸಿ ಅಸುರರನ್ನು ವಂಚಿಸಿದ ಪುರಾಣದ ಹಿನ್ನೆಲೆಯನ್ನು ಈ ನೃತ್ಯ ಹೊಂದಿದೆ. ಈ ನೃತ್ಯಕ್ಕೆ ನಿರ್ಧಿಷ್ಟವಾದ ಸಂಖ್ಯೆಯಲ್ಲಿ ನೃತ್ಯಗಾರ್ತಿಯರು ಬೇಕೆಂಬ ನಿಯಮವೇನಿಲ್ಲ. ಎಷ್ಟು ಜನರಿದ್ದರೂ ಆಗುತ್ತದೆ. ಆದರೆ ಕನಿಷ್ಠ ಹತ್ತು ಜನರಾದರೂ ಇದ್ದರೆ ನೃತ್ಯದ ಸೌಂದರ್ಯ ಹೆಚ್ಚುತ್ತದೆ. ವಿವಾಹಿತ ಮತ್ತು ಅವಿವಾಹಿತ ಮಹಿಳೆಯರು ಭಾಗವಹಿಸಬಹುದಾಗಿದ್ದು ವಯೋಮಾನದ ನಿರ್ಬಂಧವಿಲ್ಲ. ಆದರೆ ವಿಧವೆಯರು ಭಾಗವಹಿಸುವಂತಿಲ್ಲ.

ಸೌಂದರ್ಯದಲ್ಲಿ ತಮ್ಮನ್ನು ಮೀರಿಸುವವರಿಲ್ಲವೆನ್ನುವಂತಹ ರೂಪವತಿಯರಾದ ಕೊಡವ ಮಹಿಳೆಯರು ಈ ನೃತ್ಯಕ್ಕೆ ಸಾಮಾನ್ಯವಾಗಿ ಕೆಂಪು ಬಣ್ಣದ, ಜರಿಯ ಅಂಚಿರುವ ಸೀರೆಯನ್ನು ಕೊಡವ ಪದ್ಧತಿಯಂತೆ ಉಟ್ಟುಕೊಳ್ಳುತ್ತಾರೆ. ಚಿನ್ನದ ಆಭರಣಗಳನ್ನು ತೊಟ್ಟು, ಹಣೆಗೆ

ಕುಂಕುಮವನ್ನಿಟ್ಟುಕೊಂಡು, ಮಣಿಮಾಲೆಯನ್ನು ಧರಿಸಿ, ಕೆಂಪು ವಸ್ತ್ರವನ್ನು ತಲೆಗೆ ಕಟ್ಟಿಕೊಂಡು, ಕೈಯಲ್ಲಿ ಕಂಚಿನ ತಾಳಗಳನ್ನು ಹಿಡಿದಿರುತ್ತಾರೆ. ತಾಳದ ಶಬ್ದದ ಜೊತೆಗೆ ಕೈಬಳೆಯ ಶಬ್ದವನ್ನು ಸೇರಿಸುತ್ತಾ ಒಂದು ಬದಿಯಿಂದ ಸಾಲಾಗಿ ನಿಧಾನ ಗತಿಯ ನೃತ್ಯದ ಮೂಲಕ ಬಂದು ಮಧ್ಯದಲ್ಲಿ ಉರಿಯುತ್ತಿರುವ ದೀಪದ ಸುತ್ತ ಪ್ರದಕ್ಷಿಣಾಕಾರದಲ್ಲಿ ಹಾಡಿನ ವೇಗಕ್ಕೆ ಅನುಗುಣವಾಗಿ ನೃತ್ಯದ ವೇಗವನ್ನೂ ಏರಿಳಿತ ಮಾಡಿ ನೃತ್ಯಕ್ಕೊಂದು ಆಕರ್ಷಣೆಯನ್ನು ತಂದುಕೊಡುತ್ತಾರೆ.

ಇಲ್ಲಿ ಹಾಡುವ ಕಲಾವಿದರೂ ಮಹಿಳೆಯರೇ ಆಗಿರುತ್ತಾರೆ. ಹಾಡುಗಾರರು ನೃತ್ಯಗೈಯುವ ಕಲಾವಿದರಿಂದ ಸ್ವಲ್ಪ ದೂರದಲ್ಲಿ ನಿಂತು ಹಾಡುತ್ತಿರುತ್ತಾರೆ. ಇಲ್ಲಿ ಬೇರೆ ಬೇರೆ ಹಾಡುಗಳಿದ್ದು ಪ್ರತಿ ಹಾಡಿಗೂ ನೃತ್ಯದ ಭಂಗಿಗಳು ವ್ಯತ್ಯಾಸವಾಗುತ್ತವೆ. ಒಮ್ಮೆ ಒಬ್ಬೊಬ್ಬರೇ ತಮ್ಮಷ್ಟಕ್ಕೆ ತಾವೇ ತಾಳಹಾಕಿ, ಹೆಜ್ಜೆ ಹಾಕಿ, ಹಿಂದೆ-ಮುಂದೆ ಬಾಗಿ, ಬಳುಕಿ, ನರ್ತಿಸಿದರೆ, ಇನ್ನೊಮ್ಮೆ ಇಬ್ಬಿಬ್ಬರು ಎದುರಾಗಿ, ಮತ್ತೊಮ್ಮೆ ಎಡಕ್ಕೊಮ್ಮೆ ಬಲಕ್ಕೊಮ್ಮೆ ತಿರುಗುತ್ತಾ ಎದುರು-ಬದುರಾಗಿ- ಹೀಗೆ ಬೇರೆ ಬೇರೆ ಭಂಗಿಗಳಲ್ಲಿ ತಾಳ ಕೊಡುತ್ತಾರೆ. ಯಾವ ಭಂಗಿಯಲ್ಲಿದ್ದರೂ ನೃತ್ಯದ ಚಲನೆ ಮಾತ್ರ ವೃತ್ತಾಕಾರವಾಗಿಯೇ ಇರುವಂತೆ ನರ್ತಿಸುತ್ತಾರೆ.

"'ಕಾವೇರಮ್ಮೆ ದೇವಿ ತಾಯಿ ಕಾಪಾಡೆಂಗಳಾ' ಎಂಬ ಪ್ರಾರ್ಥನೆಯೊಂದಿಗೆ ಆರಂಭವಾಗುವ ನೃತ್ಯಗೀತೆ, 'ಬಂದೀರಾ ಬೆಂದ್‌ಕೆಲ್ಲಾ' ಎಂದು ಅತಿಥಿ ಸತ್ಕಾರವನ್ನು ಕುರಿತು 'ಲೇ ಲೋ ಲೇ ಲೋ ಲೆಲ್ಲೊಲಾ' ಎಂದು ನೃತ್ಯದ ಲಯವನ್ನು ಕುರಿತು, 'ತೇನಾ ತೇನಾ ತೇನುಂಡಾ ತೇನ' ಎಂಬುದಾಗಿ ಪ್ರಕೃತಿಯನ್ನು ಕುರಿತು ಹಾಡುತ್ತಾ ಕೊನೆಯದಾಗಿ 'ನಮೋ ನಮೋ ನಮಸ್ತೆ' ಎಂಬುದಾಗಿ ಕಾವೇರಿ ಮಾತೆಯ ಮಂಗಳ ಸ್ತುತಿಯೊಂದಿಗೆ ನೃತ್ಯ ಮುಕ್ತಾಯವಾಗುತ್ತದೆ."[೧೯]

ಉಮ್ಮತ್ತಾಟ್‌ನ ಕುಣಿತ, ಶಾಸ್ತ್ರೀಯ ನೃತ್ಯಗಳಾದ ಭರತನಾಟ್ಯ ಮತ್ತು ಕಥಕ್ಕಳಿಯಂತೆ ಕಂಡು ಬಂದರೂ ಹಾಡುವ ಹಾಡುಗಳಿಂದ ಇದು ಜನಪದ ಕಲೆಯಾಗಿ ಗುರುತಿಸಿಕೊಂಡಿದೆ. ಶಿಷ್ಟ ಕಲೆಯಲ್ಲಿನ ಸಂಕೀರ್ಣತೆ ಈ ನೃತ್ಯದಲ್ಲಿ ಇಲ್ಲದಿರುವುದೇ ಇದು ಜನಪದ ಕಲೆಯಾಗಿ ಉಳಿಯಲು ಕಾರಣವಾಗಿದೆಯೆನ್ನಬಹುದು. 'ಕರ್ನಾಟಕ ಜನಪದ ಕಲೆಗಳ ಕೋಶ' ಕೃತಿಯಲ್ಲಿ ಚರ್ಚಿತವಾಗಿರುವ ಕಲೆಗಳ ಸಾಲಿನಲ್ಲಿ ಈ ನೃತ್ಯವೂ ಸೇರಿದೆ.[೨೦]

**ಕೊಂಬಾಟ್:** 'ಬೇಟೆಯನ್ನು ತಮ್ಮ ಬದುಕಿನ ಭಾಗವಾಗಿಸಿಕೊಂಡ ಕೊಡವರು ಬೇಟೆಯಾಡಿ ಪ್ರಾಣಿಗಳನ್ನು ಕೊಂದ ಪಾಪದ ಪರಿಹಾರಾರ್ಥವಾಗಿ ಅವುಗಳ ಕೋಡುಗಳನ್ನು ಕೈಯಲ್ಲಿ ಹಿಡಿದುಕೊಂಡು ಊರಿನ ಭದ್ರಕಾಳಿ ದೇವರ ಉತ್ಸವದ ಸಂದರ್ಭದಲ್ಲಿ ದೇವಸ್ಥಾನದ ಎದುರು ಕೆಲವೊಮ್ಮೆ ಸುತ್ತಲೂ ಕುಣಿದು ಕೋಡುಗಳನ್ನು ದೇವರಿಗೆ ಅರ್ಪಿಸುವ ಹಬ್ಬ' ಎಂದೂ ಗುರುತಿಸಲಾಗಿದೆ.[೨೧]

ಗ್ರಾಮದ ಹತ್ತಿರವಿರುವ ಭಗವತಿ ಕ್ಷೇತ್ರದಲ್ಲಿ ಕೊಂಬಾಟ್ ಕುಣಿತ ನಡೆಯುತ್ತದೆ, ಕುಣಿತದಲ್ಲಿ ಭಾಗವಹಿಸುವ ಸದಸ್ಯರೆಲ್ಲರೂ ಬಿಳಿ ಕುಪ್ಪಸವನ್ನು ಸೊಂಟಕ್ಕೆ ಕಟ್ಟಿ, ಕೆಂಪು

ಚೇಲೆಯನ್ನು ತಮ್ಮ ಎರಡು ಭುಜಗಳ ಮೇಲಿನಿಂದ ಮುಂಭಾಗ ಹಾಗೂ ಹಿಂಭಾಗಕ್ಕೆ ಕತ್ತರಿಯಾಕಾರದಲ್ಲಿ ಬರುವಂತೆ ಸುತ್ತಿ ಕಟ್ಟಿಕೊಳ್ಳುತ್ತಾರೆ. ಕುಣಿಯುವವರು ಮುಖ ಮತ್ತು ಕಂಕುಳ ಕೂದಲು ಕ್ಷೌರ ಮಾಡಿಸಿಕೊಳ್ಳುವುದು ಕಡ್ಡಾಯವಾಗಿರುತ್ತದೆ. 'ಕುಣಿಯಲು ಸಿದ್ಧರಾದ ಕಲಾವಿದರನ್ನು ಇಲ್ಲಿನ ಹರಿಜನರು ನೋಡುವಂತಿಲ್ಲ'[೬] ಎಂಬ ನಿಷೇಧವಿರುವ ವಿಚಾರ ಆಶ್ಚರ್ಯ ಉಂಟುಮಾಡುತ್ತದೆ. ಒಂದು ಸಮುದಾಯ ಭಾಗವಹಿಸುವುದಿರಲಿ, ಕಲೆಯನ್ನು ನೋಡುವಂತಿಲ್ಲ ಎಂಬ ನಿಯಮಗಳು ಆ ಕಲೆಯ ಪ್ರಾಧಾನ್ಯತೆಯನ್ನು ಕಡಿಮೆ ಮಾಡುತ್ತವೆ.

ಎಲ್ಲಾ ಸಿದ್ಧತೆಗಳಾದ ನಂತರ 'ಊರತಕ್ಕ'ನು ದೇವರಿಗೆ ಸಲ್ಲಬೇಕಾದ ಭಂಡಾರವನ್ನು ಅರ್ಪಿಸಿ ಕುಣಿಯುವವರಿಗೆ ಬಿಲ್ಲನ್ನು ನೀಡುತ್ತಾನೆ. ಹಿಂದೆಲ್ಲಾ ಬಿದಿರಿನ ಬಿಲ್ಲು ಬಳಸುತ್ತಿದ್ದರು. ಇಂದು ಬೆಳ್ಳಿಯ ಬಿಲ್ಲುಗಳನ್ನು ಬಳಸುವುದು ತಿಳಿದುಬರುತ್ತದೆ.

ಕೊಂಬಾಟ್‌ನಲ್ಲಿ ನಾಲ್ಕು ಪ್ರಕಾರದ ಕುಣಿತಗಳಿವೆ. ಮೊದಲನೆಯದು 'ಬಿಲ್ಲಾಟ್' ಆಗಿದ್ದು, ಇದು ಬಿಲ್ಲನ್ನು ಕೈಯಲ್ಲಿ ಹಿಡಿದು ಕುಣಿಯುವಂತದ್ದು. ಎರಡನೆಯದು ತೋಳುಗಳನ್ನು ನಾನಾ ಭಂಗಿಗಳಲ್ಲಿ ಚಲಿಸಿ ನಡೆಸುವ ಒಂದು ರೀತಿಯ ನೃತ್ಯ ಪ್ರಕಾರವಾದ 'ತೋಳಾಟ್'. 'ಪೀಲಿಯಾಟ್' ಎಂಬುದು ಮೂರನೆಯ ಪ್ರಕಾರದ ಕುಣಿತ. 'ಪೀಲಿ' ಎಂದರೆ ಗರಿ ಎಂದರ್ಥ. ಹಾಗಾಗಿ ನವಿಲಿನ ಗರಿಯನ್ನು ಹಿಡಿದು ಕುಣಿಯವುದರಿಂದ ಇದನ್ನು ಪೀಲಿಯಾಟ್ ಎನ್ನುತ್ತಾರೆ.

ಪ್ರಾಣಿಯ ಕೊಂಬುಗಳನ್ನು, ವಿಶೇಷವಾಗಿ ಜಿಂಕೆಯ ಕೊಂಬುಗಳನ್ನು ಹಿಡಿದು, ಭರ್ಜಿಯಂತೆ ವಿವಿಧ ರೀತಿಯಲ್ಲಿ ತಿರುಗಿಸುತ್ತಾ ಎದುರಿಗಿರುವವರಿಗೆ ತಿವಿಯುವಂತೆ ನಟಿಸುತ್ತಾ ಕುಣಿಯುವ ನೃತ್ಯವಾಗಿದೆ. ಹಿಂದೆ ಅರಣ್ಯಗಳಲ್ಲಿ ಜಿಂಕೆಗಳ ಕಾದಾಟ ಮತ್ತು ಅವುಗಳು ನುಸುಳುವ ಜಾಗ ಕಿರಿದಾಗಿದ್ದರೆ ದೊಡ್ಡದಾದ ಕೊಂಬುಗಳು ಮುರಿದು ಹೋಗುತ್ತಿದ್ದವು. ಸಹಜವಾಗಿ ಅರಣ್ಯ ಪ್ರವೇಶಿಸಿದವರಿಗೆ ಇವು ದೊರೆಯುತ್ತಿದ್ದವು. ಅವುಗಳನ್ನು ಕೊಂಬಾಟ್ ಕುಣಿತಕ್ಕೆ ಬಳಸುತ್ತಿದ್ದರು. ಈ ನೃತ್ಯವನ್ನು ಕೊಂಬಾಟ್ ಎಂದು ಕರೆದರೂ ಇದರಲ್ಲಿ ಈ ಮೇಲಿನ ನಾಲ್ಕು ಬಗೆಯ ಕುಣಿತಗಳಿದ್ದು ಎಲ್ಲವನ್ನೂ ಕೊಂಬಾಟ್ ಎಂಬ ಹೆಸರಿನಿಂದಲೇ ಕರೆಯುತ್ತಿದ್ದಾರೆ.

**ಹುತ್ತರಿ ಕೋಲಾಟ:** ಹುತ್ತರಿಹಬ್ಬದ ಆಚರಣೆಯಷ್ಟೇ ಆನಂತರದಲ್ಲಿ ನಡೆಯುವ ಸಾಂಸ್ಕೃತಿಕ ಚಟುವಟಿಕೆಗಳಿಗೂ ಪ್ರಾಮುಖ್ಯತೆ ನೀಡಲಾಗಿದೆ. ಹಬ್ಬ ಮುಗಿದ ನಂತರ ಐದು ದಿನಗಳ ಕಾಲ ಊರಿನ 'ಮಂದ್'(ಮೈದಾನ)ನ ಮಧ್ಯದಲ್ಲಿರುವ ಅಶ್ವತ್ಥ ಮರದ ಸುತ್ತಲೂ ಸಾಂಪ್ರದಾಯಿಕ ವೇಷ ಧರಿಸಿದ ಕೊಡವರೂ ಸೇರಿದ ಹಾಗೆ ಎಲ್ಲಾ ಜಾತಿಯ ಜನರೂ ಮನೋರಂಜನೆಗಾಗಿ ಕೋಲಾಟ, ನೃತ್ಯದಂತಹ ಕೆಲವು ಜಾನಪದ ಕ್ರೀಡೆಗಳಲ್ಲಿ ತೊಡಗುತ್ತಾರೆ. ಈ ಹಬ್ಬದಲ್ಲಿ ಯಾವ ಭೇದಭಾವವಿಲ್ಲದೆ ಗ್ರಾಮದ ಜನರೆಲ್ಲ ನಲಿದು ಸೌಹಾರ್ದತೆಯನ್ನು ಸಾರುವುದು ವಿಶೇಷ. ಹುತ್ತರಿ ಹಬ್ಬದ ಅಂಗವಾಗಿ ಊರಿನ ದೇವಸ್ಥಾನದ ಮಂದ್‌ನಲ್ಲಿ ನಡೆಯುವ ಕೋಲಾಟವೇ ಹುತ್ತರಿ ಕುಣಿತ. ಈ ಹಿಂದೆ ಒಂದು ವಾರಗಳ ಕಾಲ ನಡೆಯುತ್ತಿತ್ತು ಮತ್ತು ಇದಕ್ಕೆ ಸಿದ್ಧತೆಗಳು ನಾಲ್ಕೈದು ದಿನಗಳು ಮೊದಲೇ ನಡೆಯುತ್ತಿತ್ತು. ಗ್ರಾಮದ ಯುವಕರು, ಹಿರಿಯರು ಸೇರಿ ಕೋಲಾಟದ

ಅಭ್ಯಾಸವನ್ನು ನಡೆಸುತ್ತಿದ್ದರು. ಇತ್ತೀಚೆಗೆ ಉದ್ಯೋಗ ಮತ್ತು ಇತರೆ ಕೆಲಸಗಳ ಒತ್ತಡಗಳಿಂದಾಗಿ ಒಂದು ದಿನಕ್ಕೆ ಸೀಮಿತಗೊಂಡಿದೆ.

ಪೊಯಿಲೇ ಪೊಯಿಲೇ ಎಂದು ಆರಂಭವಾಗುವ ಕೋಲಾಟದ ಹಾಡುಗಳಲ್ಲಿ ದೇವರ ಆಶೀರ್ವಾದವನ್ನು ಬೇಡುವ ವಾದ್ಯಗಾರರಿಗೂ, ನೃತ್ಯಗಾರರಿಗೂ ಸಲಹೆಗಳನ್ನು ಕೊಡುವ, ಸರಸ ಹಾಗೂ ಹಾಸ್ಯ ಪ್ರಸಂಗಗಳು ಪ್ರಕಟವಾಗುತ್ತವೆ. ಒಟ್ಟು ನಾಲ್ಕು ಸುತ್ತುಗಳಿದ್ದು ಒಂದೊಂದರಲ್ಲೂ ವಿವಿಧ ರೀತಿಯ ಭಂಗಿಗಳು, ಕೋಲಿನ ಹೊಡೆತಗಳು ಬೇರೆ ಬೇರೆಯಾಗಿದ್ದು ವೃತ್ತಾಕಾರವಾಗಿ ಕುಣಿಯುತ್ತಾರೆ. ಈ ನೃತ್ಯಗಳಿಗೆ ಡೋಲು ಮತ್ತು ಓಲಗ ಹಿಮ್ಮೇಳವಾಗಿರುತ್ತವೆ.

'ಕೊಟ್ಟಡಾ ಮೇದ, ನೀ ಪೋಊದ್ ಪೊಲೆಯಾ ಪೊಯಿಲೇ ಪೊಯಿಲೇ' ಎಂದು ಆರಂಭವಾಗುವ ಹುತ್ತರಿ ಹಾಡು 'ಮೂಡ್ ನೋಡಿತ್ ಮರುಳಾತೆ ಬಾಲ ಪೊಯಿಲೇ ಪೊಯಿಲೇ, ಮೂಡ್ ಬೊಳ್‌ತಂಡ್ ಬಳಲುಂಡ್ ಕಪ್ಪು ಪೊಯಿಲೇ ಪೊಯಿಲೆ' ಎಂದು ಯುವಕರಿಗೆ ಬುದ್ಧಿ ಮಾತುಗಳನ್ನು ಹೇಳುತ್ತಾ ಕೊನೆಗೆ 'ಬಪ್ಪಕ ಪುತ್ತರಿ ಬಣ್ಣತ್ ಬಾತ್, ಪೋಪಕ ಪುತ್ತರಿ ಎಣ್ಣೆತೆ ಪೋತೆ, ದಮ್ಮಯ್ಯ ಪುತ್ತರಿ ಒಮ್ಮಲ್ಲಿ ಪೋತ್' ಎಂಬ ವಿರಹಗೀತೆಯೊಂದಿಗೆ ಮುಗಿಯುತ್ತದೆ.

**ಬೊಳಕಾಟ್:** ಹುತ್ತರಿ ಕಳೆದ ನಂತರ ಊರಿನ 'ಮಂದ್'ನಲ್ಲಿ ಸೇರಿ ಅಭಿನಯಿಸುವ ಆಕರ್ಷಕವಾದ ಸಾಂಪ್ರದಾಯಿಕ ನೃತ್ಯವಿದು. ಇದನ್ನು 'ಬೊಳಕ್ ಆಟ' 'ಬೆಳಕಿನ ಆಟ' ಎಂದೂ ಕರೆಯುತ್ತಾರೆ. ಈ ನೃತ್ಯದ ಮೂಲಕ ಇಗ್ಗುತಪ್ಪ ಸ್ವಾಮಿಗೆ ಸೇವೆಯನ್ನು ಸಲ್ಲಿಸುವುದು ಎಂದು ಕೊಡವರ ನಂಬಿಕೆ. ರಾತ್ರಿ ಸಮಯದಲ್ಲಿ ನಡೆಯವ ನೃತ್ಯವಿದು. ಬೆಳಗಿನ ಹೊತ್ತಲ್ಲಿಯೇ ಬೆಂಕಿಗೆ ಬೇಕಾಗುವಷ್ಟು ಕಟ್ಟಿಗೆಯನ್ನು ಸಿದ್ಧಗೊಳಿಸಿಕೊಂಡು ಒಂದೇ ಕಡೆ ರಾಶಿಹಾಕಿರುತ್ತಾರೆ. ಇತ್ತೀಚೆಗೆ ದೀಪಗಳನ್ನು ಮಧ್ಯದಲ್ಲಿಟ್ಟುಕೊಂಡು ಸುತ್ತಲೂ ಕುಣಿಯುತ್ತಾರೆ. ನೃತ್ಯ ಪ್ರಾರಂಭವಾಗುವ ಕೆಲವು ನಿಮಿಷಗಳ ಮೊದಲೇ ರಾಶಿಹಾಕಿರುವ ಕಟ್ಟಿಗೆಗೆ ಬೆಂಕಿ ಕೊಡುತ್ತಾರೆ. ಬೆಂಕಿ ರಭಸವಾಗಿ ಉರಿಯಲು ಶುರುವಾದಾಗ, ನೃತ್ಯ ಮಾಡುವವರು ಕುಪ್ಪಸ ದಟ್ಟಿಗಳನ್ನು ತೊಟ್ಟು ನೆತ್ತಿಗೆ ಮುಂಡಾಸವೇರಿಸಿ ದಟ್ಟಿಗೆ ಪೀಚೆಕತ್ತಿ(ಚಾಕುವಿನಂತ ಕಿರುಗತ್ತಿ)ಯನ್ನು ಸಿಕ್ಕಿಸಿ ಕೈಗಳಲ್ಲಿ ವಡಿಕತ್ತಿಗಳನ್ನು ಹಿಡಿದ ಆಟಗಾರರು ನೃತ್ಯ ಕಣಕ್ಕೆ ಇಳಿಯುತ್ತಾರೆ.[೨೩] ಅಗ್ನಿಕುಂಡದ ಸುತ್ತ ದುಡಿ ಮತ್ತು ಕೋಲುಗಳನ್ನು ಹಿಡಿದ ನಾಲ್ವರು ಹಾಡುತ್ತಾ ನಿಲ್ಲಬೇಕು. ಹೀಗೆ ನಿಂತ ಹಾಡುಗಾರರು ದುಡಿಕುಟ್ಟುತ್ತಾ "ಓ ಬೊಗ್ಗಿ ಬೋಹೋ, ಏಹೇಯೇ ಎಯ್ಯೋ ಏಹಿಯೋ, ಹುರ್ ತೂಮ ಬೊಗ್ಗಿ, ಬೊಗ್ಗಿ ಹೋ, ಓ ಏಹೀ ಯೋ ಹೋ ಎಯ್ಯೋ ಏಹಿಯೋ, ತುಮ್ಮಾದೇವಿ, ದೇವಿ ತಾಯ್, ಓ ಎಹಿಯೋ ಎಯ್ಯೋ ಏಹಿಯೋ, ಶಂಭೋ ಶಿವೋ, ಮಾದೇವೋ ಓ ಎಹಿಯೋ ಎಯ್ಯೋ ಎಹಿಯೋ" ಎಂದು ಹಾಡುತ್ತಿರುತ್ತಾರೆ.[೨೪] ಹೀಗೆ ಹಾಡುತ್ತಿರುವಾಗ ನೃತ್ಯಗಾರರು ತಮ್ಮ ಕೈಗಳಲ್ಲಿ ವಡಿಕತ್ತಿ, ಪೀಚುಕತ್ತಿಗಳನ್ನು ಎತ್ತಿ ಹಿಡಿದು ಅವುಗಳನ್ನು ಬೀಸುತ್ತ ದೇಹವನ್ನು ಆಗಾಗ ಬಳುಕಿ ಬಾಗಿಸುತ್ತ ಲಯಬದ್ಧವಾಗಿ ವೃತ್ತಾಕಾರವಾಗಿ ಕುಣಿಯುತ್ತಾ ಪ್ರತಿ ಸುತ್ತಿನಲ್ಲಿ ತಮ್ಮ

ವೀರಜೀವನದ ಅನುಭವ ವೈಶಿಷ್ಟ್ಯಗಳನ್ನು ನೃತ್ಯ ಮಾಧ್ಯಮದ ಮೂಲಕ ಅಭಿವ್ಯಕ್ತ ಪಡಿಸುತ್ತಾರೆ. ಸುಮಾರು ಮೂವತ್ತು ಪ್ರಕಾರದ ನೃತ್ಯಗಳು ಇಲ್ಲಿ ಪ್ರದರ್ಶಿತವಾಗುತ್ತವೆ. ಪ್ರತಿಯೊಂದು ಕುಣಿತವಾದೊಡನೆ ಮುಖ್ಯ ಕುಣಿತಗಾರ 'ಕೂಹ' ಎನ್ನುವ ಮೂಲಕ ನೃತ್ಯದ ಗತಿಯನ್ನು ಬದಲಾಯಿಸುತ್ತಾ ನೃತ್ಯಕ್ಕೆ ವಿಶೇಷ ಆಕರ್ಷಣೆ ತಂದುಕೊಡುತ್ತಾನೆ. ಹೀಗೆ ಸುಮಾರು ಮಧ್ಯರಾತ್ರಿಯವರೆಗೂ ಜರಗುವ ಈ ನೃತ್ಯವನ್ನು ಊರಿನವರೆಲ್ಲರು ಸುತ್ತಲೂ ಮಂಡಲಾಕಾರದಲ್ಲಿ ನಿಂತು ನೋಡಿ ಆನಂದ ಹೊಂದುತ್ತಾರೆ.

**ಪಡೆಕಳಿ:** ಕೊಡವರ ಯುದ್ಧವೀರಪ್ರಧಾನ ನೃತ್ಯವಿದು. ಇದನ್ನು ಪರ್ಯಕಳಿ, ಪರಿಯಕಳಿ, ಪಡೆಕಳಿ ಎಂದೆಲ್ಲ ಕರೆಯಲಾಗುತ್ತದೆ. ಹುತ್ತರಿ ಹಬ್ಬದ ಪ್ರಮುಖ ಕ್ರೀಡೆಗಳಲ್ಲಿ 'ಪಡೆಕಳಿ'ಯೂ ಒಂದಾಗಿದ್ದು ಊರ 'ಮಂದ್'ನಲ್ಲಿಯೇ ನಡೆಯುತ್ತದೆ. ಈ ಕ್ರೀಡೆಯಲ್ಲಿ ಶಾರೀರಿಕವಾಗಿ ಬಲಾಢ್ಯರಾದವರ ಶೌರ್ಯ ಪ್ರದರ್ಶನವೇ ಪ್ರಧಾನವಾದುದು. ಹಾಗಾಗಿ ಇದನ್ನು ಅಣಕು ಯುದ್ಧವೆಂದೂ ಕರೆಯಲಾಗುತ್ತದೆ. 'ನಿಸರ್ಗಸಹಜವಾದ ಕೆಚ್ಚಿನ ಬದುಕು, ಸ್ವಾತಂತ್ರವನ್ನು ಕಾಪಾಡಿಕೊಳ್ಳಬೇಕೆಂಬ ಕ್ಷಾತ್ರಗಳು ಕೊಡಗು ಜಿಲ್ಲೆಯ ಜನಪದಕ್ಕೆ ರಕ್ತಗತ. ಹೀಗಾಗಿ ಅಲ್ಲಿನ ಜನಪದ ಕಲೆಗಳ ಮುಖ್ಯ ಲಕ್ಷಣವೇ ವೀರಾವೇಶ'[೭೫] ಎಂಬ ಮಾತು 'ಪಡೆಕಳಿ'ಗೆ ನೇರವಾಗಿ ಅನ್ವಯಿಸುತ್ತದೆ. 'ಪಡೆಕಳಿ' ಆಡಲು ಬಯಸುವವರು ಸಾಂಪ್ರದಾಯಿಕ ಉಡುಗೆಗಳನ್ನು ಧರಿಸಿ, ಎಡಗೈಯಲ್ಲಿ ಪರ್ಯವನ್ನು (ಬೆತ್ತದ ಗುರಾಣಿ) ಹಾಗೂ ಬಲಗೈಯಲ್ಲಿ ಪಾತುರೆ (ಬೆತ್ತದ) ಕೋಲುಗಳನ್ನು ಹಿಡಿದು ಕುಣಿಯುತ್ತ "ನಾನ್ ಬಾಳ್, ನೀನ್ ಬಾಳ್, ಪಡೆಕೊಡ ಒಳಿಯುವ ಚಂಜಾಡಿ ಬಾಳ್, ಇಗ್ಗುತಪ್ಪ ಬಾಳ್, ಬೈತೂರಪ್ಪ ಬಾಳ್, ಬಾಳ್ ಬಾಳರೇ ಬಾಳ್"[೭೬] ಎಂದು ಹಾಡುತ್ತಾ ಅಲ್ಲಿ ನೆರೆದಿರುವ ತರುಣರನ್ನು ಆಟಕ್ಕೆ ಆಹ್ವಾನಿಸುತ್ತಾರೆ. ಆಸಕ್ತರು ಆಹ್ವಾನಕ್ಕೆ ಸಿದ್ಧರಾಗಿ ಮುಂದೆ ಬಂದು ಕುಣಿಯುವ ಸ್ಥಳಕ್ಕೆ ಇಳಿದು ಮೇಲಿನಂತೆ ಹಾಡುತ್ತಾ ಕುಣಿಯಲು ಶುರುಮಾಡುತ್ತಾರೆ. ಒಂದು ಕೈಯಲ್ಲಿ ಗುರಾಣಿ ಮತ್ತೊಂದು ಕೈಯಲ್ಲಿ ಕೋಲನ್ನು ಹಿಡಿದು ಮೊಣಕಾಲಿನ ಕೆಳಗಡೆಗೆ ಮಾತ್ರ ಹೊಡೆಯಬೇಕೆಂಬ ನಿಷೇಧವಿದೆ. ಒಂದು ವೇಳೆ ಮೊಣಕಾಲಿನ ಮೇಲೆ ಏಟು ಬಿದ್ದರೆ ಅವರಿಗೆ ಶಿಕ್ಷೆ ವಿಧಿಸಲಾಗುತ್ತದೆ. ವೈಯಕ್ತಿಕ ದ್ವೇಷಕ್ಕೆ ಇಲ್ಲಿ ಅವಕಾಶವಿರುವುದಿಲ್ಲ. ಹೀಗೆ ಆಟ ಆಕ್ರಮಣಕಾರಿಯಾಗಿ ಮುಂದುವರೆದು ಅನಾಹುತವಾಗಬಹುದು ಎಂದು ತಿಳಿದೊಡನೆ ನಾಡತಕ್ಕರು ಅವರ ಮಧ್ಯ ಪ್ರವೇಶಿಸಿ ಅಣಕು ಯುದ್ಧಕ್ಕೆ ಮಂಗಳ ಹಾಡುತ್ತಾರೆ. ಯುವಕರಿಬ್ಬರೂ ಪರಸ್ಪರ ಆಲಿಂಗಿಸಿಕೊಂಡು ಕ್ರೀಡಾಸ್ಫೂರ್ತಿಯನ್ನು ಮೆರೆಯಬೇಕು. ಪೆಮ್ಮಯ್ಯ ಮತ್ತು ಚೆಂಗುಮಣಿಯ ನಡುವೆ ನಡೆಯುವ ಈ ಪಡೆಕಳಿಯ ಸಾಹಸ, ಆವೇಶಯುತ ಹೋರಾಟ ಮೊದಲಾದ ಚಿತ್ರಣಗಳನ್ನು ಭಾರತೀಸುತರು ಸವಿವರವಾಗಿ ಚಿತ್ರಿಸಿದ್ದಾರೆ.[೭೭]

ಹಿಂದಿನ ಕಾಲದಲ್ಲಿ ಯುದ್ಧದ ಮಾದರಿಯಲ್ಲೇ ನಡೆಯುತ್ತಿದ್ದ 'ಪಡೆಕಳಿ' ಇಂದು ಕೇವಲ ಸಾಂಕೇತಿಕವಾಗಿ ಬಹಳ ಸರಳವಾಗಿ ಆಚರಿಸಲ್ಪಡುತ್ತಿದೆ ಎಂದು ಹೇಳಬಹುದು. ಈ ಕಾಲಗದಲ್ಲಿ ಗ್ರಾಮಸ್ಥರೇ ಎರಡು ಗುಂಪುಗಳಾಗಿ ನಿಂತು ತಮ್ಮ ಹೋರಾಟದ ಕೌಶಲ, ಆಯುಧ ಪ್ರಯೋಗದ

ನೈಪುಣ್ಯವನ್ನು ಪ್ರದರ್ಶಿಸುತ್ತಿದ್ದರಂತೆ. ಬರಬರುತ್ತಾ ಗ್ರಾಮದಲ್ಲಿ ಸುಪ್ತವಾಗಿದ್ದ ವಿರೋಧ ಮತ್ತು ಒಳಜಗಳಗಳಿಗೆ ಅವಕಾಶವಾಗಿ ಹಗೆತನಕ್ಕೆ ಆಸ್ಪದವೀಯತೊಡಗಿದ್ದರಿಂದ ಅದನ್ನು ಸಂಪೂರ್ಣವಾಗಿ ನಿಲ್ಲಿಸಿ ಅದರ ಬದಲಿಗೆ 'ಪರಿಯಕಳಿ' ಹೆಸರಿನ ಸರಳ ರೂಪವನ್ನು ಉಳಿಸಿಕೊಂಡಿರುವುದು ತಿಳಿದುಬರುತ್ತದೆ.[೭೮]

ಜನಪದರು ಪ್ರತಿ ಹಬ್ಬದ ನಂತರ ತಮ್ಮ ಬೇಸರ, ಏಕಾತಾನತೆಯನ್ನು ನಿವಾರಿಸಿಕೊಳ್ಳಲು ಅಥವಾ ಊರಿನ ಪ್ರತಿಯೊಬ್ಬರೂ ಒಂದು ಕಡೆ ಸೇರಿ ಸಂಭ್ರಮಿಸುವ ಸಲುವಾಗಿ ಕೆಲವು ನಿಯಮಾನುಸಾರ ಕ್ರೀಡೆಗಳು, ನೃತ್ಯಗಳನ್ನು ಆಚರಣೆಗೆ ತಂದಂತಹವುಗಳೇ ಇಂದು ಹಬ್ಬಗಳ ಒಂದು ಭಾಗವಾಗಿ ನಿಯಮಾನುಸಾರವಾಗಿ ಆಚರಿಸಲ್ಪಡುತ್ತಿವೆ. ಇವುಗಳಿಂದ ಮಾನಸಿಕ ಹಾಗೂ ದೈಹಿಕ ಸಾಮರ್ಥ್ಯವನ್ನು ಹೊಂದಲು ಮತ್ತು ತಮ್ಮ ವೈಯಕ್ತಿಕ ಶೌರ್ಯವನ್ನು ತೋರ್ಪಡಿಸಲು ಸಾಧ್ಯವಾಗುತ್ತಿತ್ತು. ಆದರೆ ಬದಲಾದ ಸನ್ನಿವೇಶದಲ್ಲಿ ಅತ್ಯಾಧುನಿಕ ತಂತ್ರಜ್ಞಾನಗಳಿಂದಾಗಿ ಇಡೀ ದೇಶವೇ ಒಂದು ಸಣ್ಣ ಹಳ್ಳಿಯಾಗಿರುವಾಗ, ಮನುಷ್ಯ ತನ್ನ ಸಂಬಂಧಗಳನ್ನೇ ಕಳೆದುಕೊಳ್ಳುತ್ತಿರುವಾಗ ಸಾಮೂಹಿಕ ಜೀವನ ನಡೆಸುವ, ಒಟ್ಟಿಗೆ ಸೇರುವ ಮಾತು ಕಷ್ಟವೇ ಸರಿ. ಅಂತದ್ದರಲ್ಲೂ ಕೊಡವರು ತಮ್ಮ ಹಬ್ಬದ ಸಾಂಪ್ರದಾಯಿಕ ಭಾಗವಾಗಿರುವ ಈ ರೀತಿಯ ವಿನೋದ ಕ್ರೀಡೆಗಳನ್ನು ಈಗಲೂ ಉಳಿಸಿಕೊಂಡು ಸಾಂಕೇತಿಕವಾಗಿಯೆನಿಸಿದರೂ ಸಾಂದರ್ಭಿಕವಾಗಿ ನಡೆಸಿಕೊಂಡು ಬರುತ್ತಿರುವುದು ವಿಶೇಷವೆನ್ನಬಹುದು.

### ೪.೬. ಕೊಡವರ ಬೇಟೆ

ಹಿಂದಿನ ಕಾಲದಲ್ಲಿ ಆದಿಮಾನವ ತನ್ನ ಉಳಿವಿಗಾಗಿ ಕಲಿತ ಮೊದಲ ಪಾಠವೇ ಬೇಟೆ. ಅಂದು ಗೆಡ್ಡೆ ಗೆಣಸುಗಳ ಜೊತೆಗೆ ಮಾಂಸವನ್ನು ಬೇಟೆಯ ಮೂಲದಿಂದ ಪಡೆಯಬೇಕಾದ ಅನಿವಾರ್ಯತೆಯಿತ್ತು. ಆರಂಭದಲ್ಲಿ ಜೀವನದ ಅನಿವಾರ್ಯತೆಗಾಗಿದ್ದ ಬೇಟೆ ಕಾಲಕ್ರಮೇಣ ಪ್ರಭಾವಶಾಲಿಗಳ, ಶ್ರೀಮಂತರ ಪಾಲಿನ ಯುದ್ಧಕಲೆಯಾಗಿ, ವಿನೋದವಾಗಿ, ಕ್ರೀಡೆಯಾಗಿ ಹಾಗೂ ಮನೋರಂಜನೆಯಾಗಿ ಹಲವು ಆಯಾಮಗಳನ್ನು ಪಡೆದುಕೊಂಡಿದೆ.

ಕೊಡವರ ಸಂಸ್ಕೃತಿಯಲ್ಲೂ ಬೇಟೆ ಪದ್ಧತಿ ಬಹುಮುಖ್ಯವಾಗಿ ಕಾಣಬರುತ್ತದೆ. ತಮ್ಮ ಧೈರ್ಯ ಸಾಹಸಗಳ ಕುರುಹಾಗಿ ಬೇಟೆ ಪಾರಂಪರಿಕವಾಗಿ ಬೆಳೆದು ಬಂದಿರುವುದನ್ನು ಗಮನಿಸಬಹುದು. ಪ್ರಾಚೀನ ಕಾಲದಲ್ಲಿ ಬೇಟೆ ಸಾಹಸಿಗಳ ಪಾಲಿಗೆ ಬಹಳ ಹೆಮ್ಮೆಯ ವಿಷಯವಾಗಿತ್ತು ಮತ್ತು ಅದಕ್ಕೆ ಸಮಾಜದ ಬೆಂಬಲವೂ ಇತ್ತು. ಇಂದಿಗೂ ಬೇಟೆಗೆ ಅಷ್ಟೇ ಪ್ರಾದಾನ್ಯತೆಯಿದ್ದರೂ ಕಾನೂನಿನ ವ್ಯಾಪ್ತಿಗೊಳಪಟ್ಟು ನಿಷೇಧಗೊಂಡಿದೆ. ಕೊಡಗು ದಟ್ಟ ಅರಣ್ಯ ಪ್ರದೇಶವಾಗಿದ್ದುದರಿಂದ ಇಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ಪ್ರಾಣಿಗಳಿದ್ದವು. ಹುಲಿ, ಚಿರತೆ, ಆನೆ, ಹಂದಿ, ಕರಡಿಗಳಂತಹ ಪ್ರಾಣಿಗಳು ಆಗಿಂದಾಗ್ಗೆ ಭಯಭೀತಿ ಒಡ್ಡುವುದರ ಜೊತೆಗೆ ಅವರು ಬೆಳೆದ ಬೆಳೆಗಳನ್ನು ಹಾನಿ ಮಾಡುತ್ತಿದ್ದವು. ಈ ಸಮಸ್ಯೆಯ ಪರಿಹಾರಕ್ಕಾಗಿ ಇಲ್ಲಿನ ನಿವಾಸಿಗಳು

ಬೇಟೆಯನ್ನು ರೂಢಿಸಿಕೊಂಡಿರಬಹುದು ಎಂದೇ ಹೇಳಲಾಗುತ್ತಿದೆ. ಇತ್ತೀಚೆಗೆ ಇದು ಪ್ರತಿಷ್ಠೆಯ ವಿಷಯವಾಗಿಯೂ ಕಾಣಬರುತ್ತಿದೆ. ಪ್ರಸ್ತುತ ಸಂಖ್ಯೆಯಲ್ಲಿ ಇಳಿಮುಖವಾಗಿದ್ದರೂ ಪ್ರಾಣಿಗಳು ಈಗಲೂ ಇವೆ. ಹಾಲೇರಿ ಅರಸರ ಆಳ್ವಿಕೆಗೂ ಮೊದಲು ಕೊಡಗಿನಲ್ಲಿ ಬೇಟೆ ಪ್ರಚಲಿತದಲ್ಲಿತ್ತು. ಪ್ರತಿಯೊಬ್ಬ ಕೊಡವನೂ ಬೇಟೆಯನ್ನು ತಿಳಿದಿರಬೇಕಿತ್ತು. ಎಂತಹ ಸಮಯದಲ್ಲೂ ಕೆಚ್ಚೆದೆಯಿಂದ ಮುನ್ನುಗ್ಗುವ ಮನೋಭಾವದ ವೀರ ಕೊಡವರು ಬೇಟೆಗೆ ಮನಸ್ಸು ಮಾಡುತ್ತಿದ್ದರು. ಮುಖ್ಯವಾಗಿ 'ಹುಲಿಬೇಟೆ' ಕೊಡವರ ಪಾಲಿಗೆ ಹಬ್ಬವಾಗಿದ್ದು, ಹುಲಿ ಕೊಂದವನನ್ನು ಅ ಹುಲಿಯ ಜೊತೆ ಮದುವೆ ಮಾಡಿಸುತ್ತಿದ್ದರು. ಇದನ್ನು 'ನರಿಮಂಗಲ'ವೆಂದು ಕರೆಯುತ್ತಿದ್ದರು. ಇತ್ತೀಚೆಗೆ ಈ ಪದ್ಧತಿ ಕಂಡುಬರುತ್ತಿಲ್ಲವೆಂದೇ ಹೇಳಬಹುದು. ಹುಲಿಯನ್ನು ಯಾವ ರೀತಿಯಲ್ಲಿ ಕೊಂದರೂ ಕೊಡವನು ನರಿಮಂಗಲಕ್ಕೆ ಅರ್ಹನಾಗುತ್ತಿದ್ದ.

ಕೊಡವರಿಗೆ ಧೈರ್ಯವೆಂಬುದು ಪರಂಪರಾಗತವಾಗಿ ಬಂದಿರುವುದನ್ನು ಕೊಡಗಿಗೆ ಸಂಬಂದಿಸಿದಂತಹ ಕೆಲವು ಕಾದಂಬರಿ ಹಾಗೂ ಕತೆಗಳಲ್ಲಿ ಗಮನಿಸಬಹುದು. ಮಾದಪ್ಪನೆಂಬ ಬೇಟೆಗಾರನಿಗೆ ಹುಲಿ ಬಂದು ಆ ಊರಿನ ಹೆಣ್ಣೊಬ್ಬಳನ್ನು ತಿಂದು ಹೋದ ವಿಷಯ ಗೊತ್ತಾದ ಮೇಲೆ ಅತ್ಯಂತ ಕೋಪದಿಂದ ಹೆಗಲ ಮೇಲೆ ಕೋವಿಯನ್ನು ಇಟ್ಟುಕೊಂಡು ಹೊರಡುವಾಗ ಊರಿನ ಜನ ಆತನನ್ನು ತಡೆದು ಜೊತೆಯಲ್ಲಿ ನಾಲ್ಕಾರು ಜನ ಬೇಂಟೆಗಾರರನ್ನು ಕರೆದುಕೊಂಡು ಹೋಗು ಎನ್ನುತ್ತಾರೆ. "ಅಂಜಿಕೆ ಎಂಬುದು ನರಿ ಬೇಟೆಗಾರನ ಹತ್ತಿರ ಸುಳಿಯದು. ಬೇರೆ ಜನರೇಕೆ? ಕೈಯಲ್ಲಿ ಕೋವಿ ಹಿಡಿದ ನಾನೊಬ್ಬನೆ ಸಾಕು"[೭೯] ಎಂದು ಮಾದಪ್ಪ ಆಡುವ ಮಾತುಗಳನ್ನು ಗಮನಿಸಿದರೆ ಹುಲಿ ಬೇಟೆಯ ವಿಷಯದಲ್ಲಿ ಕೊಡವರಿಗಿರುವ ಆಸಕ್ತಿ ಮತ್ತು ಉತ್ಸಾಹಗಳನ್ನು ಅರ್ಥೈಸಿಕೊಳ್ಳಲು ಸಾಧ್ಯವಾಗುತ್ತದೆ. ಮಾದಪ್ಪ ಆಡಿದ ಮಾತಿನಂತೆಯೇ ಕೆರಳಿದ ಹುಲಿ ಬೇಟೆಗೆ ತೆರಳಿ ತನ್ನ ಪ್ರಾಣವನ್ನೂ ಲೆಕ್ಕಿಸದೇ ಕೊಂದು ಮರಳುತ್ತಾನೆ. ಮಾದಪ್ಪನ ಮಗನಾದ ಚೆಂಗುಮಣಿಯು ದೊಡ್ಡವೀರಪ್ಪ ಪ್ರಭುಗಳನ್ನು ಹುಲಿಯ ಬಾಯಿಂದ ರಕ್ಷಿಸಿ ಪ್ರಭುಗಳ ಕೃಪೆಗೆ ಪಾತ್ರನಾಗಿ ಅವರಲ್ಲಿಯೇ ಸೈನಿಕನಾಗಿ ಸೇರುತ್ತಾನೆ.[೮೦]

ಬೇಟೆಯ ಪ್ರಾಧಾನ್ಯತೆಗೆ ಪೂರಕವಾದ ಮತ್ತೊಂದು ನಿದರ್ಶನ 'ಬೆಳ್ಳಿ ಮೂಡಿತು' ಕಾದಂಬರಿಯಲ್ಲಿ ದೊರೆಯುತ್ತದೆ. ತನ್ನ ಪ್ರೀತಿಯ ಹಸುವನ್ನು ಹುಲಿ ತಿಂದುದನ್ನು ನೆನಪಿಸಿಕೊಂಡು ಆ ಹುಲಿಯನ್ನು ಕೊಂದೇ ತೀರುವೆನೆಂದು ಕುದಿಯುವ ತಿಮ್ಮಯ್ಯ ಕೊಡವರ ವೀರಕಲಿಯಾಗಿ ಕಾಣಿಸಿಕೊಳ್ಳುತ್ತಾನೆ. ಹಸುವಿನ ಸಾವಿಗೆ ಹುಲಿಯೇ ಕಾರಣವೆಂದು ಅದನ್ನು ಕೊಲ್ಲಲು ಹಸು ಸತ್ತು ಬಿದ್ದಿದ್ದ ಜಾಗಕ್ಕೆ ಮತ್ತೆ ಹುಲಿ ಬಂದೇ ಬರುತ್ತದೆಯೆಂದು ಅದೇ ಜಾಗದಲ್ಲಿ ಅದರ ಸಂಹಾರಕ್ಕಾಗಿ ಎಲ್ಲಾ ಏರ್ಪಾಡುಗಳನ್ನು ಮಾಡಿಕೊಳ್ಳುತ್ತಾನೆ. ಮನೆಗೆ ಬಂದು ತನ್ನ ಹೆಂಡತಿಗೆ 'ಪೊನ್ನಿ ನಾನು ಹುಲಿ ಹೊಡೆಯಲು ಹೋಗಬೇಕು ಬೇಗ ನಾಲ್ಕು ರೊಟ್ಟಿಗಳನ್ನು ಸುಟ್ಟು, ಕಾಫಿಯನ್ನು ತಯಾರಿಸು'[೮೧] ಎಂದು ಹೇಳುವಾಗ ತಿಮ್ಮಯ್ಯನಿಗೆ ನಾನು ಏಕಾಂಗಿಯೆಂಬ ಚಿಂತೆಯಾಗಲಿ, ಅವನ ಹೆಂಡತಿಗೆ ಭಯವಾಗಲಿ ಕಾಣದಿರುವುದು ಕೊಡವರ ಧೈರ್ಯ ಸಾಹಸಗಳಿಗೆ ಸಾಕ್ಷಿಯಾಗುತ್ತದೆ. ಜೊತೆಯಲ್ಲಿ ನಾನೂ ಬರಲೇ ಎಂದು ಕೇಳಿದ ಸಹೋದರ

ನಂಜಪ್ಪನನ್ನು ನಿರಾಕರಿಸಿ 'ಆ ಹುಲಿಯನ್ನು ನಾನೊಬ್ಬನೇ ನೋಡಿಕೊಳ್ಳುತ್ತೇನೆ. ಅದು ನನ್ನ ಬೇಟೆ'[೮೨] ಎಂಬ ವಿಶ್ವಾಸದ ನುಡಿಗಳನ್ನಾಡುತ್ತಾನೆ. ಹಸುವನ್ನು ಕೊಂದು ತಿಂದಿದ್ದ ಹುಲಿಯನ್ನು ತಿಮ್ಮಡು ಬೇಟೆಯಾಡಿ ಕೊಂದು, ಮರದ ಮೇಲಿಂದ ಕೆಳಗಿಳಿಯಬೇಕೆನ್ನುವಷ್ಟರಲ್ಲಿ ಮತ್ತೊಂದು ಹುಲಿ ಪ್ರತ್ಯಕ್ಷವಾದಾಗ ಆತನಿಗೆ ಆ ಕ್ಷಣಕ್ಕೆ ಭಯವಾಗಿದ್ದನ್ನು ಹೊರತುಪಡಿಸಿ ಅದನ್ನೂ ಕೊಲ್ಲುವ ಮನಸ್ಸು ಮಾಡುತ್ತಾನೆ ತಿಮ್ಮಡು. ಆದರೆ ಅಷ್ಟರಲ್ಲಿ ಆತನ ಕೈಯಿಂದ ಜಾರಿ ಕೋವಿ ಕೆಳಗೆ ಬಿದ್ದುದರಿಂದ ಆ ಹುಲಿಯ ಬೇಟೆ ಸಾಧ್ಯವಾಗದೆ ಅಸಹಾಯಕನಾಗಿ ಕುಳಿತಿರುತ್ತಾನೆ. ತಡರಾತ್ರಿಯಾದರೂ ಅಣ್ಣ ಮನೆಗೆ ಬಾರದಿದ್ದನ್ನು ತಿಳಿದ ತಮ್ಮ ನಂಜಪ್ಪ ತನ್ನ ಕೋವಿಯನ್ನು ಹೆಗಲಿಗೇರಿಸಿ ಆ ರಾತ್ರಿಯಲ್ಲಿಯೇ ಕಾಡಿಗೆ ತೆರಳುವುದನ್ನು ಕಂಡರೆ ಬೇಟೆಗೆ ಆ ಕಾಲದಲ್ಲಿ ಯುವಕರು ತೋರುತ್ತಿದ್ದ ಉತ್ಸಾಹ ಅರಿವಾಗುತ್ತದೆ.

ಕೊಡಗಿನಲ್ಲಿ ಮಹಿಳೆಯರು ಸಹ ಬೇಟೆಯ ಬಗ್ಗೆ ಆಸಕ್ತಿ ವಹಿಸಿದ್ದರು ಎಂಬುದಕ್ಕೆ ಬಯಲುದಾರಿ ಕಾದಂಬರಿಯಲ್ಲಿ ನಿದರ್ಶನ ದೊರಕುತ್ತದೆ. ಕರುಂಬಯ್ಯ ಮತ್ತು ಚೋಂದಮ್ಮ ಹಂದಿ ಬೇಟೆಗಾಗಿ ತೆರಳಿರುವಾಗ ಅಣ್ಣ ಕರುಂಬಯ್ಯನ ಕೋವಿ ಏಟಿನಿಂದ ತಪ್ಪಿಸಿಕೊಂಡಂತಹ ಹಂದಿಯು ಚೋಂದಮ್ಮನ ಈಡಿಗೆ ಸಾಯುತ್ತದೆ[೮೩] ಕೊಡಗಿನಲ್ಲಿ ವಾಸಿಸುವ ಬೇರೆ ಬೇರೆ ಸಮುದಾಯಗಳಲ್ಲೂ ಬೇಟೆ ಪದ್ಧತಿ ಇತ್ತು ಎಂಬುದಕ್ಕೆ ಉದಾಹರಣೆಗಳು ದೊರೆಯುತ್ತವೆ. ಇಲ್ಲಿನ ಬುಡಕಟ್ಟು ಜನಾಂಗವಾದ ಪಣಿಯರು, ಎರವರಲ್ಲಿಯೂ ಬೇಟೆಯ ಸಂಸ್ಕೃತಿ ಕಾಣಿಸುತ್ತದೆ. ಕಾಡುಮೇಡುಗಳಲ್ಲಿ ಅಲೆಯುತ್ತ ಜೀವನ ಸಾಗಿಸುವ ಇವರಿಗೆ ಬೇಟೆಗೆ ಅನುಕೂಲವಾಗುವ ಕೋವಿಗಳಂತಹ ಆಯುಧಗಳನ್ನು ಹೊಂದಲು ಸಾಧ್ಯವಾಗದೆ ತಾವೇ ಮಾಡಿಕೊಳ್ಳುತ್ತಿದ್ದ ಬಿಲ್ಲುಬಾಣ, ಕವಣೆ ಮೊದಲಾದ ಸಾಮಾನ್ಯ ಆಯುಧಗಳ ಮೂಲಕ ಹಂದಿಯೂ ಸೇರಿದ ಹಾಗೆ ಆಹಾರಕ್ಕೆ ಯೋಗ್ಯವಾದ ಪ್ರಾಣಿ, ಪಕ್ಷಿಗಳನ್ನು ಕೊಂದು ತಿನ್ನುತ್ತಿದ್ದರು ಎಂಬ ವಿವರಗಳು 'ಗಿರಿಕನ್ನಿಕೆ' ಕಾದಂಬರಿಯಲ್ಲಿ ಸಿಗುತ್ತವೆ. ಬುಡಕಟ್ಟಿನವರು ಅರಣ್ಯಗಳಲ್ಲಿಯೇ ವಾಸಿಸುತ್ತಿದ್ದುದರಿಂದ ಇವರಿಗೆ ಬೇಟೆ ಅನಿವಾರ್ಯವಾಗಿತ್ತು. ಕೊಡವರು ಪ್ರತಿಷ್ಠೆಗಾಗಿ ಬೇಟೆಯನ್ನು ಅವಲಂಬಿಸಿದ್ದರೆ, ಇವರು ಪ್ರಾಣಿಗಳಿಂದ ತಮ್ಮ ರಕ್ಷಣೆ ಮತ್ತು ಆಹಾರಕ್ಕಾಗಿ ಬೇಟೆಯನ್ನು ಅವಲಂಬಿಸಿದ್ದರು. ಕೊಡವರಂತೆಯೇ ಪಣಿಯರೂ ಕೂಡ ತಾವು ಬೇಟೆಯಾಡಿದ ಪ್ರಾಣಿ ದೊಡ್ಡದಾಗಿದ್ದರೆ ಇಡೀ ಸಮುದಾಯವೇ ಸಾಮರಸ್ಯದಿಂದ ಹಂಚಿ ತಿನ್ನುವುದು ತಿಳಿದುಬರುತ್ತದೆ.[೮೪]

ಕೊಡವರು ಕ್ಷತ್ರಿಯರು ಎಂದು ಪರಿಗಣಿಸಲ್ಪಟ್ಟ ಕಾರಣದಿಂದ ೧೮೬೧ರಲ್ಲಿ ಇವರಿಗೆ ಬಂದೂಕನ್ನು ಹೊಂದಲು ಅವಕಾಶವನ್ನು ನೀಡಲಾಯಿತು.[೮೫] ಇದರ ಫಲವಾಗಿ ಕೊಡವರು ಬೇಟೆಯನ್ನು ತಮ್ಮ ಪ್ರತಿಷ್ಠೆಯ ವಿಷಯವಾಗಿ ತೆಗೆದುಕೊಂಡು ನಿರಂತರವಾಗಿ ತಮ್ಮ ಜಮೀನುಗಳ ರಕ್ಷಣೆ ಮತ್ತು ಆಹಾರದ ದೃಷ್ಟಿಯಿಂದ ಹಲವು ಪ್ರಾಣಿಗಳನ್ನು ಕೊಲ್ಲುತ್ತಾ ಬಂದರು. ಕೊಡಗಿನ ರಾಜರುಗಳಲ್ಲಿ ಬೇಟೆಯಾಡುವುದರಲ್ಲಿ ವೀರರಾಜೇಂದ್ರನಷ್ಟು ನೈಪುಣ್ಯತೆ ಮತ್ತು ಆಸಕ್ತಿ

ಬೇರೆ ಯಾವ ರಾಜರಿಗೂ ಇರಲಿಲ್ಲವೆಂದು ಇತಿಹಾಸ ಹೇಳುತ್ತದೆ.[೬೬] ಈ ಮಾತನ್ನು ಗಮನಿಸಿದರೆ ಕೊಡಗಿನಲ್ಲಿ ಬೇಟೆಗೆ ಪ್ರಾಚೀನ ಕಾಲದ ಪರಂಪರೆಯಿದೆಯೆಂಬುದು ತಿಳಿದುಬರುತ್ತದೆ.

ಕೊಡಗಿನಲ್ಲಿ ಕೊಡವರ ಹೊರತಾಗಿ ಇಲ್ಲಿನ ಅರೆಭಾಷೆ ಗೌಡರು ಬೇಟೆ ಸಂಸ್ಕೃತಿಯನ್ನು ಅಳವಡಿಸಿಕೊಂಡಿದ್ದನ್ನು ಕಾಣಬಹುದು. ಹಿಂದೆ ಇವರೂ ಸಹ ನರಿಮಂಗಲಕ್ಕೆ ಅರ್ಹರಾಗುತಿದ್ದರು. ಇತ್ತೀಚೆಗೆ ಮರೆಯಾಗಿದೆ. ಇವರಲ್ಲದೆ ಇಲ್ಲಿನ ಬೇರೆಬೇರೆ ಜನಾಂಗದವರೂ ಕೂಡ ಬೇಟೆಯಲ್ಲಿ ತೊಡಗಿರುವುದು ಕಂಡುಬಂದರೂ ಅವರಿಗೆ ಹುಲಿಯಂತಹ ಪ್ರಾಣಿಯನ್ನು ಕೊಲ್ಲುವುದಾಗಲಿ, ಕೊಂದರೂ ಅವರಿಗೆ ಹುಲಿಯೊಂದಿಗೆ ಮದುವೆ ಮಾಡಿಸುವುದಾಗಲಿ ಎಲ್ಲಿಯೂ ಕಂಡುಬರುವುದಿಲ್ಲ.

## ೪.೭. ಕೊಡವರ ಅನನ್ಯತೆ

ಕೊಡವರು ತಮ್ಮ ಬದುಕನ್ನೇ ಒಂದು ಅನನ್ಯತೆಯ ಭಾಗವನ್ನಾಗಿಸಿಕೊಂಡಿದ್ದಾರೆ. ಎಲ್ಲೇ ಇದ್ದರೂ ಇವರು ಕೊಡಗರು ಎಂದು ಗುರತಿಸಬಹುದಾದಂತಹ ಕೆಲವು ವಿಶಿಷ್ಟತೆಗಳನ್ನು ಹೊಂದಿದ್ದಾರೆ. ಅಂತಹವುಗಳಲ್ಲಿ ಕೊಡವರ ವೇಷಭೂಷಣ ಮತ್ತು ಹೆಸರು, ಆಹಾರ ಮತ್ತು ಮದ್ಯಸೇವನೆ, ಹಾಗೂ ಹಾಕಿ ಉತ್ಸವಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ.

**ವೇಷ ಭೂಷಣ ಮತ್ತು ಹೆಸರು:** ಕೊಡವರ ಹೆಸರು ಮತ್ತು ಅವರ ಸಾಂಪ್ರದಾಯಿಕ ಉಡುಗೆಗಳು ಇವರು ಎಲ್ಲಿದ್ದರೂ ಕೊಡವರೇ ಎಂಬುದನ್ನು ಸೂಚಿಸುತ್ತವೆ. ಅಂತಹ ವೈಶಿಷ್ಟ್ಯತೆಯಿಂದ ಕೂಡಿವೆ ಇವರ ಹೆಸರುಗಳು ಮತ್ತು ಉಡುಗೆಗಳು. ಕೊಡವ ಪುರುಷರು ಮತ್ತು ಮಹಿಳೆಯರು ಮದುವೆ, ಹಬ್ಬ, ಆಚರಣೆಗಳ ಸಂದರ್ಭದಲ್ಲಿ ತೊಡುವ ಸಾಂಪ್ರದಾಯಿಕ ಉಡುಗೆಗಳು ತುಂಬಾ ಆಕರ್ಷಕವಾದವುಗಳು. ಪುರುಷರು ವಿಶೇಷ ಸಂದರ್ಭಗಳಲ್ಲಿ ಧರಿಸುವ ಉಡುಗೆಗಳೆಂದರೆ ಕುಪ್ಯ, ಚೇಲೆ ಮತ್ತು ಮಂಡೆತುಣಿ. ಮಹಿಳೆಯರು ಸಾಮಾನ್ಯ ದಿನಗಳಲ್ಲಿ ತುಂಬು ತೋಳಿನ ರವಿಕೆ, ಸೀರೆ ಧರಿಸುತ್ತಾರೆ.

ಕುಪ್ಯ ಎಂದರೆ ಕುಪ್ಪಸವಾಗಿದ್ದು ನೀಳವಾಗಿರುತ್ತದೆ. ಇದನ್ನು ನೀಳ್ಗುಪ್ಪಸವೆಂದೂ ಕರೆಯಬಹುದು. ಇದು ಮೊಣಕಾಲಗಿಂತ ಕೆಳಗೆ ಬರುವಂತಹ ಅರ್ಧ ತೋಳಿನ ನಿಲುವಂಗಿ. ಕುಪ್ಯವೆಂಬ ನಿಲುವಂಗಿ ಕೊಡವರ ಹಿರಿತನದ ಸಂಕೇತವಾಗಿಯೂ, ಯಜಮಾನಿಕೆಯ ಸಂಕೇತವಾಗಿಯೂ, ಗೌರವಾನ್ವಿತ ಉಡುಗೆಯಾಗಿಯೂ ಪರಿಗಣಿಸಲ್ಪಟ್ಟಿದ್ದು, ಕೊಡವರ ಸಂಪ್ರದಾಯದ ಸಂಕೇತವಾಗಿ ಮತ್ತು ಕೊಡವ ಪರಂಪರೆಯ ಪ್ರತೀಕವಾಗಿ ಗುರತಿಸಲ್ಪಟ್ಟಿದೆ.

ಸೊಂಟಕ್ಕೆ ಕಟ್ಟಲು ಬಳಸುವ ಕೆಂಪು ಪಟ್ಟಿಯಂತಿರುವ ಬಟ್ಟೆಯೇ ಚೇಲೆ. ಇದು ಹಿಂದೆ ಬೇರೆ ಬೇರೆ ಬಣ್ಣಗಳಲ್ಲಿ ಬಳಕೆಯಲ್ಲಿತ್ತು. ಆದರೆ ಇತ್ತೀಚೆಗೆ ಕೆಂಪು ಬಣ್ಣದ್ದೇ ಬಳಕೆಯಾಗುತ್ತಿದೆ. ಚೇಲೆಯ ಅಂಚಿನಲ್ಲಿ ಸೀರೆಯ ಸೆರಗಿನಂಚಿನಂತೆ ಕುಚ್ಚುಗಳನ್ನು ಕಟ್ಟಿರುತ್ತಾರೆ. ಅಲ್ಲದೆ ಚೇಲೆಯ

ಎರಡು ಬದಿಗಳುದ್ದಕ್ಕೂ ಸುಮಾರು ನಾಲ್ಕು ಬೆರಳಗಲಕ್ಕೆ ಚಿನ್ನದ ಬಣ್ಣದ ಜರತಾರಿಯಿರುತ್ತದೆ. ಈ ಚೇಲೆಯಿಂದ ಕುಪ್ಪಸವನ್ನು ಬಿಗಿದು ಕಟ್ಟುವುದು ಮತ್ತು ಪೀಚೆಕತ್ತಿಯನ್ನು ಸಿಕ್ಕಿಸಿಕೊಳ್ಳುವುದಕ್ಕೆ ಅನುಕೂಲವಾಗುತ್ತದೆ. ಚೇಲೆಯು ಸೊಂಟಕ್ಕೆ ಅನುಕೂಲವಾದಷ್ಟು ಬಿಗಿಯಾಗಿ ಸುತ್ತಿ ಕಟ್ಟುವುದರಿಂದ ಸಾಹಸ ಚಟುವಟಿಕೆಗಳಲ್ಲಿ ದೇಹಕ್ಕೆ ಉತ್ತಮ ದೃಢತೆಯನ್ನು ಕೊಡುತ್ತದೆ.

ಕೊಡವ ಭಾಷೆಯಲ್ಲಿ 'ಮಂಡೆ' ಎಂದರೆ ತಲೆ, 'ತುಣಿ' ಎಂದರೆ ಬಟ್ಟೆ, ಎಂದರ್ಥ. ತಲೆಗೆ ಸುತ್ತಿಕೊಳ್ಳುವ ಪೇಟವನ್ನೇ ಮಂಡೆತುಣಿ ಎನ್ನಲಾಗುತ್ತದೆ. ಇದನ್ನು ಅರೇಬಿಯನ್ನರು ಸುತ್ತಿಕೊಳ್ಳುವ ವಸ್ತ್ರವೆಂದೂ, ಕೊಡವರೂ ಅಲ್ಲಿಂದಲೇ ಬಂದಿರಬಹುದೆಂದೂ ವಾದಿಸಲಾಗಿದೆ. ಆದರೆ ಭಾರತದಲ್ಲೇ ಅನೇಕ ರಾಜ್ಯಗಳಲ್ಲಿ ಈ ರೀತಿಯ ತಲೆವಸ್ತ್ರಗಳನ್ನು ಬಳಸುವುದು ಕಂಡುಬರುತ್ತದೆ. ಆ ಕಾರಣದಿಂದ ಇದು ವಿದೇಶಿಯವಲ್ಲವೆಂದು ತೀರ್ಮಾನಿಸಲಾಗಿದೆ. ಇದನ್ನು ಹೆಚ್ಚು ಕಡಿಮೆ ಮೈಸೂರು ಪೇಟದ ಮಾದರಿಯಲ್ಲೇ ತಲೆಗೆ ಸುತ್ತಲಾಗುವುದು. ಕೊಡವ ಮದುಮಗನ ತಲೆಗೆ ಕಟ್ಟುವ ಮಂಡೆತುಣಿಯನ್ನು 'ಪಾನಿ ಮಂಡೆತುಣಿ' ಎನ್ನುವರು. ಇದರ ಹಿಂಭಾಗದ ಕೆಳ ಅಂಚಿನಲ್ಲಿ ಒಳಗಡೆ ಕಾಗದವನ್ನಿಟ್ಟು, ಆ ಭಾಗ ಗಡುಸಾಗಿರುವಂತೆ ಮಾಡಿ, ಮಂಡೆತುಣಿಗೆ ಒಂದು ವಿಶೇಷ ರೂಪಬರುವಂತೆ ಮಾಡಲಾಗುತ್ತದೆ.

ಕೊಡವ ಮಹಿಳೆಯರು ಎಲ್ಲರಂತೆ ಸೀರೆ ಮತ್ತು ರವಿಕೆಗಳನ್ನು ಧರಿಸಿದರೂ ಅದರಲ್ಲಿ ವೈಶಿಷ್ಟ್ಯತೆಯನ್ನು ಅಳವಡಿಸಿಕೊಂಡಿದ್ದಾರೆ. ಸಾಮಾನ್ಯವಾಗಿ ಇವರು ತುಂಬು ತೋಳಿನ ರವಿಕೆಯನ್ನು ಧರಿಸುತ್ತಾರೆ. ಕೊಡವರ ವಿವಾಹದಲ್ಲಿ ಮದುವಣಗಿತ್ತಿ ತುಂಬು ತೋಳಿನ ರವಿಕೆಯನ್ನು ಧರಿಸಲೇಬೇಕು. ಹಿಂದೆ ಕಾಫಿ ತೋಟದಲ್ಲಿ ಕೆಲಸ ನಿರ್ವಹಿಸುವಾಗ ಕ್ರಿಮಿಕೀಟಗಳು ಕಡಿಯುವುದನ್ನು ತಡೆಯಲು, ಬಿಸಿಲು, ಚಳಿಯು ಕೈಗೆ ತಾಗದಂತಿರಲು ತುಂಬು ತೋಳಿನ ರವಿಕೆಯನ್ನು ಧರಿಸುವುದನ್ನು ರೂಢಿಸಿಕೊಂಡಿರಬಹುದು.

ಸಾಮಾನ್ಯ ದಿನಗಳಲ್ಲಿ ಕೊಡವ ಮಹಿಳೆಯರು ಧರಿಸುವ ಉಡಪುಗಳಿಗಿಂತ ಮದುವೆ, ಹಬ್ಬ ಮೊದಲಾದ ವಿಶೇಷ ಸಂದರ್ಭಗಳಲ್ಲಿ ದರಿಸುವ ಕ್ರಮ ಮಾತ್ರ ಎಲ್ಲರನ್ನೂ ಆಕರ್ಷಿಸುತ್ತದೆ. ಎಲ್ಲ ಮಹಿಳೆಯರು ಮುಂದೆ ಸೆರಗು ಹಿಡಿದು ಕಟ್ಟಿದರೆ ಕೊಡವತಿಯರು ಹಿಂದಕ್ಕೆ ಸೆರಗನ್ನು ಕಟ್ಟುತ್ತಾರೆ. ಇದನ್ನು ಕುರಿತ ಐತಿಹ್ಯದ ಕಾರಣವೊಂದು ಹೀಗಿದೆ. ಕವೇರ ಪುತ್ರಿಯು ಅಗಸ್ತ್ಯ ಮುನಿಯಿಂದ ದೂರವಾಗಿ ನದಿರೂಪದಲ್ಲಿ ಹರಿಯುತ್ತಿದ್ದ ಕಾವೇರಿಯನ್ನು ಇಲ್ಲಿನ ಮಹಿಳೆಯುರು ಕಾಲು ಅಡ್ಡಗಟ್ಟಿ ತಡೆಯಲು ಪ್ರಯತ್ನಿಸಿದರು. ನೀರು ಸೊಂಟದವರೆಗೂ ಬಂದು ರಭಸವಾಗಿ ಹರಿಯಲು ಆರಂಭಿಸಿದಾಗ ನೀರಿನ ರಭಸಕ್ಕೆ ಮಹಿಳೆಯರ ಸೆರಗು ಹಿಂಬದಿಗೆ ಸರಿಯಿತಂತೆ ಎಂಬುದು ಕೊಡವರಲ್ಲಿರುವ ನಂಬಿಕೆ. ಆದರೆ ಈ ನಂಬಿಕೆ ಸತ್ಯಕ್ಕೆ ದೂರವಾದುದು ಎಂದು ಹೇಳಬಹುದು. ಒಟ್ಟಿನಲ್ಲಿ ಈ ರೀತಿಯ ಸೀರೆಯುಟ್ಟುಕೊಂಡ ಯಾರೇ ಆದರೂ ಅವರನ್ನು ಕೊಡವತಿ ಎಂದು ಕೇಳುವಷ್ಟರ ಮಟ್ಟಿಗೆ ಈ ವಿಧಾನ ಜನಪ್ರಿಯಗೊಂಡಿದೆ.

ಕೊಡವರು ತಮ್ಮ ಹೆಸರುಗಳ ಮೂಲಕವೂ ಇತರರ ಆಕರ್ಷಣೆಗೊಳಗಾಗಿದ್ದಾರೆ. ಇವರ ಹೆಸರುಗಳು ಕರ್ನಾಟಕದಲ್ಲಿ ಕನ್ನಡಿಗರಿಟ್ಟುಕೊಳ್ಳುವ ಹೆಸರುಗಳೇ ಆಗಿವೆಯಾದರೂ ಕೇಳಿದ ತಕ್ಷಣ ಇವು ಕೊಡವರ ಹೆಸರುಗಳು ಎಂದು ತೋರುತ್ತವೆ. 'ಚೋಂದಮ್ಮ' ಎಂಬ ಹೆಸರನ್ನು ಕೇಳಿದ ತಕ್ಷಣವೇ ಓ ನೀವು ಕೊಡಗಿನವರೆಂದು ತೋರುತ್ತದೆ[೮೭] ಎಂದು ಕೇಳುವುದು ಕೊಡವರ ಹೆಸರಿನ ವಿಶೇಷತೆಯನ್ನು ಸೂಚಿಸುತ್ತದೆ. ಈ ಹೆಸರುಗಳೊಂದಿಗೆ ಕೊಡವರಿಗೆ ಮನೆತನದ ಹೆಸರುಗಳೂ ಇವೆ. ಇದನ್ನು ಕೊಡವ ಭಾಷೆಯಲ್ಲಿ 'ಮನೆಪೆದ' ಎಂದು ಕರೆಯಲಾಗಿದೆ. ಸುಮಾರು ೮೯೮ ಕೊಡವ ಮನೆತನದ ಹೆಸರುಗಳಿರುವುದು ಗುರುತಿಸಲ್ಪಟ್ಟಿವೆ.[೮೮]

ಚಂಗಪ್ಪ, ಉತ್ತಪ್ಪ, ಕರುಂಬಯ್ಯ, ಕಾರಿಯಪ್ಪ, ಅಪ್ಪಯ್ಯ, ಅಯ್ಯಪ್ಪ, ಮೇದಪ್ಪ, ಸೋಮಯ್ಯ, ನಂಜಪ್ಪ, ದೇವಯ್ಯ, ಭೀಮಯ್ಯ, ಮಾದಯ್ಯ ಮಾಚಯ್ಯ, ಕಾವೇರಿಯಪ್ಪ, ಪೊನ್ನಪ್ಪ, ಬೋಪಯ್ಯ, ಪೆಮ್ಮಯ್ಯ, ಮೊದಲಾದ ಪುರುಷರ ಹೆಸರುಗಳು ಕಂಡುಬರುತ್ತವೆ. ಇದೇ ರೀತಿ ಕಾವೇರಿಯಮ್ಮ, ಬೊಳ್ಳಮ್ಮ, ದೇಚಮ್ಮ, ಬೋಜಮ್ಮ, ಚೋಂದಮ್ಮ ಮುಂತಾದ ಮಹಿಳೆಯರ ಹೆಸರುಗಳು ಚಾಲ್ತಿಯಲ್ಲಿವೆ.

ಕೊಡವರಲ್ಲಿ ಹೀಗೆ ಕೆಲವೇ ಕೆಲವು ಹೆಸರುಗಳಿದ್ದು ಅವುಗಳೇ ಪನರಾವರ್ತನೆ ಯಾಗುವುದರಿಂದ ಅವರು ಬೇರೆ ಬೇರೆ ಎಂದು ಗುರುತಿಸಲು ಮನೆತನದ ಹೆಸರನ್ನು ಬಳಸುತ್ತಾರೆ. ಉದಾಹರಣೆಗೆ– ಮಂಡೆಪಂಡ, ಕೊರವಂಡ, ಅಡ್ಡಂಡ, ಅಚ್ಚುಕುಟ್ಟೀರ, ಪಳಂಗಡ, ಮುಕ್ಕಾಟಿರ, ಮಾತಂಡ ಮೊದಲಾದ ಮನೆತನದ ಹೆಸರುಗಳಿದ್ದು ಇವುಗಳ ಮೂಲಕ ವ್ಯಕ್ತಿಯನ್ನು ನಿರ್ಧಿಷ್ಟವಾಗಿ ಗುರುತಿಸಲು ಸಾಧ್ಯವಾಗುತ್ತದೆ.

**ಆಹಾರ ಮತ್ತು ಮದ್ಯ ಸೇವನೆ:** ಕೊಡವರು ಸಾಮಾನ್ಯ ದಿನಗಳಲ್ಲಿ ಸಹಜವಾದ ಆಹಾರ ಪದಾರ್ಥಗಳನ್ನು ಬಳಸುತ್ತಾರೆ. ಆದರೆ ಕೆಲವು ವಿಶೇಷ ಸಂದರ್ಭಗಳಲ್ಲಿ ಮಾಂಸಾಹಾರ ಕಡ್ಡಾಯ. ಕೊಡವರು ಮಾಂಸಾಹಾರ ಪ್ರಿಯರು. ಕೆಲವು ಸಲ ಮಾಂಸಾಹಾರಕ್ಕಾಗಿಯೆ ಪ್ರಾಣಿಗಳನ್ನು ಬೇಟೆಯಾಡುತ್ತಿದ್ದರು. ಕೊಡವರಿಗೆ 'ಪಂದಿಕರಿ' ಅಚ್ಚುಮೆಚ್ಚಿನ ಊಟ. ಇದರೊಂದಿಗೆ ಅಕ್ಕಿರೊಟ್ಟಿ ಮತ್ತು ಕಡಂಬುಟ್ಟುಗಳೂ ವಿಶೇಷ ತಿನಿಸುಗಳಾಗಿವೆ. ಈಗಲೂ ಕೊಡಗರ ಮದುವೆ ಮತ್ತಿತರ ಸಭೆ ಸಮಾರಂಭಗಳಲ್ಲಿ ಹಂದಿ ಮಾಂಸದ ಅಡುಗೆಯನ್ನು ಮಾಡುವುದು ರೂಢಿಯಲ್ಲಿದೆ. 'ಕೈಲ್‌ಮುಹೂರ್ತ' ಹಬ್ಬಕ್ಕೆ 'ಪಂದಿಕರಿ'ಯೇ ಪ್ರಧಾನ ಆಹಾರವಾಗಿರುತ್ತದೆ. ಹಿಂದೆ 'ಕೈಲ್‌ಪೊಳ್ದ್' ಹಬ್ಬದ ನಂತರ ಊರಿನವರೆಲ್ಲ ಸೇರಿ ಬೇಟೆಯ ದಿನವನ್ನು ಗುರುತು ಮಾಡಿ ಮನೆಮಂದಿಯೆಲ್ಲ ಹೊರಡುತ್ತಿದ್ದರು.

ಅರಣ್ಯದಲ್ಲಿ ಹೆಚ್ಚಾಗಿ ಜೀವಿಸುತ್ತಿದ್ದ ಕಾಡು ಹಂದಿಗಳನ್ನು ಬೇಟೆಯಾಡಿ ಅದರ ಮಾಂಸವನ್ನು ಎಲ್ಲರೂ ಹಂಚಿ ತಿನ್ನುತ್ತಿದ್ದರು. ಇಂದು ಕಾಡು ಮತ್ತು ಕಾಡಿನ ಹಂದಿಗಳ ಸಂಖ್ಯೆ ಕ್ಷೀಣಿಸುತ್ತಿರುವುದರಿಂದ ಬೇಟೆಯೂ ನಿಂತಿದೆ. ಹಾಗಾಗಿ ಮಾಂಸಕ್ಕಾಗಿಯೇ ಹಂದಿಗಳನ್ನು ಸಾಕಲಾಗುತ್ತಿದೆ. ಆದುದರಿಂದ ಕೊಡವರು ಇಂದಿಗೂ ಈ ಮಾಂಸವನ್ನು ಮದುವೆ ಮತ್ತಿತರ

ಸಮಾರಂಭಗಳಲ್ಲಿ ಬಳಸುತ್ತಾರೆ. ಮದುವೆ, ಕೈಲ್‌ಪೊಳ್ದ್, ನಾಮಕರಣ, ಪುಣ್ಯತಿಥಿ ಮೊದಲಾದ ಸಂದರ್ಭಗಳಲ್ಲಿ ಕಡ್ಡಾಯವಾಗಿ ಹಂದಿ ಮಾಂಸದ ಊಟವೇ ಆಗಬೇಕು ಎಂಬುದನ್ನು ರೂಢಿಸಿಕೊಂಡಿದ್ದಾರೆ. ಈ ಸಂದರ್ಭದಲ್ಲಿ ಕೊಡಗಿನಾದ್ಯಂತ ಮುನ್ನೂರಕ್ಕೂ ಹೆಚ್ಚು ಹಂದಿಗಳನ್ನು ಕಡಿಯಲಾಗುತ್ತದೆ[೮೯] ಎಂಬ ವಿಷಯವೇ ಆಶ್ಚರ್ಯವುಂಟುಮಾಡುತ್ತದೆ.

'ಕೈಲ್‌ಪೊಳ್ದ್ ಬಂತು ತಿಮ್ಮುಡು ಹಿಂದಿನ ದಿನ ಸಂಜೆ ಹಂದಿಯನ್ನು ಹೊಡೆದು ಮಾಂಸವನ್ನು ಸಿದ್ಧಗೊಳಿಸಿದ'[೯೦] ಎಂಬುದು ಕೈಲ್‌ಪೊಳ್ದ್ ಹಬ್ಬಕ್ಕೆ ಹಂದಿ ಮಾಂಸಕ್ಕಿರುವ ಪ್ರಾಮುಖ್ಯತೆಯನ್ನು ಸೂಚಿಸುವುದರ ಜೊತೆಗೆ ಹಂದಿ ಹೊಡೆಯುವುದು ಎಂದರೆ ಅದೊಂದು ಸಾಮಾನ್ಯ ಸಂಗತಿಯೆಂಬಂತೆ ಕಂಡು ಬಂದಿದೆ. ಎಡಕಲ್ಲು ಗುಡ್ಡದ ಮೇಲೆ,[೯೧] ಬೆಳ್ಳಿಮೂಡಿತು,[೯೨] ಮತ್ತು ಗಿರಿಕನ್ನಿಕೆ[೯೩] ಕಾದಂಬರಿಗಳಲ್ಲಿ ಕೊಡವರು ಕಾಡು ಹಂದಿಯನ್ನು ಹೊಡೆದುರುಳಿಸುವ ಸಾಹಸ ಸನ್ನಿವೇಶಗಳು ಚಿತ್ರಿತವಾಗಿರುವುದನ್ನು ಗಮನಿಸಬಹುದು. ಹಂದಿ ಮಾಂಸವನ್ನು ಸೇವಿಸುವುದರಿಂದ ದೇಹದ ಉಷ್ಣತೆ ಕಡಿಮೆಯಾಗುತ್ತದೆ ಎಂಬುದು ಈ ಮಾಂಸವನ್ನು ಬಳಸಲು ಕಾರಣವಿರಬೇಕು. ಕಾಡು ಹಂದಿಗಳ ಮಾಂಸ ಕಡಿಮೆ ಕೊಬ್ಬಿನಾಂಶದಿಂದ ಕೂಡಿದ್ದು ರುಚಿಕರವಾಗಿರುತ್ತದೆಯೆಂದು ಹೇಳಲಾಗುತ್ತದೆ.

ಕೊಡವರ ಮತ್ತೊಂದು ವಿಶೇಷತೆಯೆಂದರೆ ಮದ್ಯ ಸೇವನೆ ಮಾಡುವುದು. ಮದುವೆ ಮತ್ತಿತರ ಶುಭಸಮಾರಂಭಗಳಿಗೆ ಮಾಂಸಾಹಾರದ ಜೊತೆಗೆ ಮದ್ಯ ಸೇವನೆಯ ಅವಕಾಶವೂ ಇರುತ್ತದೆ. ಇದು ಕೊಡವ ಸಂಸ್ಕೃತಿಯ ಒಂದು ಭಾಗವಾಗಿ ಉಳಿಯದೆ ಕೊಡಗಿನಾದ್ಯಂತ ವಿಸ್ತರಣೆಯಾಗಿದೆ. ಈ ವಿಚಾರದಲ್ಲಿ ಮುಜುಗರ ಪಡುವಂತದ್ದೇನಿಲ್ಲ. ಇಲ್ಲಿ ಉದ್ಯೋಗ ನಿಮಿತ್ತ ವಾಸಿಸುತ್ತಿದ್ದು ಮದ್ಯ ಸೇವನೆಯ ಅಭ್ಯಾಸವಿಲ್ಲದಿರುವವರಿಗೆ 'ಕೊಡಗಿನಲ್ಲಿದ್ದೂ ನೀವು ಕುಡಿಯಲು ಕಲಿಯಲಿಲ್ವಾ?' ಎಂದು ಆಶ್ಚರ್ಯದಿಂದ ಕೇಳುವಂತಹ ಪರಿಸ್ಥಿತಿಯೂ ಇದೆ. ಕೊಡವರು ಕುಡಿದರೆ ಅದು ಪ್ರತಿಷ್ಠೆಯ ವಿಷಯವಾದರೆ ಅದೇ ಭಾಗದಲ್ಲಿ ವಾಸಿಸುತ್ತಿರುವ ಬುಡಕಟ್ಟು ಜನರಾದ ಎರವರು ಕುಡಿದರೆ ಅದು ಕನಿಷ್ಠವೆನಿಸುತ್ತದೆ. ಏಕೆಂದರೆ ಕೊಡವರು ಕಂಠಪೂರ್ತಿ ಕುಡಿಯುವುದಿಲ್ಲ. ಆದರೆ ಎರವರು ಮನಸೋ ಇಚ್ಛೆ ಕುಡಿದು ರಸ್ತೆಯಲ್ಲೇ ಬಿದ್ದು ಹೊರಳಾಡುತ್ತಿರುತ್ತಾರೆ.

'ಕಳ್ಳು ಕುಡಿಯದ ಕೊಡವ ಯಾರಿದ್ದಾನೆ'[೯೪] ಎಂದು ತಿಮ್ಮುಡು ಕೇಳುವ ಮಾತು ಕೊಡವನಾದವನು ಕಡ್ಡಾಯವಾಗಿ ಕುಡಿಯಲೇ ಬೇಕೆಂಬುದನ್ನು ಸೂಚಿಸುವುದರ ಜೊತೆಗೆ ಕುಡಿದರೇನೆ ಕೊಡವನ ಬದುಕು ಸಾರ್ಥಕವಾಗುತ್ತದೆ ಎಂಬ ಭಾವವನ್ನು ಕಾಣಬಹುದು. ಕೆಲವು ಕುಟುಂಬಗಳಲ್ಲಿ ಸದಸ್ಯರೆಲ್ಲರೂ ಸೇರಿ ಕುಡಿಯವುದು ಕೊಡಗಿನ ಸಂಸ್ಕೃತಿಯ ಅಂಗವಾಗಿದೆ. ಈ ವಿಚಾರದಲ್ಲಿ ಕೊಡಗಿನ ಮೇಲೆ ಬ್ರಿಟೀಷರ ಪ್ರಭಾವ ದಟ್ಟವಾಗಿರಬಹುದೆಂದು ಊಹಿಸಬಹುದು. ಕೊಡಗಿನಲ್ಲಿ ವರ್ಷದ ಬಹುಪಾಲು ವಿಪರೀತ ಮಳೆಗಾಲ ಮತ್ತು ಚಳಿಯಿರುತ್ತದೆ. ಇದರಿಂದ ಪಾರಾಗಲೂ ಮದ್ಯ ಸೇವನೆಯ ಅನಿವಾರ್ಯತೆಯನ್ನು ಇಲ್ಲಿಯೂ ಕಂಡುಕೊಂಡಿರಬಹುದು.

ಕೊಡವ ಕಳ್ಳು ಬಿಡುವುದೆಂದರೆ ಮೀನು ನೀರನ್ನು ಬಿಡುವಂತೆ'[೯೫] ಎನ್ನುವಲ್ಲಿ ಮದ್ಯವರ್ಜನೆಯ ಅಗತ್ಯವನ್ನು ಮತ್ತು 'ಪಾಚು ನೀನು ತಪ್ಪಿ ಕೊಡವರ ಕುಲದಲ್ಲಿ ಹುಟ್ಟಿದ್ದೀಯ, ನೀನು ಹಾರುವರ ಕುಲದಲ್ಲಿ ಹುಟ್ಟಬೇಕಿತ್ತು'[೯೬] ಎಂದು ಹೇಳುವಲ್ಲಿ ಇವರು ಮಾಂಸಾಹಾರ ಕಡ್ಡಾಯವಾಗಿ ತಿನ್ನಲೇ ಬೇಕೆಂಬ ಆಶಯ ವ್ಯಕ್ತವಾಗಿರುವುದನ್ನು ಮನಗಾಣಬಹುದು.

**ಹಾಕಿ ಉತ್ಸವ:** ಕೊಡಗಿನ ಸರ್ವರೂ ಅತ್ಯಂತ ಪ್ರೀತಿಯಿಂದ ಪಾಲ್ಗೊಳ್ಳುವ ವಲಯ ಕ್ರೀಡಾ ಕ್ಷೇತ್ರ ದೇಹದ ಆರೋಗ್ಯವನ್ನು ಸ್ವಸ್ಥವಾಗಿಟ್ಟುಕೊಳ್ಳುವಲ್ಲಿ ಕ್ರೀಡೆಗಳು ಪೂರಕವೆನಿಸಿವೆ. ಆ ನಿಟ್ಟಿನಲ್ಲಿ ಕೊಡಗರು ಅದರಲ್ಲೂ ಪ್ರತಿಯೊಬ್ಬ ಕೊಡವರೂ ತಮ್ಮನ್ನು ಒಂದಿಲ್ಲೊಂದು ಕ್ರೀಡೆಯಲ್ಲಿ ಯುವಕ ಯುವತಿಯರಾದಿಯಾಗಿ ತೊಡಗಿಸಿಕೊಳ್ಳುವುದು ಪರಂಪರೆಯಿಂದ ನಡೆದುಬಂದಿದೆ. ಕೊಡಗಿನಲ್ಲಿ ಟೆನಿಸ್, ಕ್ರಿಕೆಟ್, ಪುಟ್‌ಬಾಲ್ ಆಟಗಳಿದ್ದರೂ ರಾಷ್ಟ್ರೀಯ ಕ್ರೀಡೆಯಾದ ಹಾಕಿ ಕೊಡಗಿನ ಜನಪ್ರಿಯ ಕ್ರೀಡೆಯಾಗಿ ಮನ್ನಣೆ ಗಳಿಸಿಕೊಂಡಿದೆ. ಕೊಡಗಿನ ಯಾವುದೇ ಭಾಗದಲ್ಲಿ ಹಾಕಿ ಪಂದ್ಯಾಟ ನಡೆದರೂ ಸಾವಿರಾರು ಪ್ರೇಕ್ಷಕರು ಭಾಗವಹಿಸುತ್ತಾರೆನ್ನುವುದು ಈ ಆಟಕ್ಕಿರುವ ಮಹತ್ವವನ್ನು ಸಾರುತ್ತದೆ.

ಕೊಡಗು ಜಿಲ್ಲೆಯು ಭಾರತೀಯ ಹಾಕಿಯ ತವರೂರು ಎನಿಸಿದೆ. ಅಂತರಾಷ್ಟ್ರೀಯ ಹಾಕಿ ಪಂದ್ಯಗಳಲ್ಲಿ ಭಾರತವನ್ನು ಪ್ರತಿನಿಧಿಸಿದ ಕೊಡವ ಯುವಕರ ಸಂಖ್ಯೆ ಐವತ್ತಕ್ಕೂ ಅಧಿಕವಾಗಿದೆ. ಎಂ. ಪಿ. ಗಣೇಶ್, ಎಂ. ಎಂ. ಸೋಮಯ್ಯ, ಚೆಪ್ಪುಡಿರ ಎಸ್. ಪೂಣಚ್ಚ ಮೊದಲಾದವರು ಓಲಂಪಿಕ್ಸ್‌ನಲ್ಲಿ ಭಾರತವನ್ನು ಪ್ರತಿನಿಧಿಸಿರುತ್ತಾರೆ.[೯೭]

ಪ್ರಥಮ ದರ್ಜೆಯ ಹಾಕಿ ಆಟದ ತೀರ್ಪುಗಾರರಾಗಿದ್ದ ೬೯ ವರ್ಷದ ಪಾಂಡಂಡ ಕುಟ್ಟಪ್ಪ ಎನ್ನುವವರ ದೂರದೃಷ್ಟಿಯ ಫಲವಾಗಿ ೧೯೯೭ರಲ್ಲಿ ಕೊಡಗಿನಲ್ಲಿ ಹಾಕಿ ಉತ್ಸವ ಆರಂಭವಾಯಿತು. ಮೊದಲು ಕರಡ ಎಂಬ ಸ್ಥಳದಲ್ಲಿ ನಡೆದ 'ಪಾಂಡಂಡ ಕಪ್'ನಲ್ಲಿ ಕೇವಲ ಅರವತ್ತು ಕೊಡವ ಕುಟುಂಬಗಳು ಮಾತ್ರ ಭಾಗವಹಿಸಿದ್ದವು. ಇದು ಮುಂದುವರೆದಂತೆಲ್ಲಾ ತನ್ನ ಜನಪ್ರಿಯತೆಯನ್ನು ವೃದ್ಧಿಸಿಕೊಂಡು ವರ್ಷದಿಂದ ವರ್ಷಕ್ಕೆ ಭಾಗವಹಿಸುವ ಕುಟುಂಬಗಳ ಸಂಖ್ಯೆಯನ್ನೂ ಹೆಚ್ಚಿಸಿಕೊಂಡಿದೆ. ಕಳೆದ ವರ್ಷ ಅಂದರೆ ೨೦೧೭ರಲ್ಲಿ ನಾಪೋಕ್ಲುವಿನಲ್ಲಿ ಇಪ್ಪತ್ತೇಳು ದಿನಗಳು ನಡೆದ 'ಬಿದ್ದಾಟಂಡ ಕಪ್'ನಲ್ಲಿ ೩೦೬ ಕೊಡವ ಕುಟುಂಬಗಳು ಭಾಗವಹಿಸಿರುವುದು ಇದುವರೆಗಿನ ದಾಖಲೆಯಾಗಿದ್ದು ಈ ಸಂಖ್ಯೆ ಇಲ್ಲಿನ ಹಾಕಿ ಉತ್ಸವಕ್ಕಿರುವ ಮಹತ್ವವನ್ನು ಸಾರುತ್ತದೆ.

ಕಳೆದ ಇಪ್ಪತ್ತೊಂದು ವರ್ಷಗಳಿಂದ ನಡೆಯುತ್ತಿರುವ ಹಾಕಿ ಉತ್ಸವ ವರ್ಷದಿಂದ ವರ್ಷಕ್ಕೆ ಹೊಸತನಗಳೊಂದಿಗೆ ಜನಪ್ರಿಯಗೊಳ್ಳುತ್ತಾ ಸಾಗುತ್ತಿದೆ. ಕೊಡವ ಕುಟುಂಬಗಳ ನಡುವೆ ನಡೆಯುವ ಹಾಕಿ ಉತ್ಸವ ಇಪ್ಪತ್ತೊಂದು ವರ್ಷಗಳಿಂದ ಸತತವಾಗಿ ನಡೆದುಕೊಂಡು ಬಂದು 'ಲಿಮ್ಕಾ ಬುಕ್ ಆಫ್ ರೆಕಾರ್ಡ್' ದಾಖಲೆಗೆ ಸೇರಿದೆ. ಪ್ರತಿ ವರ್ಷ ಏಪ್ರಿಲ್ ತಿಂಗಳಿನಲ್ಲಿ ನಡೆಯುವ ಈ ಉತ್ಸವವನ್ನು ಯಾವುದಾದರೂ ಒಂದು ಕೊಡವ ಕುಟುಂಬ ಪ್ರಾಯೋಜಿಸಿ ಆ

ಕುಟುಂಬದ ಹೆಸರಿನಿಂದಲೇ ನಡೆಸುತ್ತದೆ. ಹಾಕಿ ಉತ್ಸವದಲ್ಲಿ ಭಾಗವಹಿಸುವ ಒಂದು ತಂಡದ ಸದಸ್ಯರು ಒಂದೇ ಮನೆತನದವರಾಗಿದ್ದು ಒಂದೇ ರೀತಿಯ ಪೋಷಾಕುಗಳನ್ನು ಧರಿಸಿರುತ್ತಾರೆ. ಮಹಿಳೆಯರೂ ಪಂದ್ಯಗಳಲ್ಲಿ ಭಾಗವಹಿಸಬಹುದಾಗಿದ್ದು, ವಿವಾಹಿತ ಮಹಿಳೆಯರು ತಾವು ಗಂಡನ ಮನೆಯ ಅಥವಾ ತವರು ಮನೆಯ ತಂಡದ ಸದಸ್ಯರಾಗುವುದಕ್ಕೆ ಮುಕ್ತ ಅವಕಾಶವಿರುತ್ತದೆ.

ಇಂದಿಗೂ ಕೊಡಗಿನಲ್ಲಿ ಕೊಡವ ಮನೆತನದ ನಡುವೆ ಪ್ರತಿವರ್ಷ ಹಾಕಿ ಪಂದ್ಯಾಟಗಳು ನಡೆಯುತ್ತಿವೆ. ಪೊನ್ನಂಪೇಟೆ, ಗೋಣಿಕೊಪ್ಪ, ಮಡಿಕೇರಿ, ಅಮ್ಮತ್ತಿ, ನಾಪೋಕ್ಲು ಮೊದಲಾದ ಸ್ಥಳಗಳಲ್ಲಿ ಹಾಕಿ ಕ್ರೀಡಾಂಗಣಗಳಿದ್ದು, 'ಹಾಕಿ ಉತ್ಸವ' ಅತ್ಯಂತ ಉತ್ಸಾಹದಿಂದ ನಡೆಯುತ್ತದೆ. ಪಂದ್ಯ ನಡೆಯವ ಕ್ರೀಡಾಂಗಣ ಸುತ್ತ ಅಂಗಡಿ, ಮಳಿಗೆಗಳಿಂದ ಕೂಡಿದ್ದು, ಹಬ್ಬದ ಸಡಗರ, ಸಂಭ್ರಮಗಳಿಂದ ಸುಮಾರು ಒಂದು ತಿಂಗಳ ಕಾಲ ನಡೆಯುವುದನ್ನು ಕಾಣಬಹುದು.

ಯುವಜನಾಂಗ ಆಧುನಿಕ ಮತ್ತು ಯಾಂತ್ರಿಕ ಜಗತ್ತಿಗೆ ಹೊಂದಿಕೊಂಡಿರುವ ಇಂದಿನ ದಿನಗಳಲ್ಲಿ ಪ್ರತಿವರ್ಷ ತಪ್ಪದೆ ಉತ್ಸಾಹದಿಂದ ನಡೆಸಿಕೊಂಡು ಬರುತ್ತಿರುವ 'ಹಾಕಿ ಹಬ್ಬ' ಅಥವಾ 'ಹಾಕಿ ಉತ್ಸವ' ಕೊಡಗರ ಅನನ್ಯತೆಯ ಭಾಗವಾಗಿದ್ದು, ಕೊಡಗಿನಲ್ಲಿ ಬೇರೆ ಯಾವ ಸಮುದಾಯದವರೂ ಇದನ್ನು ಅನುಸರಿಸಿಲ್ಲ.

ಕೊಡಗಿನಲ್ಲಿ ಗದ್ದೆಗಳಿಗೆ ಭತ್ತದ ನಾಟಿ ಮಾಡುವ ಒಂದು ವಾರದ ಮೊದಲು ಕೆಸರು ಗದ್ದೆಗಳಲ್ಲಿ ವಿವಿದ ಆಟೋಟಗಳನ್ನು ಏರ್ಪಡಿಸುತ್ತಾರೆ. ಇವುಗಳಲ್ಲಿ ವಾಲಿಬಾಲ್, ಫುಟ್‌ಬಾಲ್, ಥ್ರೋಬಾಲ್, ಕಬಡ್ಡಿ, ಹಗ್ಗಜಗ್ಗಾಟ ಮೊದಲಾದ ಸ್ಪರ್ಧೆಗಳನ್ನು ಮಾಡುತ್ತಾರೆ. ಕೇವಲ ಮನೋರಂಜನೆಯ ದೃಷ್ಟಿಯಿಂದ ನಡೆಸುವ ಈ ಸ್ಪರ್ಧೆಗಳು ಮುಗಿದ ಮರುದಿನದಿಂದಲೇ ಎಲ್ಲಾ ಗದ್ದೆಗಳಿಗೆ ಬೆಳೆ ಮಾಡುತ್ತಾರೆ. ಹೀಗೆ ವಿವಿಧ ಕ್ರೀಡೆಗಳನ್ನು ಆಯೋಜಿಸುವುದರಿಂದ ಮನೋರಂಜನೆಯೂ ದೊರೆಯುವುದರ ಜತೆಗೆ ಗದ್ದೆಗಳೂ ಹಸನಾಗುತ್ತವೆ ಎಂಬುದು ಅರ್ಥವಾಗುತ್ತದೆ. ಅಲ್ಲದೆ ದೇಹದ ಚರ್ಮಕ್ಕೆ ಮಣ್ಣು ಮೆತ್ತುವುದರಿಂದ ಚರ್ಮ ಸಂಬಂಧಿತ ತೊಂದರೆಗಳು ದೂರವಾಗುತ್ತವೆ ಎಂಬುದು ಸ್ಪಷ್ಟವಾಗುತ್ತದೆ.

**ಮಿಲಿಟರಿ ಸೇವೆ:** ಕೊಡಗಿನಲ್ಲಿ ಹಟ್ಟಿದ ಪ್ರತಿಯೊಬ್ಬರೂ ಸಾಹಸಿಗರು. ದಟ್ಟ ಅರಣ್ಯ ಪ್ರದೇಶಗಳ ನಡುವೆ ವಾಸ ಮಾಡಬೇಕಾದ ಕಾರಣದಿಂದ ಹುಲಿ, ಚಿರತೆ, ಆನೆ, ಕರಡಿ, ಮೊದಲಾದ ಕ್ರೂರ ಪ್ರಾಣಿಗಳ ಭಯದಿಂದ ದೂರವಾಗುವುದು ಇಲ್ಲಿನ ಜನರಿಗೆ ಅನಿವಾರ್ಯವಾಗಿತ್ತು. ಆ ಕಾರಣದಿಂದ ಉಪಟಳ ನೀಡುವ ಪ್ರಾಣಿಗಳನ್ನು ತಾವೇ ಬೇಟೆಯಾಡಿ ಕೊಲ್ಲುತ್ತಿದ್ದರು. ಇದು ಇಲ್ಲಿನ ನಿವಾಸಿಗಳಿಗೆ ಧೈರ್ಯವನ್ನು ಹೊಂದಲು ಸಾಧ್ಯವಾಯಿತು.

ರಾಜರ ಕಾಲದಿಂದಲೂ ತಮ್ಮ ನಾಡನ್ನು ಕಾಪಾಡಿಕೊಳ್ಳುವ ದೃಷ್ಟಿಯಿಂದ ನೆರೆಹೊರೆಯ ರಾಜರೊಡನೆ ಹೋರಾಟ ಮಾಡಿರುವ ನಿದರ್ಶನಗಳಿವೆ. 'ಕುಡಿಯರು, ಕುರುಬರು, ಎರವರು,

ಗೌಡರು ಸೈನ್ಯಕ್ಕೆ ಸೇರಿ ವೀರ ಯೋಧರಾಗಿ ಸೆಣಸಿದ್ದಾರೆ. ಅಲ್ಲದೆ ಬ್ರಾಹ್ಮಣರು, ಲಿಂಗಾಯತರು ಹಾಗೂ ಗೌಡರು ದಳವಾಯಿಗಳಾಗಿ ಯುದ್ಧ ಮಾಡಿದ್ದಾರೆ'[೧೮] ಎನ್ನುವ ಮಾತುಗಳಲ್ಲಿ ಕೊಡಗಿನ ಎಲ್ಲ ಸಮುದಾಯಗಳೂ ಶೌರ್ಯ ಪರಂಪರೆಯನ್ನು ಹೊಂದಿದವರು ಎಂಬುದು ಅರ್ಥವಾಗುತ್ತದೆ.

'ಕೊಡವ ಬಾಲೇಕಾರನಿಗೆ ಕಲಿತನಕ್ಕಿಂತ ಮಿಗಿಲಾದ ಸಂಪತ್ತು ಯಾವುದಿದೆ'[೧೯] ಎಂಬ ಮಾತಿಗೆ ಪೂರಕವೆಂಬಂತೆ ಸೈನ್ಯಕ್ಕೆ ಸೇರಿ ಹೋರಾಡಿರುವವರ ಸಂಖ್ಯೆಯಲ್ಲಿ ಕೊಡವರೇ ಅಧಿಕವಾಗಿದ್ದಾರೆ. ಕೊಡವರಲ್ಲಿ ಪ್ರತಿ ಮನೆಯಿಂದ ಒಬ್ಬ ಸದಸ್ಯ ಸೈನ್ಯಕ್ಕೆ ಸೇರಿದ್ದಾರೆ ಎಂಬ ಮಾತುಗಳನ್ನು ನಾವು ಚಿಕ್ಕವರಾಗಿರುವಾಗ ಕೇಳಿದ್ದೆವು. ಆದರೆ ಈಗ ಮನೆಗೊಬ್ಬ ಮಗ ಮಾತ್ರ ಇರುವಾಗ ಸೈನ್ಯ ಸೇರುವ ಮಾತು ಅಪರೂಪವೆಂಬಂತಾಗಿದೆ. ವಿದ್ಯಾರ್ಥಿಯೊಬ್ಬನನ್ನು ಸಂದರ್ಶಿಸಿದಾಗ ಆತನಿಗೆ ಸೇನೆಗೆ ಸೇರುವ ಬಯಕೆಯಿದ್ದು ಅವನ ಪೋಷಕರು ಇದನ್ನು ಒಪ್ಪುತ್ತಿಲ್ಲವೆಂದು ತಿಳಿಯಿತು. ಕಾರಣ ಅವರಿಗೆ ಇವನು ಏಕಮಾತ್ರ ಪುತ್ರ. ಕೊಡಗಿನಲ್ಲಿ ಸೇನೆಗೆ ಸೇರುವವರ ಸಂಖ್ಯೆ ಕಡಿಮೆಯಾಗಿರಬಹುದು. ಆದರೆ ನಿಂತು ಹೋಗಿಲ್ಲ. ಸೇನೆಗೆ ಸೇರ್ಪಡೆಗೊಳ್ಳಲು ಪೂರಕವೆಂಬಂತೆ ಸೋಮವಾರಪೇಟೆ ತಾಲೂಕಿನ ಕೂಡಿಗೆ ಎಂಬಲ್ಲಿ ಸೈನಿಕ ಶಾಲೆಯನ್ನು ತೆರೆದು ಪೂರಕವಾದ ಶಿಕ್ಷಣ ನೀಡಲಾಗುತ್ತಿದೆ.

ಕೊಡಗರು ಬ್ರಿಟೀಷರ ಆಳ್ವಿಕೆಯಲ್ಲಿ ಮತ್ತು ಸ್ವಾತಂತ್ರ್ಯ ಪಡೆದ ನಂತರದಲ್ಲಿ ಭಾರತದ ಭೂ ಸೈನ್ಯ, ನೌಕಾದಳ, ವಾಯುದಳಗಳಲ್ಲಿ ವಿವಿಧ ಉನ್ನತ ಹುದ್ದೆಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಸೈನಿಕರಾಗಿ ದುಡಿದವರಲ್ಲಿ ಜನರಲ್ ಕೆ. ಎಂ. ಕಾರ್ಯಪ್ಪ, ಜನರಲ್ ತಿಮ್ಮಯ್ಯ ಮತ್ತು ಅಪ್ಪಾರಂಡ ಅಯ್ಯಪ್ಪ ಇವರುಗಳನ್ನು ಪ್ರಮುಖರಾಗಿ ಗುರುತಿಸಬಹುದು. ಇವರಲ್ಲಿ ಜನರಲ್ ಕೆ. ಎಂ. ಕಾರ್ಯಪ್ಪ ಮತ್ತು ಜನರಲ್ ತಿಮ್ಮಯ್ಯ ಪ್ರಪಂಚದ ಪ್ರತಿಷ್ಠಿತ ಗೌರವಾನ್ವಿತ ದಂಡನಾಯಕರಾಗಿ ಸೇವೆ ಸಲ್ಲಿಸಿ ದೊಡ್ಡ ಕೀರ್ತಿ ಸಂಪಾದಿಸಿದ್ದಾರೆ. ಜನರಲ್ ಕೆ. ಎಂ. ಕಾರ್ಯಪ್ಪ ಅವರು ನಿವೃತ್ತಿಯ ನಂತರ ಫೀಲ್ಡ್ ಮಾರ್ಷಲ್ ಗೌರವಕ್ಕೆ ಭಾಜನರಾಗಿದ್ದಾರೆ. ಭಾರತ ಸರ್ಕಾರ ಸೈನಿಕರಿಗೆ ಮೀಸಲಾದ ಪರಮವೀರ ಚಕ್ರ, ಅಶೋಕ ಚಕ್ರ ಮೊದಲಾದ ಅನೇಕ ಶೌರ್ಯ ಪ್ರಶಸ್ತಿಗಳನ್ನು ಸ್ಥಾಪಿಸಿ ವೀರ ಯೋಧರಿಗೆ ಪ್ರಧಾನ ಮಾಡುತ್ತಾ ಬಂದಿದೆ. ಈ ಪ್ರಶಸ್ತಿಗಳನ್ನು ಕೊಡಗಿನ ಅನೇಕ ವೀರರು ಪಡೆದಿರುವುದು ತಿಳಿದುಬರುತ್ತದೆ.

ಕನ್ನಡದಲ್ಲಿ ನಿರ್ಮಾಣವಾದ 'ಮುತ್ತಿನ ಹಾರ' ಎಂಬ ಸಿನಿಮಾ ಕೊಡವ ವೀರನೊಬ್ಬನ ಸಾಹಸ ಪ್ರವೃತ್ತಿಗಳನ್ನು ತಿಳಿಸಿಕೊಡುತ್ತದೆ. ಭಾರತೀಸುತರ 'ಬಯಲುದಾರಿ' ಕಾದಂಬರಿಯ ನಾಯಕನಾದ ಬೋಪಯ್ಯ ಭಾರತೀಯ ವಾಯುಸೇನೆಯಲ್ಲಿ ಸೇವೆ ಸಲ್ಲಿಸುತ್ತಿದ್ದು, ಯುದ್ಧಕ್ಕೆ ಬೇಕಾದ ಸರಕು ಸರಂಜಾಮುಗಳನ್ನು ಹೊತ್ತೊಯ್ಯುತ್ತಿದ್ದ ವಿಮಾನ ಪತನವಾಗಿ ಅದರಲ್ಲಿದ್ದ ಬೋಪಯ್ಯ ಮರಣ ಹೊಂದುತ್ತಾನೆ.

'ಕೊಡವರ ಹೆಣ್ಣು ಹೆತ್ತರೆ ಸ್ವರ್ಗ, ಯುದ್ಧದಿ ಗಂಡು ಸತ್ತರೆ ಸ್ವರ್ಗ' ಎಂಬುದು ಮುತ್ತಿನಹಾರ ಸಿನಿಮಾದ ಹಾಡಿನ ಸಾಲುಗಳು. ಇದರಲ್ಲಿ ಕೊಡವ ವೀರನೊಬ್ಬನ ಸಾವಿನ ಸಾರ್ಥಕತೆಯನ್ನು ಕಾಣಲು ಸಾಧ್ಯವಾಗುತ್ತದೆ. ಇಂತಹ ಸಾರ್ಥಕ ಬದುಕನ್ನು ಇಲ್ಲಿಯ ಕೊಡವರು ಕಟ್ಟಿಕೊಂಡಿದ್ದಾರೆ.

## ಕೊನೆ ಟಿಪ್ಪಣಿಗಳು

೧. **ಕೊಡವರು,** ೧೯೬೨, ಗಣಪತಿ. ಬಿ ಡಿ., ಉಷಾ ಪ್ರೆಸ್, ಮೈಸೂರು, ಪುಟ–ix

೨. **ಕೊಡವರು,** ೨೦೧೪, ರಾಮಾನುಜಂ ಪಿ. ಎಸ್., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ–೧೮

೩. **ಅದೇ;** ಪುಟ–೨೧

೪. **ಕೊಡವರು,** ೧೯೬೨, ಗಣಪತಿ. ಬಿ ಡಿ., ಉಷಾ ಪ್ರೆಸ್, ಮೈಸೂರು, ಪುಟ–೫

೫. **ಆಧುನಿಕ ಕೊಡಗು,** ೨೦೧೪, ತಂಬಂಡ ವಿಜಯ ಪೂಣಚ್ಚ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ–೬

೬. **ಕೊಡವರು,** ೨೦೧೪, ರಾಮಾನುಜಂ ಪಿ ಎಸ್., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ–೧೭೯

೭. **ಕೊಡಗಿನ ಇತಿಹಾಸ,** ೧೯೭೪, ಕೃಷ್ಣಯ್ಯ ಡಿ. ಎನ್., ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಪುಟ–೬೧೩

೮. **ಅದೇ;**

೯. **ಕೊಡವರು,** ೨೦೧೪, ರಾಮಾನುಜಂ ಪಿ. ಎಸ್., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ–೧೫೫

೧೦. **ಬೆಳ್ಳಿ ಮೂಡಿತು,** ೧೯೬೨, ಭಾರತೀಸುತ, ಮನ್ವಂತರ ಪ್ರಕಾಶನ, ಧಾರಾವಾಡ, ಪುಟ–೧೯೮

೧೧. **ಕೊಡಗಿನ ಇತಿಹಾಸ,** ೧೯೭೪, ಕೃಷ್ಣಯ್ಯ ಡಿ. ಎನ್., ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಪುಟ–೬೧೪

೧೨. **ಹುಲಿಯ ಹಾಲಿನ ಮೇವು,** ೨೦೦೮, ಭಾರತೀಸುತ, ರವೀಂದ್ರ ಪುಸ್ತಕಾಲಯ, ಸಾಗರ, ಪುಟ–೧೯೨,

೧೩. **ಪಳಮೆ,** ೨೦೦೪, ತಂಬಂಡ ವಿಜಯ ಪೂಣಚ್ಚ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ–೪೬

೧೪. **ಕೊಡವರು,** ೨೦೧೪, ರಾಮಾನುಜಂ ಪಿ. ಎಸ್., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ–೪೫

೧೫. **ಅದೇ;**

೧೬. **ಅದೇ;** ಪುಟ–೪೬

೧೭. **ಅದೇ;** ಪುಟ–೪೭

೧೮. **ಹರದಾಸ ಅಪ್ಪಚ್ಚ ಕವಿಯ ನಾಲ್ಕು ನಾಟಕಗಳು,** ೨೦೧೧, ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ, ಮಡಿಕೇರಿ, ಪುಟ–೬೬೪–೬೭೯

೧೯. **ಕೊಡವರು,** ೨೦೧೪, ರಾಮಾನುಜಂ ಪಿ. ಎಸ್., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ–೪೮
೨೦. **ಅದೇ;** ಪುಟ–೪೫
೨೧. **ಕಾವೇರಿ ಜಾನಪದ,** ೨೦೦೫, ಹೆಬ್ಬಾಲೆ ಕೆ ನಾಗೇಶ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪುಟ–೪೦
೨೨. **ಜಾನಪದ ಅಧ್ಯಯನ,** ೧೯೭೬, ದೇ. ಜವರೇಗೌಡ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ಪುಟ–೩೩೮
೨೩. **ಅದೇ;**
೨೪. **ಕೊಡವರು,** ೨೦೧೪, ರಾಮಾನುಜಂ ಪಿ. ಎಸ್., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ–೧೦೩
೨೫. **ಪಟ್ಟೋಲೆ ಪಳಮೆ,** ೧೯೯೫, ನಡಿಕೇರಿಯಂಡ ಚಿಣ್ಣಪ್ಪ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ–೨೦೩
೨೬. **ಬೆಳ್ಳಿ ಮೂಡಿತು,** ೧೯೭೨, ಭಾರತೀಸುತ, ಮನ್ವಂತರ ಪ್ರಕಾಶನ, ಧಾರಾವಾಡ, ಪುಟ–೩೧
೨೭. **ಅದೇ;** ಪುಟ–೧೨
೨೮. **ಪಟ್ಟೋಲೆ ಪಳಮೆ,** ೧೯೯೫, ನಡಿಕೇರಿಯಂಡ ಚಿಣ್ಣಪ್ಪ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ–೨೦೪
೨೯. **ಬಯಲುದಾರಿ,** ೨೦೧೧, ಭಾರತೀಸುತ, ರವೀಂದ್ರ ಪುಸ್ತಕಾಲಯ, ಸಾಗರ, ಪುಟ–೨೪
೩೦. **ಬೆಳ್ಳಿ ಮೂಡಿತು,** ೧೯೭೨, ಭಾರತೀಸುತ, ಮನ್ವಂತರ ಪ್ರಕಾಶನ, ಧಾರಾವಾಡ, ಪುಟ–೩೯ ಮತ್ತು ೧೨೩
೩೧. **ಹುಲಿಯ ಹಾಲಿನ ಮೇವು,** ೨೦೦೮, ಭಾರತೀಸುತ, ರವೀಂದ್ರ ಪುಸ್ತಕಾಲಯ, ಸಾಗರ, ಪುಟ–೨೯
೩೨. **ಕೊಡಗು,** ೧೯೯೮, ರಾಮಚಂದ್ರಾಚಾರ್ ಡಿ. ಬಿ., ಸುನಂದ ಪ್ರಕಾಶನ, ವಿರಾಜಪೇಟೆ, ಪುಟ–೧೭೩
೩೩. **ಶ್ರೀ ಕಾವೇರಿ ವೈಭವ,** ೧೯೭೮, ಎದುರ್ಕಳ ಕೆ ಶಂಕರನಾರಾಯಣ ಭಟ್ಟ, ಶ್ರೀ ರಾಮಕೃಷ್ಣ ಪ್ರಕಾಶನ, ಭಾಗಮಂಡಲ, ಪುಟ–೪೪೩
೩೪. **ತುಳುನಾಡಿನ ಆಚರಣೆಗಳು,** ೨೦೧೩, ದಿವಾಕರ ಕೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಪುಟ–೧೩೮
೩೫. **ಶ್ರೀ ಕಾವೇರಿ ವೈಭವ,** ೧೯೭೮, ಎದುರ್ಕಳ ಕೆ ಶಂಕರನಾರಾಯಣ ಭಟ್ಟ, ಶ್ರೀ ರಾಮಕೃಷ್ಣ ಪ್ರಕಾಶನ, ಭಾಗಮಂಡಲ, ಪುಟ–೪೪೩

೩೬. **ಹುಲಿಯ ಹಾಲಿನ ಮೇವು**, ೨೦೦೮, ಭಾರತೀಸುತ, ರವೀಂದ್ರ ಪುಸ್ತಕಾಲಯ, ಸಾಗರ, ಪುಟ-೩೫, ೩೬
೩೭. **ಬೆಳ್ಳಿ ಮೂಡಿತು**, ೧೯೬೨, ಭಾರತೀಸುತ, ಮನ್ವಂತರ ಪ್ರಕಾಶನ, ಧಾರಾವಾಡ, ಪುಟ-೧೩೨
೩೮. **ಅದೇ**; ಪುಟ-೧೪೪
೩೮ಎ.**ಅವಳ ದಾರಿ**, ೨೦೦೪, ಭಾರತೀಸುತ, ಸೌಮ್ಯ ಪ್ರಕಾಶನ, ಬೆಂಗಳೂರು, ಪುಟ-೧೯೪
೩೯. **ಕೊಡವರು**, ೨೦೧೪, ರಾಮಾನುಜಂ ಪಿ. ಎಸ್., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ-೧೦೭
೪೦. **ಕನ್ನಡ ರತ್ನಕೋಶ**, ೧೯೯೪, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ಪುಟ-೨೯೮
೪೧. **ಕೊಡವರು**, ೨೦೧೪, ರಾಮಾನುಜಂ ಪಿ. ಎಸ್., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ-೯೭
೪೨. **ತುಳುನಾಡಿನ ಆಚರಣೆಗಳು**, ೨೦೧೩, ದಿವಾಕರ ಕೆ., ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಪುಟ-೧೨
೪೩. **ಕೊಡವರು**, ೨೦೧೪, ರಾಮಾನುಜಂ ಪಿ. ಎಸ್., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ- ೧೦೧
೪೪. **ಕೊಡಗಿನ ಸಾಂಸ್ಕೃತಿಕ ಜಾನಪದ ನೆಲೆಗಳು**, ೨೦೧೦, ನಾಗರಾಜ್ ಎಂ. ಜಿ., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ-೮೮
೪೫. **ಹುಲಿಯ ಹಾಲಿನ ಮೇವು**, ಭಾರತೀಸುತ, ರವೀಂದ್ರ ಪುಸ್ತಕಾಲಯ, ಸಾಗರ, ೨೦೦೮, ಪುಟ-೧೧೮
೪೬. **ಅದೇ**; ಪುಟ-೧೧೯
೪೭. **ಕಾವೇರಿ ಜಾನಪದ**, ೨೦೦೫, ಹೆಬ್ಬಾಲೆ ಕೆ ನಾಗೇಶ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪುಟ-೪೬
೪೮. **ಕೊಡವರು**, ೨೦೧೪, ರಾಮಾನುಜಂ ಪಿ. ಎಸ್., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ-೧೦೨
೪೯. **ಅದೇ**;
೫೦. **ಯಯಾತಿ**, ೧೯೮೧, ಗಿರೀಶ್ ಕಾರ್ನಾಡ್, ಮನೋಹರ ಗ್ರಂಥಮಾಲಾ, ಧಾರಾವಾಡ, ಪುಟ-೭೯
೫೧. **ಹುಲಿಯ ಹಾಲಿನ ಮೇವು**, ೨೦೦೮, ಭಾರತೀಸುತ, ರವೀಂದ್ರ ಪುಸ್ತಕಾಲಯ, ಸಾಗರ, ಪುಟ-೧೨೭

೫೨. **ಕೊಡವರು**, ೨೦೧೪, ರಾಮಾನುಜಂ ಪಿ. ಎಸ್., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ–೮೨

೫೩. **ಹುಲಿಯ ಹಾಲಿನ ಮೇವು**, ೨೦೦೮, ಭಾರತೀಸುತ, ರವೀಂದ್ರ ಪುಸ್ತಕಾಲಯ, ಸಾಗರ, ಪುಟ–೧೨೭

೫೪. **ಅದೇ**; ಪುಟ–೧೨೯

೫೫. **ಅದೇ**; ಪುಟ–೧೨೬–೧೩೦

೫೬. **ಬೆಳ್ಳಿ ಮೂಡಿತು**, ೧೯೬೨, ಭಾರತೀಸುತ, ಮನ್ವಂತರ ಪ್ರಕಾಶನ, ಧಾರಾವಾಡ, ಪುಟ–೬೧–೬೨

೫೭. **ಕೊಡವರು**, ೨೦೧೪, ರಾಮಾನುಜಂ ಪಿ. ಎಸ್., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ–೮೫

೫೮. **ಕೊಡವ ಸಂಸ್ಕಾರಗಳು: ಸಮಾಜೋ–ಸಾಂಸ್ಕೃತಿಕ ಅಧ್ಯಯನ**, ೨೦೧೪, ಕಾವೇರಿ ಎನ್. ಪಿ., (ಪಿಎಚ್. ಡಿ, ಮಹಾಪ್ರಬಂಧ) ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪುಟ–೨೧೪

೫೯. **ಕೊಡವರು**, ೨೦೧೪, ರಾಮಾನುಜಂ ಪಿ. ಎಸ್., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ–೬೫

೬೦. **ಅದೇ**; ಪುಟ–೬೯

೬೧. **ನದಿ ಎರಡರ ನಡುವೆ**, ೨೦೦೯, ಪ್ರಭಾಕರ ಶಿಶಿಲ ಬಿ., ವಸಂತ ಪ್ರಕಾಶನ ಬೆಂಗಳೂರು, ಪುಟ–೯೯

೬೨. **ಅದೇ**;

೬೩. **ಬಯಲುದಾರಿ**, ೨೦೧೧, ಭಾರತೀಸುತ, ರವೀಂದ್ರ ಪುಸ್ತಕಾಲಯ, ಸಾಗರ, ಪುಟ–೫೫

೬೪. **ಪಟ್ಟೋಲೆ ಪಳಮೆ**, ೧೯೯೫, ನಡಿಕೇರಿಯಂಡ ಚಿಣ್ಣಪ್ಪ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ–೧೪೧

೬೫. **ಕೊಡವರ ಸಂಪ್ರದಾಯ ಮತ್ತು ಪದ್ಧತಿಗಳು**, ೧೯೬೭, ಗಣಪತಿ ಬಿ. ಡಿ., ಶಾರದಾ ಮುದ್ರಣಾಲಯ, ಮಂಗಳೂರು, ಪುಟ–೭೭

೬೬. **ಹುಲಿಯ ಹಾಲಿನ ಮೇವು**, ೨೦೦೮, ಭಾರತೀಸುತ, ರವೀಂದ್ರ ಪುಸ್ತಕಾಲಯ, ಸಾಗರ, ಪುಟ–೧೬

೬೭. **ಬೆಳ್ಳಿ ಮೂಡಿತು**, ೧೯೬೨, ಭಾರತೀಸುತ, ಮನ್ವಂತರ ಪ್ರಕಾಶನ, ಧಾರಾವಾಡ, ಪುಟ–೧೦೦

೬೮. **ಕೊಡಗು ಮತ್ತು ಕೊಡವರು**, ೧೯೬೨, ಗಣಪತಿ ಬಿ. ಡಿ., ಉಷಾ ಪ್ರೆಸ್, ಮೈಸೂರು, ಪುಟ–೯೨

೧೯. **ಕೊಡಗು**, ೧೯೯೮, ರಾಮಚಂದ್ರಾಚಾರ್ ಡಿ. ಬಿ., ಸುನಂದ ಪ್ರಕಾಶನ, ವಿರಾಜಪೇಟೆ, ಪುಟ–೧೦೭

೨೦. **ಕರ್ನಾಟಕ ಜನಪದ ಕಲೆಗಳ ಕೋಶ**, ೧೯೯೬, ಸಂ. ಬೊರಲಿಂಗಯ್ಯ ಹಿ. ಚಿ., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ–೧೮೯

೨೧. **ಕನ್ನಡ ವಿಷಯ ವಿಶ್ವಕೋಶ–ಜಾನಪದ**, ೨೦೦೬. ಅರವಿಂದ ಮಾಲಗತ್ತಿ (ಪ್ರಸಂ), ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ಪುಟ–೩೭೧

೨೨. **ಕೊಡಗಿನ ಜನಪದ ಕುಣಿತಗಳ ಸಾಂಸ್ಕೃತಿಕ ಅಧ್ಯಯನ**, ೨೦೦೩, ಅಶೋಕ್ ಆಳ್ವ ಕೆ., ಪ್ರಸಾರಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ಪುಟ–೧೯

೨೩. **ಹುಲಿಯ ಹಾಲಿನ ಮೇವು**, ೨೦೦೮, ಭಾರತೀಸುತ, ರವೀಂದ್ರ ಪುಸ್ತಕಾಲಯ, ಸಾಗರ, ಪುಟ–೮೭

೨೪. **ಅದೇ;**

೨೫. **ವಿಶ್ವ ಕನ್ನಡ**, ಸಂ–೩, ೧೯೭೫, ರಾಮಪ್ರಸಾದ್ ಎನ್. ಎಸ್., (ಪ್ರ. ಸಂ.) ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪುಟ–೧೮೯

೨೬. **ಹುಲಿಯ ಹಾಲಿನ ಮೇವು**, ೨೦೦೮, ಭಾರತೀಸುತ, ರವೀಂದ್ರ ಪುಸ್ತಕಾಲಯ, ಸಾಗರ, ಪುಟ–೮೨

೨೭. **ಅದೇ;**

೨೮. **ಕೊಡವರು ಜೀವನ ಮತ್ತು ಪದ್ಧತಿಗಳು**, ೧೯೬೭, ಗಣಪತಿ ಬಿ. ಡಿ., ಶಾರದಾ ಮುದ್ರಣಾಲಯ, ಮಂಗಳೂರು, ಪುಟ–೩೯

೨೯. **ಹುಲಿಯ ಹಾಲಿನ ಮೇವು**, ೨೦೦೮, ಭಾರತೀಸುತ, ರವೀಂದ್ರ ಪುಸ್ತಕಾಲಯ, ಸಾಗರ, ಪುಟ–೧೭

೩೦. **ಅದೇ;** ಪುಟ–೧೩

೩೧. **ಬೆಳ್ಳಿ ಮೂಡಿತು**, ೧೯೬೨, ಭಾರತೀಸುತ, ಮನ್ವಂತರ ಪ್ರಕಾಶನ, ಧಾರಾವಾಡ, ಪುಟ–೮೫

೩೨. **ಅದೇ;** ಪುಟ–೬೩

೩೩. **ಬಯಲುದಾರಿ**, ೨೦೧೧, ಭಾರತೀಸುತ, ರವೀಂದ್ರ ಪುಸ್ತಕಾಲಯ, ಸಾಗರ, ಪುಟ–೬೦

೩೪. **ಗಿರಿಕನ್ನಿಕೆ**, ೨೦೧೦, ಭಾರತೀಸುತ, ರವೀಂದ್ರ ಪುಸ್ತಕಾಲಯ, ಸಾಗರ, ಪುಟ–೯೫

೩೫. **ಆಧುನಿಕ ಕೊಡಗು**, ೨೦೧೪, ತಂಬಂಡ ವಿಜಯ್ ಪೂಣಚ್ಚ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ–೬೩

೩೬. **ಕೊಡಗಿನ ಇತಿಹಾಸ ಪುಟಗಳಿಂದ**, ೧೯೮೩, ಕಾಕೆಮಾನಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ–೪೭

೮೭. **ಬಯಲುದಾರಿ**, ೨೦೧೧, ಭಾರತೀಸುತ, ರವೀಂದ್ರ ಪುಸ್ತಕಾಲಯ, ಸಾಗರ, ಪುಟ-೨೦೦

೮೮. **ಕೊಡವರ ಸಂಸ್ಕಾರಗಳು-ಸಮಾಜೋ ಸಾಂಸ್ಕೃತಿಕ ಅಧ್ಯಯನ**, ೨೦೧೪, ಕಾವೇರಿ ಎನ್. ಪಿ., (ಪಿಎಚ್. ಡಿ. ಮಹಾಪ್ರಬಂಧ) ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪುಟ-೩೯೦-೪೦೦

೮೯. **ಕೊಡವರು ಮತ್ತು ಕೊಡಗಿನ ಅರೆಭಾಷೆ ಗೌಡರ ಸಂಸ್ಕೃತಿ-ತೌಲನಿಕ ಅಧ್ಯಯನ**, ಎ. ಸಿ. ಶೈಲಜ, (ಪಿಎಚ್. ಡಿ. ಮಹಾಪ್ರಬಂಧ) ಮೈಸೂರು ವಿಶ್ವವಿದ್ಯಾಲಯ, ೨೦೧೪, ಪುಟ-೯೧

೯೦. **ಬೆಳ್ಳಿ ಮೂಡಿತು**, ೧೯೬೨, ಭಾರತೀಸುತ, ಮನ್ವಂತರ ಪ್ರಕಾಶನ, ಧಾರಾವಾಡ, ಪುಟ-೧೨೨

೯೧. **ಎಡಕಲ್ಲು ಗುಡ್ಡದ ಮೇಲೆ**, ೨೦೦೯, ಭಾರತೀಸುತ, ರವೀಂದ್ರ ಪುಸ್ತಕಾಲಯ, ಸಾಗರ, ಪುಟ-೬೫

೯೨. **ಬೆಳ್ಳಿ ಮೂಡಿತು**, ೧೯೬೨, ಭಾರತೀಸುತ, ಮನ್ವಂತರ ಪ್ರಕಾಶನ, ಧಾರಾವಾಡ, ಪುಟ-೯೭

೯೩. **ಗಿರಿಕನ್ನಿಕೆ**, ೨೦೧೦, ಭಾರತೀಸುತ, ರವೀಂದ್ರ ಪುಸ್ತಕಾಲಯ, ಸಾಗರ, ಪುಟ-೯೫

೯೪. **ಬೆಳ್ಳಿ ಮೂಡಿತು**, ಭಾರತೀಸುತ, ಮನ್ವಂತರ ಪ್ರಕಾಶನ, ಧಾರಾವಾಡ, ೧೯೬೨, ಪುಟ-೪೦

೯೫. **ಅವಳ ದಾರಿ**, ೨೦೦೪, ಭಾರತೀಸುತ, ಸೌಮ್ಯ ಪ್ರಕಾಶನ, ಬೆಂಗಳೂರು, ಪುಟ-೧೯೪

೯೬. **ಅದೇ;**

೯೭. **ವಿಕಿಪೀಡಿಯಾ ಮಾಹಿತಿ**

೯೮. **ಕರ್ನಾಟಕ ರಾಜ್ಯ ಗೆಜೆಟಿಯರ್-ಕೊಡಗು ಜಿಲ್ಲೆ**, ೧೯೯೨, ಸಂ. ಸೂರ್ಯನಾಥ ಯು ಕಾಮತ್, ಲಿಪಿ ಮುದ್ರಣ, ಬೆಂಗಳೂರು, ಪುಟ-೨೨೩

೯೯. **ಹುಲಿಯ ಹಾಲಿನ ಮೇವು**, ೨೦೦೮, ಭಾರತೀಸುತ, ರವೀಂದ್ರ ಪುಸ್ತಕಾಲಯ, ಸಾಗರ, ಪುಟ-೬೩

# ಅಧ್ಯಾಯ – ಐದು

# ಕೊಡವೇತರರು ಮತ್ತು ಬುಡಕಟ್ಟು ಜನಾಂಗಗಳ ಸಂಸ್ಕೃತಿಯ ಸ್ವರೂಪಗಳು

೫.೧. ಕೊಡವೇತರರು

೫.೧.೧. ಅರೆಭಾಷೆ ಗೌಡರು

೫.೧.೨. ಕೆಂಬಟ್ಟಿ ಜನಾಂಗ

೫.೨. ಬುಡಕಟ್ಟು ಜನಾಂಗಗಳು

೫.೨.೧. ಜೇನುಕುರುಬರು

೫.೨.೨. ಎರವರು

# ಅಧ್ಯಾಯ – ಐದು

# ಕೊಡವೇತರರು ಮತ್ತು ಬುಡಕಟ್ಟು ಜನಾಂಗಗಳ ಸಂಸ್ಕೃತಿಯ ಸ್ವರೂಪಗಳು

ಕೊಡಗು ಕರ್ನಾಟಕದ ಚಿಕ್ಕ ಜಿಲ್ಲೆಯಾಗಿದ್ದರೂ ಕೆಲವೊಂದು ಕಾರಣಗಳಿಂದ ರಾಜ್ಯ, ದೇಶ ಮಾತ್ರವಲ್ಲ ಅಂತರಾಷ್ಟ್ರೀಯ ಮಟ್ಟದಲ್ಲಿ ಗಮನ ಸೆಳೆದಿದೆ. ಇಲ್ಲಿನ ಹವಾಮಾನ, ಪರ್ವತ ಶ್ರೇಣಿ, ವಿವಿಧ ಜನಾಂಗಗಳು ಮತ್ತು ಇವರೆಲ್ಲರ ಸಾಂಸ್ಕೃತಿಕ ವೈವಿಧ್ಯತೆ ಕೊಡಗಿನ ಪ್ರಸಿದ್ಧಿಗೆ ಪೂರಕವೆನಿಸಿವೆ. ಈ ಪ್ರದೇಶದಲ್ಲಿ ನೆಲೆ ನಿಂತಿರುವ ಹಲವಾರು ಧರ್ಮ, ಜಾತಿ, ಜನಾಂಗಗಳಲ್ಲಿ ಇನ್ನೂ ತಮ್ಮ ಮೂಲದ ಬಗ್ಗೆ ಚರ್ಚೆಗೊಳಗಾಗುತ್ತಿರುವ 'ಕೊಡವ'ರ ಅನನ್ಯತೆಯ ಕಾರಣದಿಂದಾಗಿ ಕೊಡಗು ಹೊರಗಿನ ಜನರಿಗೆ ಕುತೂಹಲಕಾರಿಯಾಗಿ ಕಾಣುತ್ತಿರುವುದು ಎಲ್ಲರಿಗೂ ತಿಳಿದಿರುವ ವಿಷಯ. ಆದರೆ ಇವರ ಸಂಪ್ರದಾಯ, ರೀತಿ–ನೀತಿ, ಆಚಾರ–ವಿಚಾರ, ವೇಷಭೂಷಣಗಳನ್ನು ಅನುಸರಿಸಿಕೊಂಡು ತಮ್ಮ ಬದುಕನ್ನು ಕಟ್ಟಿಕೊಂಡಿರುವ ಇಲ್ಲಿನ ಮೂಲನಿವಾಸಿಗಳೆನಿಸಿರುವ ಕೆಂಬಟ್ಟಿ ಹೊಲೆಯರು, ಕಾಡನ್ನೇ ತಮ್ಮ ಬದುಕಿನ ಅವಿಭಾಜ್ಯ ಅಂಗವೆಂದು ಭಾವಿಸಿರುವ ಜೇನುಕುರುಬರು ಮತ್ತು ಎರವರನ್ನು ಕುರಿತು ಕೆಲವು ವಿಶೇಷ ಅಧ್ಯಯನಕಾರರನ್ನು ಹೊರತು ಪಡಿಸಿ ಸಾಮಾನ್ಯ ಜನರಿಗೆ ಅಷ್ಟಾಗಿ ಪರಿಚಯವಿಲ್ಲದಂತಹ ಸ್ಥಿತಿಯಿದೆ.

ಕೊಡಗಿನಲ್ಲಿ ಕೊಡವರ ಸಮೀಪವರ್ತಿಗಳಂತೆ ಕಂಡುಬರುವ ಅರೆಭಾಷೆ ಗೌಡರು ಈ ಭಾಗದ ಪ್ರಮುಖ ಜನಾಂಗವಾಗಿದ್ದು, ಇವರೊಂದಿಗೆ ಕೊಡವ ಭಾಷೆಯನ್ನಾಡುವ ೧೮ ಜನಾಂಗಗಳು ಹಾಗೂ ಇಲ್ಲಿನ ಮೂಲನಿವಾಸಿಗಳೆನಿಸಿರುವ ೨೩ ಸಮುದಾಯದವರು ವಾಸಿಸುತ್ತಿದ್ದಾರೆ. ಈ ಎಲ್ಲಾ ಜನಸಮುದಾಯಗಳ ವೈವಿಧ್ಯಮಯ ಬದುಕಿನೊಂದಿಗೆ ಕೊಡಗು ತನ್ನ ಅನನ್ಯತೆಯನ್ನು ಗುರತಿಸಿಕೊಳ್ಳಲು ಸಾಧ್ಯವಾಗಿದೆ ಎಂಬುದು ವರ್ತಮಾನದ ಸತ್ಯವಾಗಬೇಕಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಾಯವನ್ನು 'ಕೊಡವೇತರರು ಮತ್ತು ಬುಡಕಟ್ಟು ಜನಾಂಗಗಳ ಸಂಸ್ಕತಿಯ ಸ್ವರೂಪಗಳು' ಎಂದು ಮಾಡಿಕೊಂಡು ಕೊಡಗಿನ ಗೌಡರು, ಕೆಂಬಟ್ಟಿ ಹೊಲೆಯರು, ಹಾಗೂ ಬುಡಕಟ್ಟು ಜನರಾದ ಜೇನುಕರುಬರು ಮತ್ತು ಎರವರ ಸಂಸ್ಕೃತಿಯ ವೈವಿಧ್ಯತೆಗಳನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

## ೫.೧. ಕೊಡವೇತರರು

ಕೊಡಗಿನಲ್ಲಿ ಹಲವಾರು ಜನಾಂಗಗಳಲ್ಲಿದ್ದು ಅರೆಭಾಷೆ ಗೌಡರು ಮತ್ತು ಕೆಂಬಟ್ಟಿಯರನ್ನು ಕೊಡವೇತರರು ಎಂದು ಗುರುತಿಸಿ ಈ ಭಾಗದಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ.

### ೫.೧.೧. ಅರೆಭಾಷೆ ಗೌಡರು

ಕೊಡಗಿನಲ್ಲಿ ಜನಾಂಗೀಯವಾಗಿ ವಿಭಿನ್ನತೆಯನ್ನು ಹೊಂದಿರುವ ಕೊಡವರು ಭಾರತದ ಉತ್ತರ ಭಾಗದಿಂದ ವಲಸೆ ಬಂದು ಇಲ್ಲಿನ ಮೂಲನಿವಾಸಿಗಳೆನಿಸಿರುವಂತೆಯೇ, ಅನೇಕ ಕಡೆಯಿಂದ ಬೇರೆಬೇರೆಯವರು ಹಲವು ಕಾರಣಗಳಿಂದ ಇಲ್ಲಿಗೆ ವಲಸೆ ಬಂದು ನೆಲೆಸಿರುವುದನ್ನು ಗುರುತಿಸಲಾಗಿದೆ. ಹೀಗೆ ಕಾರಣಾಂತರದಿಂದ ಬಂದವರಲ್ಲಿ ಗೌಡ ಜನಾಂಗದವರೂ ಪ್ರಮುಖರೆನಿಸಿದ್ದಾರೆ. ಕೊಡಗಿನಲ್ಲಿ ಕೊಡವರನ್ನು ಹೊರತುಪಡಿಸಿದರೆ, ಸಾಮಾಜಿಕ ಹಾಗೂ ಆರ್ಥಿಕವಾಗಿ ಸಧೃಡರಾಗಿರುವವರೆಂದರೆ ಕೊಡಗಿನ ಗೌಡರು ಎಂದೇ ಹೇಳಬಹುದು. ಇವರು ದಕ್ಷಿಣ ಕನ್ನಡದ ಸುಳ್ಯ ಪ್ರದೇಶದ ಕಡೆಯಿಂದ ಕೊಡಗಿಗೆ ವಲಸೆ ಬಂದವರು ಎಂದು ಹೇಳಲಾಗುತ್ತದೆ. ಕೊಡವರಿಂದ ಸಾಂಸ್ಕೃತಿಕವಾಗಿ ಭಿನ್ನರಾಗಿರುವ ಗೌಡರು ಕೊಡವ ಸಂಸ್ಕೃತಿಯ ಕೆಲವೊಂದು ಸಾಂಸ್ಕೃತಿಕ ಅಂಶಗಳನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡು ಬರುತ್ತಿದ್ದಾರೆ.

ಗೌಡ ಜನಾಂಗದವರು ಕೊಡಗಿಗೆ ಹೇಗೆ ಮತ್ತು ಎಲ್ಲಿಂದ ವಲಸೆ ಬಂದರು ಎಂಬುದರ ಕುರಿತಾಗಿ ಹಲವಾರು ಗಮನಾರ್ಹ ಅಭಿಪ್ರಾಯಗಳು ದೊರೆಯುತ್ತವೆ. 'ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರದಲ್ಲಿದ್ದ ಗೌಡ ಜನಾಂಗದವರು ತಾಳಿಕೋಟೆ ಕದನದಲ್ಲಿ ಆ ಸಾಮ್ರಾಜ್ಯವು ಪತನವಾದ ಬಳಿಕ ಮುಸ್ಲಿಮರ ಆಳ್ವಿಕೆಯನ್ನು ಒಪ್ಪದೆ ಇಕ್ಕೇರಿ ಸಂಸ್ಥಾನಕ್ಕೆ ಬಂದರು. ನಂತರ ಇಕ್ಕೇರಿ ನಾಯಕರು ದಕ್ಷಿಣ ಕನ್ನಡದ ಸಾರ್ವಭೌಮರಾದ ಮೇಲೆ ತಮ್ಮ ಸಂಸ್ಥಾನದ ಐಗೂರು ಸೀಮೆಯಿಂದ ಗೌಡ ಜನಾಂಗದದವರನ್ನು ಕರೆದು ತಂದು ಮಲೆನಾಡಿನ ಪ್ರದೇಶದಲ್ಲಿ ಭೂಮಿಕೊಟ್ಟು ವಾಸಿಸಲು ಅವಕಾಶ ಮಾಡಿಕೊಟ್ಟರಂತೆ'.[೧] ಗೌಡರು ಕೃಷಿ ವ್ಯವಸಾಯದಲ್ಲಿ ನಿಪುಣರಾಗಿದ್ದುದರಿಂದ ವೀರರಾಜೇಂದ್ರನು ದಕ್ಷಿಣ ಕನ್ನಡ ಮತ್ತು ಅಮರ ಸುಳ್ಯಗಳನ್ನು ತನ್ನ ವಶಕ್ಕೆ ಪಡೆದ ನಂತರ ಇಲ್ಲಿಯ ಗೌಡರನ್ನು ಕೊಡಗಿಗೆ ಕರೆಸಿಕೊಂಡು ಪಾಳುಬಿದ್ದ ಭೂಮಿಯನ್ನು ಕೃಷಿ ಮಾಡಿಕೊಂಡು ಜೀವನ ನಡೆಸುವಂತೆ ಒತ್ತಾಯಿಸಿದನಂತೆ. ಅಲ್ಲದೆ ಕೃಷಿಭೂಮಿಯ ಮೇಲೆ ಅವರಿಗೆ 'ಜಮ್ಮ'(ಮೂಲ)ಹಕ್ಕು, ಜಹಗೀರು, ಉಂಬಳಿ ಎಂಬುದಾಗಿ ದಾಖಲೆ ಮಾಡಿ ಪ್ರತಿಯೊಂದು ಕುಟುಂಬಕ್ಕೂ ನಿರೂಪ ವಸ್ತುಗಳನ್ನು ನೀಡಿದನು[೨] ಎಂದು ತಿಳಿದುಬರುತ್ತದೆ.

ಸುಳ್ಯದಿಂದ ಗೌಡ ಜನಾಂಗದವರನ್ನು ಕೊಡಗಿಗೆ ಕರೆತರಲು ಮತ್ತೊಂದು ಕಾರಣ ತಿಳಿದುಬರುತ್ತದೆ. ಮೈಸೂರು ಅಧಿಕಾರದಲ್ಲಿದ್ದ ಟಿಪ್ಪುಸುಲ್ತಾನನು ಕೊಡಗಿನಿಂದ ಎಂಬತ್ತು ಸಾವಿರಕ್ಕೂ ಅಧಿಕ ಸಂಖ್ಯೆಯ ಕೊಡವರನ್ನು ಭಾಗಮಂಡಲದ ಹತ್ತಿರವಿರುವ 'ದೇವಟಿ ಪರಂಬು'ವಿಗೆ ಔತಣದ ನೆಪದಲ್ಲಿ ಕರೆಸಿಕೊಂಡು ಅವರನ್ನೆಲ್ಲಾ ವಂಚಿಸಿ ಶ್ರೀರಂಗಪಟ್ಟಣಕ್ಕೆ

ಎಳೆದುಕೊಂಡು ಹೋಗಿ ಮತಾಂತರಗೊಳಿಸುತ್ತಾನೆ. ಆ ಬಳಿಕ ಕೊಡಗಿನಲ್ಲಿ ಜನಸಂಖ್ಯೆ ತುಂಬಾ ಕಡಿಮೆಯಾಗಿ ಕೃಷಿಭೂಮಿಯೆಲ್ಲವೂ ಪಾಳುಬಿದ್ದಿತು. ಕೃಷಿ ಚಟವಟಿಕೆಗಳಿಗೆ ಜನರೇ ಇಲ್ಲದಂತಾ ಗಿರುವಾಗ ಕೊಡಗಿನ ರಾಜನಾಗಿದ್ದ ದೊಡ್ಡವೀರರಾಜೇಂದ್ರನು ಅವನ ದಂಡಾಳುಗಳೂ ಮತ್ತು ಮುಖ್ಯಾಧಿಕಾರಿಗಳನ್ನು ದಕ್ಷಿಣ ಕನ್ನಡ, ಮೈಸೂರು ಮತ್ತು ಹಾಸನದ ಕೆಲವು ಪ್ರದೇಶಗಳಿಂದ ಗೌಡರನ್ನು ಕರೆಸಿಕೊಂಡಿರುವುದು ದಾಖಲಾಗಿದೆ.[೩] ಈ ರೀತಿ ಬಂದವರಲ್ಲಿ ಅಮರಸುಳ್ಯದ ಗೌಡರೇ ಹೆಚ್ಚಾಗಿದ್ದರು ಎಂದು ಹೇಳಲಾಗಿದೆ. ಹೀಗೆ ಅಮರಸುಳ್ಯದ ಕಡೆಯಿಂದ ವಲಸೆ ಬಂದವರನ್ನು ಮುಖ್ಯವಾಗಿ 'ಅರೆಭಾಷೆ' ಗೌಡರು ಎಂದು ಕರೆಯಲಾಗುತ್ತದೆ. ಇಷ್ಟು ಮಾತ್ರವಲ್ಲದೆ ಬ್ರಿಟೀಷರು ಕೊಡಗಿನಲ್ಲಿ ಕಾಫಿ ಪ್ಲಾಂಟೇಶನ್‌ಗಳನ್ನು ಬೆಳೆಸಿದಾಗ ಅವರಿಗೆ ವಿವಿಧ ಕಾಮಗಾರಿಗಳಿಗಾಗಿ ಜನರು ಬೇಕಾಗಿದ್ದರು, ಆ ಸಮಯದಲ್ಲಿ ಮಲಬಾರ್, ಮೈಸೂರು ಮತ್ತು ದಕ್ಷಿಣ ಕನ್ನಡದಿಂದ ಜೀವನವನ್ನರಸಿಕೊಂಡು ಹಲವು ಜನಾಂಗದವರು ಬಂದರು. ಇವರಲ್ಲಿ ಈಗಿರುವ ಗೌಡರೂ ಸೇರಿದ್ದರು ಎಂದು ತಿಳಿದುಬರುತ್ತದೆ. ೨೦೦೪ರ ಸಮೀಕ್ಷೆಯ ಪ್ರಕಾರ ಕೊಡಗಿನಲ್ಲಿ ಒಂದು ಲಕ್ಷಕ್ಕೂ ಹೆಚ್ಚು ಅರೆಭಾಷೆ ಗೌಡರಿದ್ದಾರೆಂದು ಗುರುತಿಸಲಾಗಿದೆ.[೩೨]

ಕೊಡಗಿನಲ್ಲಿ ಗೌಡರು ಕೃಷಿಯನ್ನೇ ಪ್ರಮುಖ ವೃತ್ತಿಯನ್ನಾಗಿ ಅವಲಂಬಿಸಿದ್ದಾರೆ. ಸಾಂಪ್ರದಾಯಿಕ ಬೆಳೆಗಳನ್ನು ಅಳವಡಿಸಿಕೊಂಡು ಬದುಕುತ್ತಿದ್ದ ಗೌಡರು ಕ್ರಮೇಣ ಇಲ್ಲಿಯ ವಾಣಿಜ್ಯ ಬೆಳೆಗಳಾದ ಕಾಫಿ, ಏಲಕ್ಕಿ, ಕಿತ್ತಳೆ, ತೆಂಗು, ಅಡಿಕೆ, ಮುಂತಾದವುಗಳನ್ನು ಬೆಳೆಯಲು ಪ್ರಾರಂಭಿಸಿದರು. ಕೊಡವರಂತೆಯೆ ದೊಡ್ಡ ದೊಡ್ಡ ಎಸ್ಟೇಟ್‌ಗಳನ್ನು ಇಲ್ಲಿಯ ಗೌಡರು ಹೊಂದಿದ್ದು, ಸಾಮಾಜಿಕ ಮತ್ತು ಆರ್ಥಿಕ ದೃಷ್ಟಿಯಿಂದ ಕೊಡವರಿಗೆ ಸರಿಸಮವಾಗಿ ನಿಂತಿದ್ದರೂ ಕೊಡವರ ಸಂಸ್ಕೃತಿಯಿಂದ ಪ್ರಭಾವಿತರಾಗಿದ್ದಾರೆ.

ಅಮರ ಸುಳ್ಯದಿಂದ ಬಂದಂತಹ ಗೌಡರಲ್ಲಿ ಒಂದೊಂದು ಕುಟುಂಬವೂ ಒಂದೊಂದು ಸ್ಥಳದಲ್ಲಿ ನೆಲೆನಿಂತು ವ್ಯವಸಾಯದಲ್ಲಿ ತೊಡಗಿಕೊಂಡಿದ್ದಾರೆ. ಅವಿಭಕ್ತ ಕುಟುಂಬ ಪದ್ಧತಿಗಳಿಗೆ ಹೊಂದಿಕೊಂಡಿದ್ದ ಗೌಡ ಜನಾಂಗದ ಸದಸ್ಯರೆಲ್ಲಾ ಹಿಂದೆ ಒಂದೇ ಸೂರಿನಡಿಯಲ್ಲಿ ವಾಸಿಸುತ್ತಿದ್ದರು. ಇಂತಹ ಮನೆಗಳನ್ನು ಕೊಡವರು 'ಐನ್‌ಮನೆ' ಎಂದು ಕರೆದುಕೊಂಡಂತೆ ಗೌಡರು 'ದೊಡ್ಡ ಮನೆ' ಎಂದು ಕರೆದುಕೊಂಡಿದ್ದಾರೆ

ದಕ್ಷಿಣ ಕನ್ನಡದಿಂದ ವಲಸೆ ಬಂದು ಕೊಡಗಿನಲ್ಲಿ ವಾಸಿಸಲು ಆರಂಭಿಸಿದ ಮೇಲೆ ಇವರ ವೇಷ ಭಾಷೆಗಳಲ್ಲಿ ಬದಲಾವಣೆಗಳಾಗಿರುವುದು ಕಂಡುಬಂದಿದೆ. ಇದಕ್ಕೆ ಪ್ರಾಕೃತಿಕ ವ್ಯತ್ಯಾಸಗಳು ಮಾತ್ರವಲ್ಲದೆ, ಇಲ್ಲಿನ ಆಡಳಿತ ವ್ಯವಸ್ಥೆಯೂ ಕಾರಣವಾಗಿರಬಹುದು. ಕೊಡಗಿನ ರಾಜ ಲಿಂಗರಾಜನು ಬರೆಸಿದ 'ಹುಕುಂನಾಮೆ'ಯ ಪ್ರಕಾರ ಪ್ರತಿಯೊಬ್ಬ ಮತಸ್ಥನೂ ರಾಜನಾಸ್ಥಾನಕ್ಕೆ ಆಗಮಿಸುವಾಗ ಒಂದೇ ರೀತಿಯ ಉಡುಪು ಧರಿಸಿರಬೇಕಿತ್ತು[೪] ಕೊಡವರಂತೆಯೆ ಉದ್ದ ಕೈಯಿಂದ ಕೂಡಿದ ಕುಪ್ಪಸ, ಸೊಂಟಕ್ಕೆ ಕಪ್ಪು ಬಣ್ಣದ ದಟ್ಟಿ, ತಲೆಗೆ ಕಪ್ಪು ಬಣ್ಣದ ಪೇಟ(ಪನಿಕಟ್ಟು), ಕೈಗೆ ಒಡಿಕತ್ತಿ, ಸೊಂಟದ ದಟ್ಟಿಗೆ ಸಿಕ್ಕಿಸಲು ಪೀಚೆಗತ್ತಿ ಇರಲೇಬೇಕೆಂಬ

ನಿಯಮಗಳಿದ್ದುದರಿಂದ ಗೌಡರ ವೇಷಗಳಲ್ಲಿಯೂ ಬದಲಾವಣೆಗಳಾಗಿರಬಹುದು. ಪುರುಷರಂತೆಯೇ ಗೌಡ ಜನಾಂಗದ ಮಹಿಳೆಯರು ಕೂಡ ಕೊಡವ ಮಹಿಳೆಯರು ಉಟ್ಟುಕೊಳ್ಳುವ ರೀತಿಯಲ್ಲಿ ಸೀರೆಯನ್ನು ತೊಡಲು ಪ್ರಾರಂಭಿಸಿದರು.

**ಅ. ಆಚರಣೆಗಳು**

**ಜನನ:** ಎಲ್ಲಾ ಸಮಾಜಗಳಲ್ಲಿ ಇರುವಂತೆ ಕೊಡಗಿನ ಗೌಡ ಸಮುದಾಯದಲ್ಲೂ ಮಗುವಿನ ಜನನಕ್ಕೆ ಹೆಚ್ಚು ಪ್ರಾಮುಖ್ಯತೆಯಿದೆ. ಗರ್ಭಿಣಿಗೆ ನವಮಾಸ ತುಂಬಿ ಪ್ರಸವ ವೇದನೆ ಕಾಣಿಸಿಕೊಂಡ ಕೂಡಲೇ ಆಕೆಯನ್ನು ತಕ್ಷಣ ಮನೆಯಲ್ಲಿನ ಪ್ರತ್ಯೇಕ ಜಾಗಕ್ಕೆ ಸ್ಥಳಾಂತರಿಸಿ ಮನೆಯ ಇತರರಿಂದ ಪ್ರತ್ಯೇಕಿಸುತ್ತಾರೆ. ಅಷ್ವರಲ್ಲಿ ಹೆರಿಗೆ ಮಾಡಿಸುವ ಕಾಯಕದಲ್ಲಿ ಪರಿಣತಿಯನ್ನು ಹೊಂದಿರುವ ಮಹಿಳೆಯನ್ನು ಕರೆಸಲಾಗಿರುತ್ತದೆ. ಅಲ್ಲಿ ನೆರೆದ ಇತರ ಹೆಂಗಸರ ಸಹಾಯವನ್ನು ಪಡೆದು ಸೂಲಗಿತ್ತಿ ಸುಖಕರವಾಗಿ ಹೆರಿಗೆ ಮಾಡಿಸುತ್ತಾಳೆ. ತಾಯಿಯ ಗರ್ಭದಿಂದ ಹೊರಬಂದ ಮಗುವಿನ ಹೊಕ್ಕುಳ ಬಳ್ಳಿಯನ್ನು ಕತ್ತರಿಸಿ ಆ ಜಾಗಕ್ಕೆ ಸುಟ್ಟ ಅರಿಶಿನದ ಪುಡಿಯನ್ನು ತೆಳುವಾಗಿ ಲೇಪನ ಮಾಡುತ್ತಾರೆ. ಗಾಯ ಬೇಗ ಒಣಗಿ ಹೋಗಲಿ ಎಂಬ ಕಾರಣದಿಂದ ಅರಿಶಿಣದ ಪುಡಿಯನ್ನು ಹಚ್ಚುವಂತದ್ದು. ಮಗು ಜನಿಸಿದ ವಿಚಾರವನ್ನು ಕಂಚಿನ ತಟ್ಟೆಯನ್ನು ಬಡಿಯುವುದರ ಮೂಲಕ ಮನೆ ಮಂದಿಗೆಲ್ಲ ತಿಳಿಸಲಾಗುತ್ತದೆ. ಹುಟ್ಟಿದ ಮಗುವಿನ ಬಾಯಿಗೆ ಕಾಳು ಮೆಣಸಿನ ಪುಡಿಯನ್ನು ಹಾಕುವುದುಂಟು.[೫] ಮಗುವಿನ ಗಂಟಲಿನಲ್ಲಿ ಕಟ್ಟಿರುವ ಕಫ ಕರಗಲಿ ಅಥವಾ ಅದರ ಉರಿಗೆ ಅಳುವಂತಾಗಲಿ ಎಂದು ಹೀಗೆ ಮಾಡುವ ಸಾಧ್ಯತೆಗಳಿರಬಹುದು.

ಮಗು ಹುಟ್ಟಿದ ಐದನೇ ದಿನ 'ಆಮೆ' ತೆಗೆಯುವುದು ಎಂಬ ಶುದ್ಧಿ ಮಾಡುವ ಪದ್ಧತಿಯನ್ನು ಅನುಸರಿಸುತ್ತಾರೆ. ಈ ಕಾರ್ಯವನ್ನು ಅಲ್ಲಿಯ ಮಡಿವಾಳಗಿತ್ತಿ ಮಾಡುತ್ತಾಳೆ. ಈ ಸಂದರ್ಭದಲ್ಲಿ ಮನೆಯ ಜಗಲಿಯಲ್ಲಿ ಒಂದು ಮಣೆ ಇಟ್ಟು ಅದರ ಮೇಲೆ ಕಂಚಿನ ಹರಿವಾಣ ಇಟ್ಟು ಅದಕ್ಕೆ ಬೆಳ್ತಕ್ಕಿಯನ್ನು ಹಾಕಿ ಅಕ್ಕಿಯ ಮೇಲೆ ಸುಲಿದ ತೆಂಗಿನಕಾಯಿಯನ್ನು ಇಟ್ಟು ಅದರ ಮೇಲೆ ಐದು ಅಥವಾ ಆರು ಅಡಿ ಉದ್ದದ ನೂಲನ್ನು ಇಡಲಾಗುತ್ತದೆ. ಪಕ್ಕದಲ್ಲಿ ದೀಪ ಹಚ್ಚಿರುತ್ತಾರೆ. ತಾಯಿ ಮತ್ತು ಮಗುವನ್ನು ನೋಡಿ ಹೋಗಲು ಬಂದವರು ದೀಪಕ್ಕೆ ಕೈ ಮುಗಿದು ತಾಯಿಗೆ ಅಕ್ಷತೆಯನ್ನು ಹಾಕುತ್ತಾರೆ. ನಂತರ ಮಡಿವಾಳಗಿತ್ತಿ ತೆಂಗಿನಕಾಯಿ ಮೇಲಿರುವ ಬಿಳಿ ನೂಲನ್ನು ತೆಗೆದು ಮಗುವಿನ ಸೊಂಟಕ್ಕೆ ಕಟ್ಟುತ್ತಾಳೆ. ಈ ಕಾರ್ಯ ಸಾಮಾನ್ಯವಾಗಿ ಮಧ್ಯಾಹ್ನಕ್ಕೆ ಮೊದಲು ನಡೆಯಬೇಕೆಂಬ ನಿಯಮವಿದೆ.

ಮಗು ಹುಟ್ಟಿದ ದಿನದಿಂದ ಸುಮಾರು ಹದಿನೈದು ದಿನಗಳವರೆಗೆ ಬಹಳ ಎಚ್ಚರಿಕೆಯಿಂದ ಆರೈಕೆ ಮಾಡುತ್ತಾರೆ. ಈ ಕೆಲಸವನ್ನು ಆ ಮನೆಯಲ್ಲಿನ ಹಿರಿಯ ಮಹಿಳೆಯರು ಅಥವಾ ಅಜ್ಜಿಯರು ನಿರ್ವಹಿಸುತ್ತಾರೆ. ಬಾಣಂತನ ಮಾಡಿದ ಅನುಭವವಿರುವವರು ಮಗುವಿನ ಆರೈಕೆಗೆ ಸೂಕ್ತವೆನಿಸುವುದರಿಂದ ಆ ಮನೆಯಲ್ಲಿ ಅನುಭವವಿರುವವರು ಯಾರೂ ಇಲ್ಲವಾದಲ್ಲಿ ತಮ್ಮ

ನೆಂಟರಿಷ್ಟರನ್ನು ಕರೆಸಿಕೊಳ್ಳುವುದುಂಟು. ಸಾಮಾನ್ಯವಾಗಿ ಹುಟ್ಟಿದ ಮಗುವಿಗೆ ಯಾರೂ ಹೊಸ ಬಟ್ಟೆಗಳನ್ನು ತೊಡಿಸುವುದಿಲ್ಲ. ಇದೇ ಕ್ರಮ ಕೊಡಗಿನ ಗೌಡರಲ್ಲಿಯೂ ಇದೆ. ಪ್ರಾರಂಭದಲ್ಲಿ ಹಳೆಯ ಬಟ್ಟೆಯನ್ನು ಬಳಸಿ ಕ್ರಮೇಣ ಹೊಸ ಬಟ್ಟೆಗಳನ್ನು ಹಾಕುತ್ತಾರೆ. ಮಗುವಿಗೆ ಮೂರು ತಿಂಗಳವರೆಗೆ ತಾಯಿಯ ಎದೆ ಹಾಲನ್ನು ಹೊರತು ಪಡಿಸಿ ಬೇರಾವುದೇ ರೀತಿಯ ಆಹಾರವನ್ನು ನೀಡುವುದಿಲ್ಲ. ನಂತರದ ದಿನಗಳಲ್ಲಿ ಮನೆಯಲ್ಲಿಯೇ ಹಿಟ್ಟನ್ನು ಕಡೆದು ಅದನ್ನು ತುಪ್ಪದಲ್ಲಿ ಬೇಯಿಸಿದ 'ಮಣ್ಣಿ' ಎಂದು ಕರೆಯಲ್ಪಡುವ ತೆಳುವಾದ ಅಹಾರವನ್ನು ತಿನ್ನಿಸುತ್ತಾರೆ.

**ನಾಮಕರಣ:** ಕೊಡಗಿನ ಗೌಡರಲ್ಲಿ ಮಗು ಜನಿಸಿದ ಹದಿನಾರು ದಿನದ ನಂತರ ತೊಟ್ಟಿಲಿಗೆ ಹಾಕುವ ಶಾಸ್ತ್ರವನ್ನು ಮಾಡುತ್ತಾರೆ. ಇದು ನಾಮಕರಣದ ಮೊದಲ ಹಂತ. ಈ ತೊಟ್ಟಿಲನ್ನು ಮನೆಯ 'ನೆಲ್ಲಕ್ಕಿ ನಡುಬಾಡೆಯ'ಯ ಕೆಳಗೆ ಇಡುತ್ತಾರೆ. ಮೊದಲೆಲ್ಲಾ ತೊಟ್ಟಿಲನ್ನು ಮರದಿಂದ ಅಥವಾ ಬಿದಿರಿನಿಂದ ಮಾಡಿಸುತ್ತಿದ್ದರು. ಇತ್ತೀಚಿಗೆ ಕಬ್ಬಿಣದಿಂದ ಮಾಡಿದ ತೊಟ್ಟಿಲುಗಳನ್ನು ಬಳಸುತ್ತಿದ್ದಾರೆ. ಮನೆಯ ಯಜಮಾನಿ ಅಥವಾ ಹಿರಿಯ ಮುತ್ತೈದೆ ಹೆಂಗಸು ಮಗುವನ್ನು ಮಡಿಲಲ್ಲಿ ಮಲಗಿಸಿಕೊಂಡು ನೆಲ್ಲಕ್ಕಿಯಲ್ಲಿ ಕುಳಿತುಕೊಳ್ಳುತ್ತಾರೆ. ನಂತರ ಅನ್ನ ಕೊಡುವ ಕ್ರಮ ಆರಂಭವಾಗುತ್ತದೆ. ಅನ್ನವನ್ನು ನುಣ್ಣಗೆ ಅರೆದು ಒಂದು ಮಣ್ಣಿನ ಚಟ್ಟೆಯಲ್ಲಿಟ್ಟುಕೊಂಡಿರುತ್ತಾರೆ. ಮೊದಲು ಅಜ್ಜಿ ಮಗುವಿನ ಬಾಯಿಗೆ ಅನ್ನ ಹಾಕಿ "ಅನ್ನ ಊಟ ಮಾಡಿ ನೂರು ವರ್ಷ ಬಾಳು ಮಗುವೆ" ಎಂದು ಹರಸುತ್ತಾರೆ. ಜೋಯಿಸರು ಮಗುವಿನ ನಕ್ಷತ್ರದ ಪ್ರಕಾರ ಸೂಚಿಸಿದ ಹೆಸರನ್ನು ಮಗುವಿನ ಕಿವಿಯಲ್ಲಿ ಮೂರು ಸಲ ಮೆತ್ತನೆ ಧ್ವನಿಯಲ್ಲಿ ಹೇಳುತ್ತಾರೆ. ಕೊಡಗಿನ ಗೌಡರು ತಮ್ಮ ಮಕ್ಕಳಿಗೆ ಎರಡೆರಡು ಹೆಸರುಗಳನ್ನಿಟ್ಟಿರುತ್ತಾರೆ. ಒಂದು ಹೆಸರು ಮನೆಯಲ್ಲಿ ಪ್ರೀತಿಯಿಂದ ಕರೆಯಲು. ಮತ್ತೊಂದು ಶಾಲಾ ದಾಖಲಾತಿಗಾಗಿ. ದಾಖಲೆಗೆ ಕೊಡುವ ಹೆಸರು ಜೋಯಿಸರು ಸೂಚಿಸಿದ ಹೆಸರಾಗಿರುತ್ತದೆ. ಕೊಡವರಂತೆಯೇ ಇಲ್ಲಿನ ಗೌಡರಲ್ಲಿ ಹೆಸರಿನ ಮೊದಲು ತಮ್ಮ ಕುಟುಂಬದ ಹೆಸರನ್ನು ಹೊಂದಿರುತ್ತಾರೆ.

**ಶವಸಂಸ್ಕಾರ:** 'ಮರಣ' ಎಂತಹವರನ್ನು ಅಧೀರರನ್ನಾಗಿ ಮಾಡುತ್ತದೆ. ಆದರೂ ಸತ್ತವರ ಸಂಸ್ಕಾರವನ್ನು ಅತ್ಯಂತ ಜತನದಿಂದ ಮತ್ತು ಶ್ರದ್ಧಾ ಭಕ್ತಿಯಿಂದ ನೆರವೇರಿಸುವುದು ಎಲ್ಲೆಡೆಯೂ ಕಂಡುಬರುತ್ತದೆ. ಕೊಡಗಿನಲ್ಲಿಯ ವಿವಿಧ ಜನಸಮುದಾಯ ಬೇರೆ ಬೇರೆ ರೀತಿಯ ಪದ್ಧತಿಗಳನ್ನು ಅನುಸರಿಸಿ ಶವಸಂಸ್ಕಾರ ಮಾಡುವ ಸನ್ನಿವೇಶಗಳನ್ನು ಕಾಣಬಹುದು. ಅದರಂತೆ ಇಲ್ಲಿನ ಅರೆಭಾಷೆ ಗೌಡರೂ ಕೂಡ ಶವಸಂಸ್ಕಾರವನ್ನು ವಿಶೇಷ ಕಾಳಜಿ ಮತ್ತು ಶ್ರದ್ದೆಗಳಿಂದ ಮಾಡುತ್ತಾರೆ.

ಇವರಲ್ಲಿ ಮರಣ ಶಯ್ಯೆಯಲ್ಲಿರುವ ವ್ಯಕ್ತಿಯನ್ನು ಮನೆಯ ಜಗಲಿಗೆ ತಂದು ಮಲಗಿಸುತ್ತಾರೆ. ಒಂದು ವೇಳೆ ವ್ಯಕ್ತಿ ಸಾಯುವ ಸಂದರ್ಭದಲ್ಲಿ ಮಂಚದ ಮೇಲಿದ್ದರೂ ಆತನನ್ನು ಕೆಳಗೆ ಮಲಗಿಸಬೇಕೆಂಬ ಪದ್ಧತಿಯನ್ನು ಇವರು ರೂಢಿಸಿಕೊಂಡಿದ್ದಾರೆ. ಜೀವ ಹೋದದ್ದನ್ನು ದೃಢಪಡಿಸಿಕೊಂಡು 'ದೊಡ್ಡ ಜೀವ ಹೋಯಿತು' ಎಂದು ತುಳಸಿಯ ಎಲೆಯಿಂದ

ವ್ಯಕ್ತಿಯ ಬಾಯಿಗೆ ನೀರು ತಾಗಿಸುತ್ತಾರೆ. ಬೆಳ್ತಕ್ಕಿ ಹಾಗೂ ಶುದ್ಧ ನೀರು ಅಥವಾ ಸಾಧ್ಯವಾದರೆ ಎಳನೀರನ್ನು ಕಂಚಿನ ಪಾತ್ರೆಗೆ ಹಾಕಿ ತುಳಸಿಯ ಎಲೆಯ ಮೂಲಕ ಸತ್ತವರ ಬಾಯಿಗೆ ಮೊದಲು ಮನೆಯವರು ಹಾಕುತ್ತಾರೆ. ನಂತರ ಆಕಾಶಕ್ಕೆದುರಾಗಿ ಜೋಡುಗುಂಡು ಹಾರಿಸುವದರ ಮೂಲಕ ಊರಿನವರಿಗೆ ಸುದ್ದಿ ಮುಟ್ಟಿಸುತ್ತಾರೆ. ಸತ್ತ ವ್ಯಕ್ತಿಯ ಮನೆಯ ಮಾಡನ್ನು ತೂತು ಮಾಡುವುದು ಕೊಡಗು ಗೌಡರ ಪದ್ಧತಿ. ಏಕೆಂದರೆ ಮೃತನ ಪ್ರಾಣಪಕ್ಷಿಯನ್ನು ಕೊಂಡೊಯ್ಯಲು ಯಮದೂತರು ಬಂದು ಹೋಗಲು ಜಾಗ ಎಂದು ಇವರು ನಂಬಿದ್ದಾರೆ. ಶವದ ಕೈಕಾಲುಗಳನ್ನು ನೇರವಾಗಿಸಿ ಕಣ್ಣುಗಳು ಮುಚ್ಚದಿದ್ದರೆ ಅವುಗಳನ್ನು ಕೈಯಿಂದ ತೀಡಿ ಮುಚ್ಚಿ ದಕ್ಷಿಣ ಭಾಗಕ್ಕೆ ತಲೆಯನ್ನಿಟ್ಟು ಮಲಗಿಸುತ್ತಾರೆ. ಬಿಳಿಯ ಬಟ್ಟೆಯನ್ನು ಶವದ ಮೇಲೆ ಹೊದಿಸಿ ಸಮೀಪದಲ್ಲಿ ಒಂದು ಉರಿಯುವ ದೀಪವನ್ನು ಇಡುತ್ತಾರೆ. ಪಕ್ಕದಲ್ಲಿ ಬೆಂಕಿ ಹಾಕಿ ಅದಕ್ಕೆ ಗಂಧದ ಚೂರು ಹಾಗೂ ನೆಕ್ಕಿ ಸೊಪ್ಪನ್ನು ಹಾಕುತ್ತಾರೆ. ಕಾರಣ ಇದರಿಂದ ಹೊರಬರುವ ಹೊಗೆ ಶವದ ವಾಸನೆಯನ್ನು ತಡೆಯುತ್ತದೆ.

ಬಂಧು-ಬಳಗ, ನೆರೆಹೊರೆಯವರು ಬಂದು ಸೇರಿದ ಮೇಲೆ ಶವವನ್ನು ಅಂಗಳಕ್ಕೆ ತಂದು ಬೆಂಚಿನ ಅಥವಾ ಚಿಕ್ಕದೊಂದು ಮಂಚದ ಮೇಲೆ ಮಲಗಿಸಿ ಎಣ್ಣೆ ಅರಶಿನವನ್ನು ಮಿಶ್ರ ಮಾಡಿ ಗರಿಕೆ ಹುಲ್ಲಿನಿಂದ ದೇಹಕ್ಕೆ ಲೇಪನ ಮಾಡಿ ನಂತರ ಸ್ನಾನ ಮಾಡಿಸುತ್ತಾರೆ. ಮುಖ ಕ್ಷೌರ ಮಾಡಿಸುವುದಿದ್ದರೆ ಅದನ್ನು ಪೂರೈಸಿ ಶವಕ್ಕೆ ಸ್ನಾನ ಮಾಡಿಸಿ ಮಡಿ ಬಟ್ಟೆಯನ್ನು ಧರಿಸುತ್ತಾರೆ. ಹೆಂಗಸಾಗಿದ್ದರೆ ಆಕೆಯ ಧಾರೆಯ ಸಮಯದ ಸೀರೆ ಮತ್ತು ರವಿಕೆಯನ್ನು ಮಗುಚಿ ಉಡಿಸುತ್ತಾರೆ. ಗಂಡಸಾದರೆ ಅವನ ಅಂಗಿಯನ್ನು ಮಗುಚಿ ಹಾಕುತ್ತಾರೆ. ಮುತ್ತೈದೆ ಸತ್ತರೆ ತಲೆ ತುಂಬಾ ಹೂ, ಕೈತುಂಬಾ ಬಳೆ ತೊಡಿಸಿ ಹಣೆ ತುಂಬಾ ಕುಂಕುಮ ಇಟ್ಟು ಹಣೆಗೊಂದು ನಾಣ್ಯವನ್ನು ಅಂಟಿಸುತ್ತಾರೆ.

ಹೀಗೆ ಮನೆಯ ಸಮೀಪ ಬೇರೆಬೇರೆ ವಿಧಿವಿಧಾನಗಳು ನಡೆಯುತ್ತಿರುವಂತೆಯೇ ಮತ್ತೊಂದೆಡೆಯಲ್ಲಿ ಶವ ಸಂಸ್ಕಾರಕ್ಕೆ ತಯಾರಿ ನಡೆಯುತ್ತಿರುತ್ತದೆ. ಕೊಡಗಿನ ಗೌಡ ಜನಾಂಗದಲ್ಲಿ ಶವವನ್ನು ಸುಡುವುದು ಸಾಮಾನ್ಯವಾಗಿ ರೂಢಿಯಲ್ಲಿದೆ. ಆದರೆ ಬಾಲ್ಯಾವಸ್ಥೆಯ ಅಂದರೆ ಸುಮಾರು ಹತ್ತು ವರ್ಷದೊಳಗಿನ ಮಕ್ಕಳು ಮತ್ತು ತೊನ್ನು, ಕುಷ್ಠ ರೋಗದಂತಹ ಕಾಯಿಲೆಗಳಿಂದ ಯಾರಾದರೂ ಸತ್ತರೆ ಅವರನ್ನು ಹೂಳುತ್ತಾರೆ. ಹಾಗಾಗಿ ಒಂದು ಕಡೆ ಕಟ್ಟಿಗೆಯನ್ನು ಕಡಿಯುವ ಕೆಲಸಕ್ಕೂ ಸಿದ್ಧತೆ ನಡೆಯುತ್ತಿರುತ್ತದೆ. ಮೃತನ ಮನೆಯವರು ಕಟ್ಟಿಗೆ ಕಡಿದು ಒಟ್ಟುವುದಕ್ಕೆ ಬೇಕಾದ ಕತ್ತಿ, ಮಚ್ಚು, ಕೊಡಲಿ, ಗುದ್ದಲಿ ಮೊದಲಾವುಗಳನ್ನು ಮನೆಯ ಅಂಗಳಕ್ಕೆ ತಂದಿಡುತ್ತಾರೆ. ನಂತರ ಆ ಗ್ರಾಮದ ಕೆಲವರು ಎಲ್ಲ ಸಲಕರಣೆಗಳನ್ನು ತೆಗೆದುಕೊಂಡು ಕಟ್ಟಿಗೆ ಕಡಿಯಲು ಅಲ್ಲಿಂದ ತೆರಳುತ್ತಾರೆ.

ಶವವನ್ನು ಸುಡಲು ಬೇಕಾಗುವಷ್ಟು ಕಟ್ಟಿಗೆ ಸಂಗ್ರಹವಾದ ಮೇಲೆ ಒಂದು ನಿರ್ದಿಷ್ಟವಾದ ಸ್ಥಳವನ್ನು ಸಮತಟ್ಟು ಮಾಡಿ ದಕ್ಷಿಣ ಉತ್ತರವಾಗಿ ಕಟ್ಟಿಗೆಯನ್ನು ಒಟ್ಟಿ ಉರಿಯುವ ಕಟ್ಟಿಗೆಗಳು

ಕೆಳಗೆ ಬೀಳದಂತೆ ಹಸಿಯಾದ ನಾಲ್ಕು ಕಂಬಗಳನ್ನು ಸುತ್ತಲೂ ಗಟ್ಟಿಯಾಗಿ ನೆಡುತ್ತಾರೆ. ಆ ಕಂಬಗಳ ನಡುವೆ ಶವದ ಉದ್ದಳತೆಗೆ ಸರಿಯಾಗಿ ಕಟ್ಟಿಗೆಯನ್ನು ಒಟ್ಟುತ್ತಾರೆ. ಈ ಸ್ಥಳವನ್ನು 'ಸುಡ್ಕುಳಿ' ಎಂದು ಕರೆಯುತ್ತಾರೆ.

ಮನೆಯಿಂದ ಶವವನ್ನು ಎತ್ತಿಕೊಂಡು ಹೋಗಲು ಬಿದಿರಿನಿಂದ ಮಾಡಲಾದ ಚಟ್ಟವನ್ನು ಬಳಸುತ್ತಾರೆ. ಮಲಗಿದ ಆಕಾರದಲ್ಲಿಯೇ ಶವವನ್ನು ಸಾಗಿಸುವುದರಿಂದ ಉದ್ದದ ಚಟ್ಟವನ್ನು ಕಟ್ಟಿಕೊಳ್ಳುತ್ತಾರೆ. ಶವವನ್ನು ಅಲುಗಾಡದಂತೆ ಚಟ್ಟಕ್ಕೆ ಕಟ್ಟಿ ಕಾಲು ಭಾಗವನ್ನು ಊರಿನವರು, ತಲೆಯ ಭಾಗವನ್ನು ಮನೆಯವರು ಎತ್ತಿಕೊಂಡು 'ನಾರಾಯಣ ನಾರಾಯಣ' ಎಂದು ಹೇಳುತ್ತಾ ಹಿಂದಕ್ಕೂ ಮುಂದಕ್ಕೂ ಮೂರು ಬಾರಿ ಜಗ್ಗಿಸಿ ಹೆಗಲ ಮೇಲೆ ಇಟ್ಟುಕೊಂಡು ಸ್ಮಶಾನದ ಕಡೆಗೆ ಸಾಗುತ್ತಾರೆ. ಸಾಗುವಾಗ ಎರಡೂ ಬದಿಯವರೂ ಹೆಗಲನ್ನು ಬದಲಾಯಿಸಿಕೊಳ್ಳುತ್ತಾರೆ. ವಾದ್ಯಗಳ ಮೂಲಕ ಶವ ಸಾಗಿಸುತ್ತಾ ಅಕ್ಕಿ ಮತ್ತು ಚಿಲ್ಲರೆ ನಾಣ್ಯಗಳನ್ನು ಮಿಶ್ರಣ ಮಾಡಿ ಶವದ ಮೇಲೆ ಎರಚುತ್ತಾ ಹೋಗುತ್ತಾರೆ. ಶವವನ್ನು ಸುಡುವ ಸ್ಥಳ ಸಮೀಪಿಸಿದಾಗ ಅಲ್ಲಿ ಸುಡಲು ನಿರ್ಮಿಸಿರುವ 'ಕಾಟ' ಎಂದು ಕರೆಯಲ್ಪಡುವ ಕಟ್ಟಿಗೆ ರಾಶಿಯನ್ನು ಅಪ್ರದಕ್ಷಿಣೆ ಮಾಡಿ ಚಟ್ಟವನ್ನು ಕೆಳಗಿಡುತ್ತಾರೆ. ಚಟ್ಟದಿಂದ ಶವವನ್ನು ಮಾತ್ರ ಮೇಲಕ್ಕೆತ್ತಿ 'ಕಾಟ'ದ ಮೇಲಿಡುತ್ತಾರೆ.

ಮೃತ ವ್ಯಕ್ತಿ ಹೆಣ್ಣಾದರೆ ಅವಳ ಮಾಂಗಲ್ಯ ಮತ್ತು ಎಲ್ಲ ಆಭರಣಗಳನ್ನು ಬಿಚ್ಚಿ ತೆಗೆಯುವರು. ಗಂಡಾದರೆ ಅತನ ಬದುಕಿರುವ ಹೆಂಡತಿಯ ಮೂಗುತಿ, ಓಲೆ, ಮಾಂಗಲ್ಯಗಳನ್ನು ತೆಗೆದು ಬಟ್ಟಲಿಗೆ ಹಾಕುತ್ತಾರೆ. ನಂತರ ಮಾಂಗಲ್ಯದ ತುದಿಯಿಂದ ಸ್ವಲ್ಪ ಚಿನ್ನ ತೆಗೆದು ಅದನ್ನು ತುಳಸಿ ನೀರು ಸಹಿತ ಮಾಂಗಲ್ಯದಿಂದ ಶವದ ಬಾಯಿಗೆ ಹೆಂಡತಿಯ ಕೈಯಿಂದಲೇ ನೀರು ಕೊಡಿಸಿ "ನಾನು ಮಾಡಿದ ಏನೊಂದೂ ತಪ್ಪುಗಳಿದ್ದರೂ ಮನ್ನಿಸಿ ಸ್ವರ್ಗಕ್ಕೆ ಹೋಗಿ" ಎಂದು ಹೇಳಿಸುತ್ತಾರೆ.[೭] ನಂತರ ಹೆಂಡತಿಯ ಕೈಯಲ್ಲಿನ ಬಳೆಗಳನ್ನು ಶವದ ಮೇಲೆ ಬೀಳದಂತೆ ಅವಳ ಸಂಬಂಧಿಕರು ಒಡೆಯುತ್ತಾರೆ. ಹಣೆಯಲ್ಲಿರುವ ಕುಂಕುಮವನ್ನು ಒರೆಸುತ್ತಾರೆ. ವಿಧವೆಯೊಬ್ಬಳು ಮುತ್ತೈದೆತನದ ಯಾವ ವಸ್ತುಗಳನ್ನು ಧರಿಸುವಂತಿಲ್ಲ ಎಂಬ ನಂಬಿಕೆ ಇಂದಿಗೂ ಭಾರತೀಯ ಸಂಪ್ರದಾಯದಲ್ಲಿದೆ.

ಇದೆಲ್ಲ ಮುಗಿದ ನಂತರ ಶವದ ಮೇಲೆ ಕಟ್ಟಿಗೆಯನ್ನು ಇಡುತ್ತಾರೆ. ಇದನ್ನು 'ಮೇಲ್ಕಾಟು' ಎನ್ನುತ್ತಾರೆ. ಮನೆಯಿಂದಲೇ ತಂದಂತಹ ಬೆಂಕಿಯ ಮೂಲಕ ಮನೆಯ ಕುಂಟಿಗೆಗಾರನು ತಲೆಯ ಕಡೆಯಿಂದ ಮತ್ತು ಊರಿನ ಕುಂಟಿಗೆಗಾರನು ಕಾಲಿನ ಭಾಗದಿಂದ ಬೆಂಕಿ ಇಡುತ್ತಾರೆ. ಮನೆಯಿಂದಲೇ ತಂದಂತಹ ಕೊಬ್ಬರಿ, ಎಣ್ಣೆ, ತುಪ್ಪ ಮೊದಲಾದವುಗಳನ್ನು ಕಾಟದ ಮೇಲೆ ಹಾಕಿ ಬೆಂಕಿ ಚೆನ್ನಾಗಿ ಉರಿಯುವಂತೆ ನೋಡಿಕೊಳ್ಳುತ್ತಾರೆ. ಬೆಂಕಿ ಪೂರ್ಣವಾಗಿ ಉರಿಯುತ್ತಿದೆ ಎಂದು ಖಚಿತಗೊಂಡಾಗ ಕಟ್ಟಿಗೆ ಕಡಿಯಲು ಉಪಯೋಗಿಸಿದ ಆಯುಧಗಳನ್ನು ಎಡಗೈಯಿಂದ ಉರಿಯುತ್ತಿರುವ 'ಕಾಟ'ದ ಮೇಲೆ ಮೂರು ಬಾರಿ ಆ ಕಡೆಯಿಂದ ಈ ಕಡೆಗೆ

ಎಸೆದಾಡುತ್ತಾರೆ. ಅದೇ ಸ್ಥಳದಲ್ಲಿ ಎಲ್ಲರೂ ಕುಳಿತು ಮುಂದೆ ನಡೆಯಬೇಕಾದ ಉತ್ತರ ಕ್ರಿಯಾದಿಗಳ ಬಗೆಗೆ ಮಾತುಕತೆ ನಡೆಸಿ ಅವರವರ ಮನೆಗೆ ತೆರಳುತ್ತಾರೆ.

**ಆ. ವಿವಾಹ ಪದ್ಧತಿ**

ಭಾರತೀಯ ಬದುಕಿನ ಸಂದರ್ಭದಲ್ಲಿ ವ್ಯಕ್ತಿಯೊಬ್ಬನ ವಿವಾಹಕ್ಕೆ ವಿಶೇಷ ಮಹತ್ವವಿದೆ. ಸ್ತ್ರೀ ಮತ್ತು ಪುರುಷರ ನಡುವೆ ಏರ್ಪಡುವ ಧಾರ್ಮಿಕ ಮತ್ತು ಸಾಮಾಜಿಕ ಸಂಬಂಧವೇ ವಿವಾಹ. ಮಾನವ ಸಮಾಜದ ಕೆಲವು ಮೂಲಭೂತ ಅಗತ್ಯತೆಗಳನ್ನು ಪೂರೈಸಲು ಕುಟುಂಬ ಮತ್ತು ವಿವಾಹ ಎಂಬ ಸಂಸ್ಥೆಗಳು ಅನಿವಾರ್ಯ. ಅಲ್ಲದೆ ಮಾನವ ಬದುಕಿನ ಸಾರ್ಥಕತೆಯನ್ನು ಕಂಡುಕೊಳ್ಳಲು ಜೀವನ ಕ್ರಮದಲ್ಲಾಗುವ ಒಂದು ಮುಖ್ಯವಾದ ಮತ್ತು ಪವಿತ್ರವಾದ ಬದಲಾವಣೆ ಎಂದು ಗುರತಿಸಿಕೊಳ್ಳಲಾಗಿದೆ. ಇದರಂತೆ ಮಾನವ ಸಮೂಹ ನಡೆದುಕೊಳ್ಳುತ್ತಿದೆ. ಈ ಪ್ರಾಧಾನ್ಯತೆ ಹಾಗೂ ವಿಶೇಷತೆಗಳಿರುವ ವಿವಾಹ ಪದ್ಧತಿಯನ್ನು ಕೊಡಗಿನ ಗೌಡರು ಅನುಸರಿಸಿಕೊಂಡು ಬರುತ್ತಿರುವ ವಿಧಾನಗಳನ್ನು ಇಲ್ಲಿ ಚರ್ಚಿಸಲಾಗುವುದು.

ಇವರ ವಿವಾಹ ವಿಧಾನ ಆರಂಭವಾಗುವುದು 'ಬಳಿ'(ಗೋತ್ರ)ಯ ಆಯ್ಕೆಯ ಮೂಲಕ ಇವರಲ್ಲಿರುವ ೧೮ 'ಬಳಿ'ಗಳಲ್ಲಿ ತಮಗೆ ಸೂಕ್ತವಾದ ವಧು ಹಾಗೂ ವರನನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಆರ್ಥಿಕ ಸ್ಥಿತಿಗತಿ, ಆಸ್ತಿ, ಅಂತಸ್ತು, ಸೌಂದರ್ಯ ಎಲ್ಲವೂ ಇದ್ದರೂ ಬಳಿಯೇ ಪ್ರಧಾನ ಪಾತ್ರ ವಹಿಸುತ್ತದೆ. ಅಸ್ತಿಯ ಹಕ್ಕಿನಂತೆ ಈ ಬಳಿಯೂ ತಂದೆಯಿಂದ ಮಗನಿಗೆ ವರ್ಗಾವಣೆಯಾಗುವುದರಿಂದ ತಂದೆಯ 'ಬಳಿ'ಯ ಹುಡುಗಿಯನ್ನು ಮದುವೆಯಾಗುವಂತಿಲ್ಲ. ತಂದೆಯ ತಂಗಿಯನ್ನು ಬೇರೆ ಕಡೆಗೆ ಮದುವೆ ಮಾಡಿಕೊಟ್ಟಿರುವುದರಿಂದ ಆಕೆಯ ಮಗಳನ್ನು ಮತ್ತೆ ಮನೆಗೆ ಮದುವೆ ಮಾಡಿಕೊಳ್ಳಬಹುದು. ಒಂದೇ ಬಳಿಯವರೆಲ್ಲ ಸಹೋದರ ಸಹೋದರಿಯಾಗುತ್ತಾರೆಂಬ ಕಾರಣದಿಂದ ಈ ನಿಷೇಧಗಳನ್ನು ಅಳವಡಿಸಿಕೊಂಡು ಪಾಲಿಸಿಕೊಂಡು ಬರುತ್ತಿದ್ದಾರೆ.

ಹೀಗೆ ಬಳಿಯ ಆಯ್ಕೆಯ ನಂತರ ಹುಡುಗಿ ನೋಡುವ ಶಾಸ್ತ್ರ ಅರಂಭಿಸುತ್ತಾರೆ. ಇದನ್ನು 'ಗೂಡೆ ನೋಡ್ದು' ಎಂದು ಕರೆಯುತ್ತಾರೆ. ವಿವಾಹದ ಪ್ರಾಯ ಹೊಂದಿರುವ ಹುಡುಗಿ ಇರುವ ಮನೆಗೆ ಹುಡುಗನ ಪೋಷಕರು, ಸಂಬಂಧಿಕರು ಅಥವಾ ಹುಡುಗಿಯ ಮನೆಯವರ ಪರಿಚಯವಿರುವ ನಂಬಿಕಸ್ಥನನ್ನು ಅಥವಾ ಮಧ್ಯವರ್ತಿಯನ್ನು ಕಳುಹಿಸಿಕೊಟ್ಟು ಅವನಿಂದ ಒಪ್ಪಿಗೆ ಸಿಕ್ಕಿದರೆ ಗಂಡು ಮತ್ತು ಹೆಣ್ಣಿನ ಜಾತಕಗಳನ್ನು ನೋಡಿಸಿ ಗಣಕೂಟಗಳು ಕೂಡಿ ಬಂದರೆ ನಿಶ್ಚಿತಾರ್ಥಕ್ಕೆ ಸಿದ್ಧತೆ ಮಾಡಿಕೊಳ್ಳುತ್ತಾರೆ. ಕೆಲವೊಮ್ಮೆ ಜಾತಕದ ಬದಲು ದೇವರಲ್ಲಿ ಹೂ ಕೇಳುವ ಕ್ರಮವನ್ನೂ ಅನುಸರಿಸುತ್ತಾರೆ. ದೇವಸ್ಥಾನದಲ್ಲಿ ಹೂ ಕೇಳುವಾಗ ದೇವರ ಎಡಭಾಗದಿಂದ ಹೂ ಬಿದ್ದರೆ ಅಶುಭವೆಂದು, ಬಲಭಾಗದಲ್ಲಿ ಬಿದ್ದರೆ ಮದುವೆಗೆ ಯಾವುದೇ ಅಡ್ಡಿ ಆತಂಕಗಳು ಇಲ್ಲದೆ ನೆರವೇರುತ್ತದೆ ಎಂದೂ ಸಹ ನಂಬಿದ್ದಾರೆ. ಇಲ್ಲಿನ ಕೆಂಬಟ್ಟಿ ಸಮುದಾಯವೂ ಇದೇ ರೀತಿಯ ಕ್ರಮವನ್ನು ಅಳವಡಿಸಿಕೊಂಡಿರುವುದನ್ನು ಇಲ್ಲಿ ಸ್ಮರಿಸಬಹುದು. ಎಲ್ಲಾ ಕುಟುಂಬದಲ್ಲಿರುವಂತೆ

ಹುಡುಗಿಗೆ ತನ್ನ ಸೋದರಮಾವನ ಒಪ್ಪಿಗೆ ಬೇಕಾಗಿರುತ್ತದೆ. ಅದರಂತೆ ಹುಡುಗಿಯೊಂದಿಗೆ ಅವಳ ತಂದೆ ತಾಯಂದಿರು ಹುಡುಗಿಯ ಸೋದರಮಾವನ ಮನೆಗೆ ಹೋಗಿ 'ನಾವು ಒಂದು ಶುಭಕಾರ್ಯವನ್ನು ಮಾಡುವವರಿದ್ದೇವೆ ಇದಕ್ಕೆ ನಿಮ್ಮ ಒಪ್ಪಿಗೆಯಿದೆಯೋ' ಎಂದು ವಿಚಾರಿಸುತ್ತಾರೆ. ಸೋದರಮಾವನ ಮನೆಯವರಿಗೆ ಆ ಹುಡುಗಿಯನ್ನು ಬೇರೆ ಮನೆಯವರಿಗೆ ಮದುವೆ ಮಾಡಿಕೊಡುವುದರಲ್ಲಿ ಯಾವುದೇ ತಕರಾರು ಇಲ್ಲದಿದ್ದಲ್ಲಿ ಮದುವೆಗೆ ಸಮ್ಮತಿಸುತ್ತಾರೆ. ಇದನ್ನು 'ಸೋದರ ಮಾತಾಡಿಸುವುದು' ಎನ್ನುತ್ತಾರೆ. ಈ ಪ್ರಕ್ರಿಯೆಗಳೆಲ್ಲವೂ ವೀಳ್ಯ ಶಾಸ್ತ್ರಕ್ಕೂ(ನಿಶ್ಚಿತಾರ್ಥ) ಮೊದಲು ನಡೆಯುತ್ತವೆ.

ವೀಳ್ಯಶಾಸ್ತ್ರ ಪದ್ಧತಿ ಕೊಡಗಿನ ಗೌಡರಲ್ಲಿ ಅತಿ ಪ್ರಮುಖವಾದುದು. ಹಿಂದೂ ಸಂಪ್ರದಾಯದಲ್ಲಿ ಬಹಳ ಹಿಂದಿನಿಂದಲೂ ವೀಳ್ಯಸಾಸ್ತ್ರಕ್ಕೆ ಪ್ರಾಧಾನ್ಯತೆಯಿದೆ. ಇತ್ತೀಚೆಗೆ ಇದು ನಿಶ್ವಿತಾರ್ಥ ಎಂಬ ಹೆಸರಿನಿಂದ ಕರೆಯಲ್ಪಟ್ಟು ಎಷ್ಟು ಸಾಧ್ಯವೋ ಅಷ್ಟರ ಮಟ್ಟಿಗೆ ಅದ್ದೂರಿಯಾಗಿ ನೆರವೇರಿಸುವ ಸಂಪ್ರದಾಯ ಶುರುವಾಗಿದೆ. ಅನೇಕ ಪವಿತ್ರ ಕಾರ್ಯಗಳು ಆರಂಭವಾಗುತ್ತಿದ್ದುದೇ ವೀಳ್ಯ ಕೊಡುವ ಮೂಲಕ. ಸಾಮಾನ್ಯವಾಗಿ ಹುಡುಗಿಯ ಮನೆಯಲ್ಲಿಯೇ ಮದುವೆಯ ಒಪ್ಪಂದ ಅಥವಾ ನಿಶ್ಚಿತಾರ್ಥ ನೆರವೇರಿಸುತ್ತಾರೆ. ಈ ಪದ್ಧತಿ ಗೌಡರಲ್ಲಿಯೂ ಪರಿಪಾಲನೆಯಾಗುತ್ತಿದೆ. ಈ ಸಮಯದಲ್ಲಿ ಎಷ್ಟೇ ಶ್ರೀಮಂತಿಕೆಯಿದ್ದರೂ ನೆಲಕ್ಕೆ ಚಾಪೆ ಹಾಕಿ ಕುಳಿತುಕೊಂಡು ಮಾತನಾಡುವುದನ್ನು ಇವರು ಉಳಿಸಿಕೊಂಡಿರುವುದು ಇವರ ಪಾರಂಪರಿಕ ನಂಬಿಕೆಯ ಕುರುಹು ಎನ್ನಬಹುದು.

ಈ ಶುಭದಿನದಂದು ವರನ ಕಡೆಯಿಂದ ಐದು, ಏಳು, ಒಂಬತ್ತು – ಈ ಸಂಖ್ಯೆಯ ಮಿತಿಯಲ್ಲಿ ವಧುವಿನ ಮನೆಗೆ ಜನರು ಹೋಗುವುದುಂಟು. ಈ ಶಾಸ್ತ್ರಕ್ಕೆ ವರನಾಗಲಿ ವರನ ತಂದೆಯಾಗಲಿ ಹೋಗುವಂತಿಲ್ಲ ಎಂಬ ನಿಯಮಗಳನ್ನು ರೂಪಿಸಿಕೊಂಡಿದ್ದರು.[೮] ದಿನ ಕಳೆದಂತೆ ಅನೇಕ ಸಂಪ್ರದಾಯಗಳಲ್ಲಿ ಹಲವು ಮಾರ್ಪಾಡುಗಳಾಗುವಂತೆ ಇವರಲ್ಲಿಯೂ ಕ್ರಮೇಣ ಈ ಸಂಪ್ರದಾಯಗಳು ಬದಲಾಗಿವೆ. ಹಾಗಾಗಿ ಅದೇ ದಿನ ವಧುವರರು ನೆಲ್ಲಕ್ಕಿಗೆ ಬಂದು ನಂದಾ ದೀಪಕ್ಕೆ ಅಕ್ಕಿ ಹಾಕಿ ನಮಿಸುವ ಪದ್ಧತಿ ಇತ್ತೀಚೆಗೆ ರೂಢಿಯಾಗಿದೆ. ವಿವಾಹದ ಪ್ರಮುಖ ಹಂತವಾದ ಈ ಸಮಯದಲ್ಲಿ ವಧು ಮತ್ತು ವರನ ಕಡೆಯವರು, ಬಂಧುಬಾಂಧವರು ಸೇರುತ್ತಾರೆ. ಪ್ರಮುಖರ ಸಮ್ಮುಖದಲ್ಲಿ ಆರು ರೀತಿಯ ವೀಳ್ಯವನ್ನು ಬದಲಾಯಿಸಿಕೊಳ್ಳುವುದರ ಮೂಲಕ ನಿಶ್ಚಿತಾರ್ಥ ನೆರವೇರುತ್ತದೆ.

ಆರು ರೀತಿಯ ವೀಳ್ಯ ಬದಲಾವಣೆಗಳಲ್ಲಿ 'ಸಾಲಾವಳಿ ವೀಳ್ಯ' ಮೊದಲನೆಯದು. ಈ ವೀಳ್ಯ ಬದಲಿಸಿಕೊಳ್ಳುವಾಗ ಒಂದು ತಟ್ಟೆಯ ಎರಡು ಬದಿಗೂ ಐದೈದು ವೀಳ್ಯದೆಲೆ ಮತ್ತು ಒಂದು ಅಡಿಕೆ ಇಟ್ಟು ಗೋತ್ರದ ಒಕ್ಕಣೆ ಹೇಳಿ 'ಸಾಲಾವಳಿ ವೀಳ್ಯ ಕಟ್ಟುವಂತೆವೆ' ಎಂದು ಮುಖ್ಯಸ್ಥರು ಹೇಳುತ್ತಾರೆ. ಅಲ್ಲಿ ನೆರೆದಿರುವವರೆಲ್ಲರೂ 'ಒಳ್ಳೆಯ ಕಾಯತೆವೆ' ಎಂದು

ಸಮ್ಮತಿಸುತ್ತಾರೆ. ನಂತರ ಮಾತು ಕರಾರು ವೀಳ್ಯ, ವೀಳ್ಯಶಾಸ್ತ್ರದ ವೀಳ್ಯ, ಲಗ್ನ ಕುರಿ ವೀಳ್ಯ, ಬಣ್ಣ ಬಂಗಾರದ ವೀಳ್ಯ, ಗುರು ವೀಳ್ಯ ಎಂಬ ಆರು ರೀತಿಯ ವೀಳ್ಯ ಬದಲಾಯಿಸಿಕೊಳ್ಳುತ್ತಾರೆ.

ವಿವಾಹ ಕಾರ್ಯಕ್ರಮಗಳು ಎರಡು ದಿನಗಳು ನಡೆಯುತ್ತವೆ. ಮೊದಲ ದಿನವನ್ನು 'ಚಪ್ಪರದ ದಿನ' ಎಂದು ಹೇಳುತ್ತಾರೆ. ಮದುವೆಯ ಮುಹೂರ್ತದ ಹಿಂದಿನ ದಿನ ವಧು-ವರರ ಮನೆಗಳಲ್ಲಿ ಅವರವರ ಕುಟುಂಬಸ್ಥರು ಹಾಗೂ ನೆರೆಹೊರೆಯವರು ಸೇರಿ ಚಪ್ಪರ ಹಾಕುತ್ತಾರೆ. ವಧುವಿನ ಮನೆಯ ಮುಂದೆ ಹಾಲು ಬರುವ ಮರಗಳಿಂದ ಕೂಡಿದ ಹನ್ನೆರಡು ಕಂಬಗಳನ್ನು ಚಪ್ಪರಕ್ಕೆ ಬಳಸುತ್ತಾರೆ. ಇದನ್ನು 'ಸೀತಾವಳಿ ಚಪ್ಪರ' ಎಂದು ಕರೆಯುತ್ತಾರೆ. ಚಪ್ಪರದ ಎದುರಿನ ಎರಡು ಕಂಬಗಳಿಗೆ ಗೊನೆಯಿರುವ ಬಾಳೆ ಕಂಬವನ್ನು ಕಟ್ಟಿ ಆ ಕಂಬಗಳನ್ನು ಶೃಂಗರಿಸುತ್ತಾರೆ. ಇದೇ ದಿನ ವಧುವಿನ ಸೋದರಮಾವ ಹವಳ ಮತ್ತು ಚಿನ್ನದ ಗುಂಡು, ಪದಕ ಇರುವ 'ಕಾಸ್ತಾಳಿ' ಎಂಬ ಹೆಸರಿನ ಸರವನ್ನು ವಧುವಿನ ಕೊರಳಿಗೆ ಕಟ್ಟುತ್ತಾನೆ. ಇದನ್ನು 'ಮುಹೂರ್ತ ಮಣಿ' ಎಂದು ಕರೆಯಲಾಗುತ್ತದೆ. 'ಕಾಸಾ' ಎಂದರೆ ಸ್ವಂತ ಎಂಬರ್ಥವಿದ್ದು ಸ್ವಂತದವರು ವಧುವಿಗೆ ಮಂಗಳವನ್ನು ಕೋರಿ ಕಟ್ಟುವ ತಾಳಿಯೇ ಕಾಸ್ತಾಳಿಯಾಗಿದೆ.[6] ಈ ಕಾಸ್ತಾಳಿ ಕಟ್ಟುವ ಪದ್ಧತಿ ವರನ ಮನೆಯಲ್ಲಿಯೂ ನಡೆಯುತ್ತದೆ. ಎರಡು ಕಡೆಯವರ ಮನೆಯ ಚಪ್ಪರದ ದಿನ ಮಾಡಬಹುದಾದ ಎಲ್ಲಾ ಶಾಸ್ತ್ರಗಳನ್ನು ವಿಧಿವತ್ತಾಗಿ ಮಾಡಿ ಮುಗಿಸುತ್ತಾರೆ. ಇದಾದ ನಂತರ ನೆರೆದವರೆಲ್ಲರೂ ಸೇರಿ ಮಾಂಸಾಹಾರಗಳಿಂದ ಕೂಡಿದ ಔತಣವನ್ನು ಸೇವಿಸಿ ಸ್ವಲ್ಪ ಸಮಯ ವಿನೋದಕ್ಕಾಗಿ ವಾದ್ಯದ ತಾಳಕ್ಕೆ ಅನುಗುಣವಾಗಿ ಕುಣಿದು ಸಂಭ್ರಮಿಸುತ್ತಾರೆ.

ವರನ ಮನೆಯಲ್ಲಿಯೂ ಊಟವಾದ ನಂತರ ವಧುವಿಗೆ ಕೊಡಬೇಕಾದ ವಸ್ತ್ರಾಭರಣಗಳನ್ನು ಒಂದು ಪೆಟ್ಟಿಗೆಗೆ ತುಂಬಿಸುವ ಶಾಸ್ತ್ರ ಮಾಡುತ್ತಾರೆ. ಈ ಪೆಟ್ಟಿಗೆಯಲ್ಲಿ ಧಾರೆ ಸೀರೆ, ರವಿಕೆ, ಲಂಗ, ಮುಸುಕು ವಸ್ತ್ರ, ಕರವಸ್ತ್ರ, ಕಾಲುಗೆಜ್ಜೆ, ಕಾಲುಂಗುರ, ಕಿವಿಗೆ ಚಿನ್ನದ ಓಲೆ, ಮೂಗುತಿ, ಡಾಬು, ಬಳೆ, ಕಾಸ್ತಾಳಿ, ತೆರವಿನ ಹಣ ಹಾಗೂ ಹೆಣ್ಣಿಗೆ ಬೇಕಾದ ಅಲಂಕಾರ ಸಾಮಾಗ್ರಿಗಳನ್ನು ತುಂಬಿಸುತ್ತಾರೆ. ಇದೇ ರೀತಿ ವಧುವಿನ ಮನೆಯ ಚಪ್ಪರದಡಿಯಲ್ಲಿ ಕುಳಿತು ಅವಳಿಗೆ ಕೊಡಬೇಕಾದ ಎಲ್ಲಾ ವಸ್ತುಗಳನ್ನು ಪೆಟ್ಟಿಗೆ ತುಂಬಿಸುವ ಶಾಸ್ತ್ರವೂ ನಡೆಯುತ್ತದೆ.

ವಿವಾಹದ ಮುಹೂರ್ತದ ದಿನ ಬೆಳಿಗ್ಗೆ ವರನ ಮನೆಯಿಂದ ದಿಬ್ಬಣ ವಧುವಿನ ಮನೆಯ ಕಡೆಗೆ ಹೊರಡುತ್ತದೆ. ಮದುವೆಯ ಶಾಸ್ತ್ರಗಳನ್ನು ಮತ್ತು ದಿಬ್ಬಣದ ಜವಾಬ್ದಾರಿಯನ್ನು ಊರಿನ ಹಿರಿಯರಿಗೆ ವಹಿಸುತ್ತಾರೆ. ಇವರು 'ಹತ್ತು ಕುಟುಂಬ ಹದಿನೆಂಟು ಗೋತ್ರದ' ಒಕ್ಕಣೆಯನ್ನು ಹೇಳಿ ದಿಬ್ಬಣವನ್ನು ಹೊರಡಿಸುತ್ತಾರೆ. ವಧುವಿನ ಮನೆಯನ್ನು ತಲುಪಿದ ದಿಬ್ಬಣವನ್ನು ಅತ್ಯಂತ ಗೌರವಾದರಗಳಿಂದ ಸ್ವಾಗತಿಸಿ ಸತ್ಕರಿಸಿ, ಅವರಿಗೆ ವಿಶ್ರಾಂತಿ ಪಡೆಯಲು ಚಪ್ಪರದ ಹೊರಗೆ ವ್ಯವಸ್ಥೆ ಮಾಡಿಕೊಡುತ್ತಾರೆ. ಈ ಸಮಯದಲ್ಲಿ ವಧುವಿನ ತಾಯಿ ವರನಿಗೆ ಕುಡಿಯಲು ಒಂದು ಲೋಟದಲ್ಲಿ ಹಾಲು ಕೊಡುತ್ತಾಳೆ. ಕುಡಿದಾದ ನಂತರ ವರ ಲೋಟಕ್ಕೆ ಹಣ

ಮತ್ತು ಎಲೆ ಅಡಿಕೆ ಹಾಕಿ ಹಿಂದಿರುಗಿಸುತ್ತಾನೆ. ವಧುವಿನ ತಾಯಿ ಆ ಹಣವನ್ನು ವರನ ಮುಸುಕಿನ ವಸ್ತ್ರಕ್ಕೆ ಕಟ್ಟಿ ಆಶೀರ್ವದಿಸುತ್ತಾಳೆ.

ವರನ ಮನೆಯಿಂದ ತಂದಿರುವ 'ಬಣ್ಣ' ಬಂಗಾರದ ಪೆಟ್ಟಿಗೆಯಲ್ಲಿರುವ ವಸ್ತ್ರಾಭರಣಗಳಿಂದ ವಧುವನ್ನು ಅಲಂಕರಿಸಿ ಚೌಕಳಿ ವಸ್ತ್ರದಲ್ಲಿ ಅಕ್ಕಿ, ತೆಂಗಿನಕಾಯಿ, ಬೆಲ್ಲವನ್ನು ಹಾಕಿ ಮಡಿಲಕ್ಕಿ ಕಟ್ಟಿ ವಧುವನ್ನು ಮತ್ತೆ ನೆಲ್ಲಕ್ಕಿಯಡಿಯಲ್ಲಿ ಕುಳ್ಳಿರಿಸುತ್ತಾರೆ. ಈ ಸಮಯದಲ್ಲಿ ಸೀತಾವಳಿ ಚಪ್ಪರದ ಕೆಳಗೆ ಕುಳಿತಿರುವ ವರ ಮತ್ತು ವಧುವಿನ ಕಡೆಯವರು ವೀಳ್ಯಶಾಸ್ತ್ರದಲ್ಲಿ ಮಾಡದೇ ಬಾಕಿಯಿರುವ ತಾಯಿವೀಳ್ಯ, ತಂದೆವೀಳ್ಯ, ದೇಶ ಮಹಾನಾಡು ವೀಳ್ಯವನ್ನು ಬದಲಾಯಿಸಿಕೊಂಡು ವೀಳ್ಯಶಾಸ್ತ್ರವನ್ನು ಪೂರ್ಣಗೊಳಿಸಿ ಧಾರಾ ಮುಹೂರ್ತಕ್ಕೆ ಸಿದ್ಧತೆ ನಡೆಸುತ್ತಾರೆ.

ಸೀತಾವಳಿ ಮಂಟಪ ಎಂದು ಕರೆಯಲ್ಪಡುವ ಧಾರಾಮಂಟಪಕ್ಕೆ ವರನನ್ನು ಕರೆದು ತಂದು ನಿಲ್ಲಿಸುತ್ತಾರೆ. ವಧುವನ್ನು ಆಕೆಯ ಸೋದರಮಾವ ಎತ್ತಿಕೊಂಡು ತಂದು ವರನಿಗೆ ಎದುರಾಗಿ ನಿಲ್ಲಿಸುತ್ತಾನೆ. ವಧು ಮಂಟಪಕ್ಕೆ ಬರುವಾಗ ವರನಿಗೆ ಅಡ್ಡಲಾಗಿ ಒಂದು ಬಿಳಿ ಬಟ್ಟೆಯನ್ನು ಹಿಡಿಯಲಾಗುತ್ತದೆ. ಕೆಲವೊಂದು ಶಾಸ್ತ್ರಗಳು ತೆರೆಯಿರುವಾಗಲೇ ನಡೆಯುತ್ತವೆ. ನಂತರ ಕುಟುಂಬದ ಯಜಮಾನ ಒಂದು ಚೆಂಬಿನಲ್ಲಿ ನೀರು ಹಿಡಿದು 'ಧಾರೆ ಕಾರ್ಯಕ್ಕೆ ನೀರು' ಎಂದು ಹೇಳಿ ಎಲ್ಲರಿಂದಲೂ ಸ್ಪರ್ಷಿಸಿ ತರುತ್ತಾನೆ. ಈ ಚೆಂಬಿಗೆ ಗಿಂಡಿಯಲ್ಲಿ ತಂದಿದ್ದ ಹಾಲನ್ನು ಎರಡು ಕಡೆಯವರೂ ಹಾಕುತ್ತಾರೆ. ವಧು-ವರರ ಕೈಗೆ ಐದು ಎಲೆ ಒಂದು ಅಡಿಕೆ ನೀಡಿ ಕೈಗಳನ್ನು ಜೋಡಿಸಿ ವಧುವಿನ ಕೈಯನ್ನು ವರನ ಕೈ ಮೇಲಿಟ್ಟು ವಧುವಿನ ತಂದೆ ಗೋತ್ರದ ಒಕ್ಕಣೆಯನ್ನು ಮೂರು ಸಲ ಹೇಳಿ ಚೆಂಬಿನಲ್ಲಿದ್ದ ಹಾಲನ್ನು ಮೂರು ಸಲ ವಧು-ವರರ ಕೈಗೆ ಹಾಕುವ ಮೂಲಕ ಮಗಳನ್ನು ಧಾರೆ ಎರೆದು ಕೊಡುತ್ತಾನೆ. ಈ ಕ್ರಮಕ್ಕೆ ಕೊಡಗಿನ ಗೌಡರು 'ಬಂಟಧಾರೆ' ಎಂದು ಕರೆಯುತ್ತಾರೆ. ಸಾಮಾನ್ಯವಾಗಿ ಧಾರಾ ಮುಹೂರ್ತವನ್ನು ಪುರೋಹಿತರ ನೇತೃತ್ವದಲ್ಲಿ ನಡೆಸುವುದು ಸಂಪ್ರದಾಯ. ಆದರೆ ಕೊಡವರು ಯಾರ ಪೌರೋಹಿತ್ಯವನ್ನೂ ಅವಲಂಬಿಸದೇ ತಾವೇ ಮುಹೂರ್ತವನ್ನು ನೆರವೇರಿಸಿಕೊಳ್ಳುತ್ತಾರೆ. ಇದೇ ಕ್ರಮವನ್ನು ಗೌಡರೂ ಅಳವಡಿಸಿಕೊಂಡಿದ್ದಾರೆ. ಇವರಲ್ಲದೆ ಕೆಂಬಟ್ಟಿಯವರು, ಎರವರೂ ಸಹ ಇದೇ ಪದ್ಧತಿಯನ್ನು ಅನುಸರಿಸುತ್ತಿದ್ದಾರೆ. ಇದನ್ನು ಕೊಡಗು ಸಂಸ್ಕೃತಿಯ ವಿಶೇಷವೆಂದು ಗುರುತಿಸಬಹುದು. ಧಾರಾಕಾರ್ಯ ಮುಗಿದ ಬಳಿಕ ವರನ ಕೊರಳಿಗೆ ವಧುವೂ, ವಧುವಿನ ಕೊರಳಿಗೆ ವರನೂ ಹಿಂಗಾರದ ಮಾಲೆಯನ್ನು ಹಾಕುತ್ತಾರೆ. ಇದೇ ಕ್ರಮದಲ್ಲಿ ಹೂ ಮಾಲೆಯನ್ನೂ ಬದಲಾಯಿಸಿಕೊಳ್ಳುತ್ತಾರೆ. ತದನಂತರ ವಧು-ವರರ ಹೆಸರನ್ನು ಹೇಳಿ ವರನಿಂದ ವಧುವಿಗೆ ತಾಳಿಯನ್ನು ಕಟ್ಟಿಸುತ್ತಾರೆ.

ಮಾಂಗಲ್ಯ ಧಾರಣೆಯ ಬಳಿಕ ವಧು-ವರರ ಸೆರಗಿನ ತುದಿಯನ್ನು ಕಟ್ಟಿ ಒಬ್ಬರಿಗೊಬ್ಬರು ಕೈ ಹಿಡಿಸಿ ಧಾರಾಮಂಟಪವನ್ನು ಮೂರು ಸುತ್ತು ಪ್ರದಕ್ಷಿಣೆ ಹಾಕುತ್ತಾರೆ. ನಂತರ ವಧುವಿನ

ಮನೆಯಲ್ಲಿನ ನೆಲ್ಲಕ್ಕಿ ನಡುಬಾಡೆಗೆ ಮಧು ಮಕ್ಕಳು ಬಂದು ಕೂರುತ್ತಾರೆ. ಈ ಸಮಯದಲ್ಲಿ ಐದು ಜನ ಮುತ್ತೈದೆಯರು ಇಬ್ಬರಿಗೂ ಹಾಲು ತುಪ್ಪ ಕುಡಿಸಿ ಹರಸುತ್ತಾರೆ.

**ಕೂಡಾವಳಿ ಮದುವೆ:** ಮರು ವಿವಾಹದ ಒಂದು ಭಾಗವಾಗಿ 'ಕೂಡಾವಳಿ' ಎಂಬ ಪದ ಬಳಕೆಯಲ್ಲಿದೆ. ವಿಧುರ ಅಥವಾ ವಿಧವೆ ಮರುಮದುವೆಯಾಗಲು ಹಿಂದೂ ಸಮಾಜದಲ್ಲಿ ಅವಕಾಶಗಳಿದ್ದರೂ ಕೆಲವು ಕಟ್ಟುಪಾಡುಗಳ ಚೌಕಟ್ಟನ್ನು ರೂಪಿಸಿಕೊಳ್ಳಲಾಗಿದೆ. ಕೊಡಗಿನಲ್ಲಿ ವಾಸಿಸುತ್ತಿರುವ ಕೊಡವರು, ಗೌಡರು, ಎರವರು ಮತ್ತು ಕೆಂಬಟ್ಟಿಗಳಲ್ಲಿ ಕೂಡಾವಳಿ ವಿವಾಹಗಳನ್ನು ಕಾಣಬಹುದು. ದೇಶದಲ್ಲೆಡೆ ಕಂಡುಬರುವ ಲಿಂಗ ಅಸಮಾನತೆ ಮತ್ತು ಪುರುಷ ಪ್ರಧಾನ ವ್ಯವಸ್ಥೆ ಕೊಡಗರನ್ನೂ ಬಿಟ್ಟಿಲ್ಲ. ಇಲ್ಲಿನ ಗೌಡರಲ್ಲಿಯೂ ಹೆಣ್ಣೊಬ್ಬಳು ವಿಧವೆಯಾಗಿ ಅಥವಾ ವಿಚ್ಛೇದಿತಳಾಗಿ ಮತ್ತೊಂದು ವಿವಾಹವಾಗಲು ಬಯಸಿದರೆ ಅವಳಿಗೆ ಶಾಸ್ತ್ರಬದ್ಧವಲ್ಲದ 'ಕೂಡಾವಳಿ' ಎಂಬ ಹೆಸರಿನಲ್ಲಿ ವಿವಾಹ ಮಾಡಿಕೊಡಲಾಗುತ್ತದೆ. ಏಕೆಂದರೆ ಹೆಣ್ಣಿಗೆ ಜೀವನದಲ್ಲಿ ಒಮ್ಮೆ ಮಾತ್ರ ಧಾರೆ ಎರೆಸಿಕೊಳ್ಳುವ ಅವಕಾಶವಿರುತ್ತದೆ ಎಂಬ ನಂಬಿಕೆ ಬಲವಾಗಿದೆ. ಆದರೆ ಗಂಡು ಮಾತ್ರ ವಿಧುರನಾಗಿದ್ದರೂ ಸಾಂಪ್ರದಾಯಿಕವಾಗಿ ಮೊದಲ ವಿವಾಹದಂತೆಯೇ ಆಗುವ ಅವಕಾಶವನ್ನು ಪಡೆದಿದ್ದಾನೆ. ಆದರೆ ಅವಿವಾಹಿತ ಪುರುಷ ವಿಧವೆಯನ್ನು ಮದುವೆಯಾಗಲು ನಿರ್ಬಂಧವಿದೆ.

ಕೊಡವರಲ್ಲಿ ಅತ್ತಿಗೆ ವಿಧವೆಯಾದರೆ ಆಕೆಯನ್ನು ಮೈದುನ ಮದುವೆಯಾಗಲು ಅವಕಾಶವಿದ್ದು, ಈ ಪದ್ಧತಿ ಇಲ್ಲಿನ ಗೌಡ ಸಮುದಾದಲ್ಲಿಲ್ಲದಿರುವುದನ್ನು ಗಮನಿಸಬೇಕು. ಯಾವ ಶಾಸ್ತ್ರವೂ ಇಲ್ಲದಿದ್ದರೂ ವಿಧವೆಯೊಬ್ಬಳು ಮತ್ತೊಂದು ಮದುವೆಯಾಗಲು ಅವಕಾಶವಿರುವುದು ಅತ್ಯಂತ ಪ್ರಮುಖವಾದುದು. 'ಆವ ಕಾಲದ ಶಾಸ್ತ್ರವೇನು ಹೇಳಿದರೇನು ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೇನು' ಎಂಬ ಕುವೆಂಪು ಅವರ ಮಾತಿನಂತೆ ಶಾಸ್ತ್ರಗಳಿಗೆ ಮಾನ್ಯತೆ ನೀಡದೆ ಬದುಕಲು ಬೇಕಾದ ಅಗತ್ಯತೆಗಳನ್ನು ಪೂರೈಸಬೇಕಾದುದು ಒಂದು ಸಮಾಜದ ಬಹುಮುಖ್ಯ ಕರ್ತವ್ಯವಾಗಬೇಕು. ಒಟ್ಟಿನಲ್ಲಿ ಒಂದು ಹೆಣ್ಣು ಮತ್ತು ಗಂಡು ತಮ್ಮ ಏಕಾಂಗಿತನವನ್ನು ಕಳೆದುಕೊಳ್ಳಲು ಮತ್ತು ಜೀವನದ ಸುಭದ್ರತೆಗಾಗಿ ಈ ಕೂಡಾವಳಿ ಎಂಬ ವಿವಾಹ ಪದ್ಧತಿ ಅನುಕೂಲವಾಗಿದ್ದು ಇದಕ್ಕೆ ಹಿಂದೂ ಸಮಾಜದ ಮಾನ್ಯತೆಯಿರುವುದು ಬಹಳ ಮುಖ್ಯವಾಗಿದೆ.

**ಇ. ಹಬ್ಬಗಳು**

ಕೃಷಿ ಪ್ರಧಾನವಾದ ಕೊಡಗಿನಲ್ಲಿ ವಾಸಿಸುವ ಕೊಡಗು ಗೌಡರು ಭೂಮಿಗೆ ಬೀಜ ಬಿತ್ತುವ ಸಮಯದಿಂದ ಹಿಡಿದು ಸುಗ್ಗಿ ಸಮಯದವರೆಗೂ ಒಂದಿಲ್ಲೊಂದು ಆಚರಣೆಗಳನ್ನು ನಡೆಸುತ್ತಿರುತ್ತಾರೆ. ಕೊಡವರ ಪ್ರಮುಖ ಹಬ್ಬಗಳಾದ ಕಾವೇರಿ ಸಂಕ್ರಮಣ, ಕೈಲು ಮುಹೂರ್ತ ಮತ್ತು ಹುತ್ತರಿ ಹಬ್ಬಗಳನ್ನು ಕೊಡಗಿನ ದಕ್ಷಿಣ ಭಾಗದ ಎಲ್ಲ ಸಮುದಾಯದವರೂ ಆಚರಿಸುವಂತೆ ಇಲ್ಲಿನ ಗೌಡರೂ ಸಹ ಇವುಗಳನ್ನು ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ ಅತ್ಯಂತ ಶ್ರದ್ಧಾಭಕ್ತಿಗಳಿಂದ ಆಚರಿಸುತ್ತಾರೆ. ಇವುಗಳಲ್ಲದೆ. ಕರ್ನಾಟಕದಾದ್ಯಂತ ಆಚರಿಸಲ್ಪಡುವ ಗಣೇಶ

ಚತುರ್ಥಿ, ದೀಪಾವಳಿ, ಯುಗಾದಿ ಮುಂತಾದ ಹಬ್ಬಗಳನ್ನು ಆಚರಿಸಿಕೊಂಡು ಬರುತ್ತಿದ್ದಾರೆ. ಆದರೂ ಕೊಡಗು ಗೌಡರು ಮಾತ್ರ ಆಚರಿಸುವ ಕೆಡ್ಡಸ, ಬಿಸು ಸಂಕ್ರಮಣ ಹಬ್ಬಗಳು ಪ್ರಮುಖವಾದವುಗಳಾಗಿವೆ. ಈ ಎರಡು ಹಬ್ಬಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ.

**ಕೆಡ್ಡಸ:** ಈ ಹಬ್ಬ ಮೂಲತ: ದಕ್ಷಿಣ ಕನ್ನಡದಲ್ಲಿ ಆಚರಿಸಲ್ಪಡುವ ತುಳು ಮೂಲದ ಆಚರಣೆಯಾಗಿದೆ. ಕೊಡಗಿನ ಗೌಡರು ಸುಳ್ಯ ಪರಿಸರದಿಂದ ಕೊಡಗಿಗೆ ವಲಸೆ ಬಂದವರಾದುದರಿಂದ ಇಲ್ಲಿನ ಅನೇಕ ಆಚರಣೆಗಳನ್ನು ತಮ್ಮೊಂದಿಗೆ ತಂದು ಉಳಿಸಿಕೊಂಡಿದ್ದಾರೆ. ಕೊಡವರ ಹಬ್ಬಗಳಂತೆ ಇವರ ಕೆಡ್ಡಸವೂ ಕೃಷಿ ಸಂಬಂಧಿಯಾದುದು. 'ಕೆಡ್ಡಸ' ಎಂಬುದು ತುಳು ಮೂಲದ ಶಬ್ದವಾಗಿದ್ದು ಇದಕ್ಕೆ ಭೂಮಿತಾಯಿಯು ರಜಸ್ವಲೆ(ಪುಷ್ಪವತಿ)ಯಾಗುವುದು ಎಂಬರ್ಥವಿದೆ. ಇದನ್ನು ಕನ್ನಡದಲ್ಲಿ 'ಭೂಮಿತಾಯಿಯ ಮೀಹದ ಹಬ್ಬ' ಎಂದು ಕರೆಯುತ್ತಾರೆ.[೧೦] ಸಾಮಾನ್ಯವಾಗಿ ಕೆಡ್ಡಸವನ್ನು 'ಶುರುಕೆಡ್ಡಸ', 'ನಡುಕೆಡ್ಡಸ', ಮತ್ತು 'ಕಡೆಕೆಡ್ಡಸ' ಎಂಬ ಹೆಸರಿನಲ್ಲಿ ಫೆಬ್ರವರಿ ತಿಂಗಳಿನ ಎರಡನೇ ವಾರದಲ್ಲಿ ಮೂರು ದಿನಗಳ ಕಾಲ ಆಚರಿಸಲಾಗುತ್ತದೆ.

ಈ ಹಬ್ಬದ ಮೊದಲ ದಿನ ಜಮೀನಿನಲ್ಲಿ ಕಟಾವು ಮಾಡಿದ ಭತ್ತವನ್ನು ಒಕ್ಕಲು ಮಾಡಿ ರಾಶಿ ಹಾಕುತ್ತಾರೆ. ಹೀಗೆ ಹಾಕಿದ ಭತ್ತದ ರಾಶಿಯ ಮೇಲೆ ಮುಳ್ಳು, ಕತ್ತಿ ಹಾಗೂ ಕಲ್ಲುಗಳನ್ನು ಇಡುತ್ತಾರೆ. ಧಾನ್ಯಲಕ್ಷ್ಮಿಯೆನಿಸಿರುವ ಭತ್ತ ಬೇರೆ ಕಡೆಗೆ ಹೋಗಬಾರದೆಂಬ ನಂಬಿಕೆಯಿಂದ ಹೀಗೆ ಮಾಡಲಾಗುತ್ತದೆ. ಒಟ್ಟಿನಲ್ಲಿ ಒಕ್ಕಲು ಮಾಡಿದ ಭತ್ತದ ರಾಶಿಯನ್ನು ಆರಾಧಿಸುವುದೇ 'ಶುರು ಕೆಡ್ಡಸ' ದಿನದ ವಿಶೇಷವಾಗಿರುತ್ತದೆ. ಈ ದಿನ ಮನೆಯನ್ನು ಶುಚಿಗೊಳಿಸುವ ಕಾರ್ಯವೂ ನಡೆಯುತ್ತದೆ. ಅಡುಗೆ ಕೋಣೆಯೂ ಸೇರಿದಂತೆ ಇಡೀ ಮನೆಯನ್ನು ಸಾರಿಸಿ ಸ್ವಚ್ಛಗೊಳಿಸುತ್ತಾರೆ. ಕೆಲವು ಪೂಜಾ ವಿಧಾನಗಳು ಮುಗಿದ ನಂತರ ಎಲ್ಲರೂ ಊಟ ಮಾಡುತ್ತಾರೆ.

ಈ ಆಚರಣೆಯ ಎರಡನೆಯ ದಿನ 'ನಡು ಕೆಡ್ಡಸ'. ಇದು ಬೇಟೆಗೆ ಮೀಸಲಾದ ದಿನ. 'ಕೆಡ್ಡಸ' ಎಂದರೆ 'ಸಾಮೂಹಿಕ ಬೇಟೆ'[೧೧] ಎಂದೂ ಗುರುತಿಸಿಕೊಳ್ಳಲಾಗಿದೆ. ಮೂರೂ ದಿನವೂ ಬೇಟೆಗೆ ಅವಕಾಶವಿದ್ದು, ಎರಡನೇ ದಿನ ಮಾತ್ರ ಕಡ್ಡಾಯವಾಗಿ ಬೇಟೆಯಾಡುವುದು ಗೌಡರು ರೂಢಿಸಿಕೊಂಡಿರುವ ನಿಯಮ. ಕೆಡ್ಡಸ ಆಚರಣೆಯ ಸಮಯದಲ್ಲಿ ಕಾಡು ಪ್ರಾಣಿಗಳಿಗೆ 'ಕಾಲುಗುಂಟ' ಎಂಬ ನೋವು ಕಾಣಿಸಿ ಕೊಳ್ಳುವುದರಿಂದ ಅವುಗಳನ್ನು ಸುಲಭವಾಗಿ ಬೇಟೆಯಾಡಬಹುದು ಎಂಬ ನಂಬಿಕೆ ಇವರಲ್ಲಿದೆ. ಈ ದಿನ ಬೇಟೆ ನಾಯಿಗಳ ಜೊತೆ ಕೋವಿ, ಕತ್ತಿ ಮೊದಲಾದವುಗಳನ್ನು ಹಿಡಿದು ಸಾಮೂಹಿಕವಾಗಿ ಸಂಭ್ರಮದಿಂದ ಕಾಡನ್ನು ಆವರಿಸುತ್ತಾರೆ. ಕೊಡಗಿನಲ್ಲಿ ಬೇಟೆಗೆ ದಕ್ಕುತ್ತಿದ್ದ ಪ್ರಾಣಿಗಳೆಂದರೆ ಕಾಡು ಹಂದಿಗಳು. ಹಾಗಾಗಿ ಇವುಗಳನ್ನೇ ಕೇಂದ್ರವಾಗಿಟ್ಟುಕೊಂಡು ಬೇಟೆಗೆ ತೆರಳುವುದು ವಾಡಿಕೆ. ಬೇಟೆಯ ದಿನ ಕೆಲವರು ಕಾಡಿಗೆ ಹೋಗಿ ಪ್ರಾಣಿಗಳ ಮಾಂಸ ತಂದರೆ ಕೆಲವರು ನದಿ, ಕೆರೆಗಳಲ್ಲಿ ಮೀನು ಅಥವಾ ಏಡಿಗಳನ್ನು ತಂದು ಅಡುಗೆ ಮಾಡಿ ಊಟ ಮಾಡುತ್ತಾರೆ.

ಕೊಡಗು ದಟ್ಟ ಅರಣ್ಯಗಳಿಂದಾವೃತವಾಗಿರುವುದರಿಂದ ಇದು ಬೇಟೆಗೆ ಯೋಗ್ಯವಾದ ಪ್ರದೇಶ. ಇಲ್ಲಿ ಕೊಡವರೂ ಸೇರಿದಂತೆ ಅನೇಕರು ಕಾಡು ಪ್ರಾಣಿಗಳನ್ನು ಬೇಟೆಯಾಡುವುದು ಸಾಮಾನ್ಯವಾಗಿದೆ. ಕೊಡವರೂ ಸಹ ಕೈಲ್‌ಮುಹೂರ್ತ ಹಬ್ಬದ ಸಮಯದಲ್ಲಿ ಸಾಮೂಹಿಕವಾಗಿ ಬೇಟೆಯಾಡುವುದನ್ನು ಕಡ್ಡಾಯ ಮಾಡಿಕೊಂಡಿದ್ದಾರೆ. ಕೊಡಗಿನಲ್ಲಿರುವ ಅರಣ್ಯ ಹಾಗೂ ಅಲ್ಲಿರುವ ಕಾಡುಪ್ರಾಣಿಗಳ ಲಭ್ಯತೆಯಿಂದಾಗಿ ಬೇಟೆಯನ್ನು ರೂಢಿಸಿ ಕೊಂಡಿದ್ದಾರೆ. ಬಯಲು ಪ್ರದೇಶಗಳಲ್ಲಿ ಈ ರೀತಿ ಹಬ್ಬದ ಒಂದು ಅಂಗವಾಗಿ ಬೇಟೆಯನ್ನು ಅಳವಡಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಇದೆಲ್ಲ ಪ್ರಾದೇಶಿಕ ಅವಲಂಬನೆಯೆಂದು ಹೇಳಬಹುದು.

ಮೂರನೆಯ ದಿನ 'ಕಡೆ ಕೆಡ್ಡಸ' ಆಚರಣೆಯಾಗಿರುತ್ತದೆ. ಮನೆಯ ಮುತ್ತೈದೆಯರು ಸ್ನಾನ ಮುಗಿಸಿ ತಾವೂ ಶುಚಿಯಾಗಿ ಮನೆ ಮತ್ತು ಮನೆಯ ಅಂಗಳವನ್ನು ಸಾರಿಸಿ ಶುದ್ಧೀಕರಿಸುತ್ತಾರೆ. ತೆಂಗಿನಕಾಯಿಯ ಹಾಲು, ಮೂರು ಗರಿಕೆ ಹುಲ್ಲು, ಅರಿಶಿನ ಮಿಶ್ರಿತ ನೀರು, ಕನ್ನಡಿ, ಕುಂಕುಮ, ಆಭರಣಗಳನ್ನು ನೆಲದ ಮೇಲೆ ಇಟ್ಟು ನಂತರ ಗರಿಕೆ ಹುಲ್ಲಿನ ಸಹಾಯದಿಂದ ಅರಿಶಿನ ಮಿಶ್ರಿತ ನೀರು ಹಾಗೂ ತೆಂಗಿನ ಹಾಲನ್ನು ಭೂಮಿಗೆ ಸವರುತ್ತಾರೆ. ಅಲ್ಲದೆ ಭೂಮಿಯ ಅಲಂಕಾರಕ್ಕಾಗಿ ಕನ್ನಡಿ, ಬಾಚಣಿಗೆ, ಕರಿಮಣಿಗೆಗಳನ್ನು ಇಟ್ಟು ಎಣ್ಣೆಯನ್ನು ಸುರಿಯುತ್ತಾರೆ. ಒಟ್ಟಿನಲ್ಲಿ ಋತುಮತಿಯಾದ ಒಂದು ಹೆಣ್ಣಿಗೆ ಭೂಮಿಯನ್ನು ಹೋಲಿಸಿ ವರ್ಷದ ಪ್ರಥಮ ಬೆಳೆಯನ್ನು ಬೆಳೆಯಲು ಭೂಮಿಯನ್ನು ಹದಗೊಳಿಸುವ ಕ್ರಮವನ್ನು ಕಾಣಬಹುದು. 'ಬೆಳಗಾಗಿ ನಾನೆದ್ದು ಯಾರ್‍ಯಾರ ನೆನೆಯಾಲಿ, ಎಳ್ಳು ಜೀರಿಗೆ ಬೆಳೆಯೋಳ ಭೂಮ್‌ತಾಯ ಎದ್ದೊಂದು ಗಳಿಗೆ ನೆನೆದೇನ' ಎಂಬ ಜನಪದ ಹಾಡಿನಂತೆ ಕೃಷಿಯನ್ನು ಅವಲಂಬಿಸಿರುವ ಕೊಡಗಿನ ಗೌಡರು ತಮ್ಮ ಬದುಕಿಗೆ ಆಸರೆಯಾಗಿರುವ ಈ ಭೂಮಿಯನ್ನು ಅತ್ಯಂತ ಪ್ರೀತ್ಯಾದರಗಳಿಂದ ಹದಗೊಳಿಸುತ್ತಾರೆ. ಪುಷ್ಪವತಿಯಾದ ಹೆಣ್ಣು ಗರ್ಭವತಿಯಾಗಲು ಅರ್ಹಳಾಗುವಂತೆ ಮುಂದಿನ ಬೆಳೆಗೆ ಉತ್ತಮ ಫಲವನ್ನು ನೀಡಲು ಭೂಮಿತಾಯಿ ಪರಿಶುದ್ಧಗೊಳ್ಳಲಿ ಎಂಬ ಆಶಯ ಈ ಆಚರಣೆಯಲ್ಲಿದೆ[೧೨] ಎಂದು ನಂಬಲಾಗಿದೆ.

**ಬಿಸು ಸಂಕ್ರಮಣ:** ಸೌರಮಾನ ಯುಗಾದಿಯನ್ನು ತುಳುವರು ಹಾಗೂ ಕೊಡಗಿನ ಗೌಡರು ಬಿಸು ಸಂಕ್ರಮಣವೆಂದು ಕರೆದುಕೊಂಡಿದ್ದಾರೆ. ಏಪ್ರಿಲ್ ತಿಂಗಳಿನಲ್ಲಿ ಆಚರಿಸಲಾಗುವ ಈ ಹಬ್ಬದ ಮೂಲ ಉದ್ದೇಶ ಗದ್ದೆ ಅಥವಾ ಹೊಲಗಳನ್ನು ಉಳುಮೆ ಮಾಡುವುದಾಗಿದೆ. ಕೆಡ್ಡಸ ಆಚರಣೆಯಲ್ಲಿ ಧಾನ್ಯಗಳನ್ನು ಮನೆಗೆ ತುಂಬುವ ಕೆಲಸವಾದರೆ, ಈ ಹಬ್ಬದಲ್ಲಿ ಧಾನ್ಯ ಬಿತ್ತನೆಗೆ ಭೂಮಿಯನ್ನು ಹಸನು ಮಾಡಲು ಉಳುಮೆಗೆ ತೊಡಗುವುದಾಗಿದೆ. ಜನಪದರು ಎಂತಹುದೇ ಕೃಷಿ ಸಂಬಂಧಿತ ಕಾಯಕಕ್ಕೆ ತೊಡಗುವ ಮೊದಲು ಹತ್ತು ಹಲವು ನಂಬಿಕೆ, ಆಚರಣೆಗಳ ಮೂಲಕವೇ ಮುಂದುವರೆಯುತ್ತಾರೆ. ಹಾಗಾಗಿ ಕೃಷಿಯ ಪ್ರತಿಯೊಂದು ಹಂತದಲ್ಲೂ ಸಂಭ್ರಮಗಳ ಮೂಲಕವೇ ಆರಂಭ ಮಾಡುತ್ತಾರೆ. ಇದು ಕೃಷಿಕ ಮತ್ತು ಭೂಮಿಯ ನಡುವೆ ಇರುವ ಬಾಂಧವ್ಯದ ದ್ಯೋತಕವಾಗಿದೆ.

ಈ ಹಬ್ಬದ ದಿನ ಅತ್ಯಂತ ಸಂಭ್ರಮದಿಂದಲೇ ಮನೆಮಂದಿಯೆಲ್ಲಾ ಎದ್ದು ಶುಚಿಯಾಗಿ ಮಡಿಯಾದ ಬಟ್ಟೆಗಳನ್ನು ಧರಿಸುತ್ತಾರೆ. ಹೆಂಗಸರು ಮನೆಯನ್ನು ಸ್ವಚ್ಛಗೊಳಿಸಿ, ಕೆಲವರು ಅಂಗಳವನ್ನು ಸೆಗಣಿಯಿಂದ ಸಾರಿಸುತ್ತಾರೆ. ಈ ಹಬ್ಬ ಬಹಳ ಮುಖ್ಯವಾಗಿ ಭೂಮಿಯನ್ನು ಉಳುಮೆ ಮಾಡುವುದಾಗಿರುವುದರಿಂದ ಉಳುಮೆಗೆ ಬೇಕಾದ ಎತ್ತುಗಳನ್ನೂ ತೊಳೆದು ಶೃಂಗರಿಸುತ್ತಾರೆ. ದನಗಳ ಬಗೆಗೆ ತಂಬಾ ಪ್ರೀತಿಯಿರುವವರು ಉಳುಮೆಗೆ ಬಳಸುವ ಎತ್ತುಗಳ ದೇಹಕ್ಕೆ ಹೊಂದುವ ಬಣ್ಣ ಬಣ್ಣದ ಬಟ್ಟೆಗಳನ್ನೂ ಸಿದ್ಧಮಾಡಿಕೊಂಡಿದ್ದು ಈ ಸಮಯದಲ್ಲಿ ಅದನ್ನು ಬಳಸಿ ಎತ್ತುಗಳು ಆಕರ್ಷಕವಾಗಿ ಕಾಣುವಂತೆ ಮಾಡುತ್ತಾರೆ. ಈ ಸಂದರ್ಭದಲ್ಲಿ ಕೇವಲ ಸಾಂಕೇತಿಕವಾಗಿ ಉಳುಮೆ ಮಾಡುವುದರಿಂದ ಈ ರೀತಿಯ ಬಟ್ಟೆಗಳನ್ನು ಬಳಸುತ್ತಾರೆ.

ನೆಲ್ಲಕ್ಕಿಯಲ್ಲಿ ಒಂದು ದೀಪವನ್ನು ಹಚ್ಚಿ ಬಾಳೆಯೆಲೆಯಲ್ಲಿ ಅಕ್ಕಿ, ಹಣ್ಣು-ಕಾಯಿ, ಎಲೆ, ಅಡಿಕೆ, ಹೂ ಹಾಕಿ ಇಡುತ್ತಾರೆ. ಮತ್ತೊಂದು ಬಾಳೆ ಎಲೆಯಲ್ಲಿ ಬೆಳ್ಳಿ ಮತ್ತು ಚಿನ್ನದ ನಾಣ್ಯವನ್ನು ಇಟ್ಟು ಪೂಜೆ ಸಲ್ಲಿಸುತ್ತಾರೆ[೧೩] ಎಂದು ಹೇಳಲಾಗುತ್ತದೆ. ನಂತರ ಕುಟುಂಬದವರೆಲ್ಲರೂ ಅಗೋಚರವಾದ ದೇವರನ್ನು ಪ್ರಾರ್ಥಿಸಿ ನಮಸ್ಕರಿಸುತ್ತಾರೆ. ಈ ಪದ್ಧತಿಯನ್ನು 'ಕಣಿಗೆ ಇಡುವುದು' ಎನ್ನುತ್ತಾರೆ. ನಂತರ ಗದ್ದೆಗೆ ಹೋಗಿ ಗಣಪತಿಗೆ ಎಡೆಯಿಟ್ಟು ಪೂಜೆ ಮಾಡಿ ಗಂಧ ಮತ್ತು ಅಕ್ಷತೆಗಳನ್ನು ತಮ್ಮೊಂದಿಗೆ ಎತ್ತುಗಳಿಗೂ ಹಚ್ಚುತ್ತಾರೆ. ಹೀಗೆ ದೇವರನ್ನು ಪ್ರಾರ್ಥಿಸಿ ಎತ್ತುಗಳ ತಲೆಗೆ ಅಕ್ಷತೆ ಹಾಕಿ ಅವುಗಳ ಕೊರಳಿಗೆ ನೊಗ ಇಟ್ಟು ನೇಗಿಲು ಕಟ್ಟಿ ಉಳುಮೆಗೆ ತೊಡಗುತ್ತಾರೆ. ಈ ಸಮಯದ ಉಳುಮೆಯಲ್ಲಿ ಎತ್ತುಗಳನ್ನು ಹೊಡೆಯಲು ಎಂದಿನ ಕೋಲುಗಳನ್ನು ಬಳಸದೆ ವಿಶೇಷವಾಗಿ 'ನೆಕ್ಕಿ ಕೋಲು'(ಒಂದು ಜಾತಿಯ ಗಿಡದ ಕಡ್ಡಿ)ಗಳನ್ನು ಉಪಯೋಗಿಸುವುದು ಸಂಪ್ರದಾಯವಾಗಿದೆ. ಉಳುಮೆಯ ನಂತರ ನೆಕ್ಕಿ ಕೋಲನ್ನು ಸುರಕ್ಷಿತವಾಗಿ ತಂದು ಮನೆಯ ಮಾಡಿಗೆ ಸಿಕ್ಕಿಸಿಡುತ್ತಾರೆ. ಈ ದಿನ ಉಳುಮೆ ಮಾಡಿದ ಜಾಗಕ್ಕೆ ಮನೆಯ ತಿಪ್ಪೆಯಿಂದ ಗೊಬ್ಬರ ಅಥವಾ ನೇರಳೆ ಸೊಪ್ಪು, ಇದು ಸಿಗದಿದ್ದರೆ ಯಾವುದೇ ರೀತಿಯ ಸೊಪ್ಪನ್ನು ತಂದು ಹಾಕುತ್ತಾರೆ. ಹೀಗೆ ಭೂಮಿ ಮತ್ತು ಎತ್ತುಗಳನ್ನು ಪೂಜೆ ಮಾಡಿ ಉಳುಮೆ ಪ್ರಾರಂಭಿಸುವ ಬಿಸು ಸಂಕ್ರಮಣಕ್ಕೆ ಕೊಡಗಿನ ಗೌಡರಲ್ಲಿ ವಿಶೇಷ ಮಹತ್ವವಿದೆ. ಬಿಸು ಸಂಕ್ರಮಣ ಹಬ್ಬದೊಂದಿಗೆ ಉಳಿದವರು ಆಚರಿಸುವ ಚಾಂದ್ರಮಾನ ಯುಗಾದಿಯನ್ನೂ ಸಂಭ್ರಮದಿಂದಲೇ ಇವರೂ ಆಚರಿಸುತ್ತಾರೆ.

### ೫.೧.೨. ಕೆಂಬಟ್ಟಿಯರು

ಕೊಡಗಿನಲ್ಲಿ ವಾಸಿಸುತ್ತಿರುವ ಹಲವಾರು ಜನಸಮುದಾಯಗಳಲ್ಲಿ ಕೆಂಬಟ್ಟಿಯರು ಪ್ರಮುಖರಾಗಿದ್ದಾರೆ. ಇವರನ್ನು ಕೆಂಬಟ್ಟಿ ಹೊಲೆಯರು ಎಂದೂ ಕರೆಯಲಾಗುತ್ತಿತ್ತು. ಕೊಡಗಿನಲ್ಲಿ ವಾಸಿಸುತ್ತಿರುವ ಹರಿಜನರಲ್ಲಿ ಕೆಂಬಟ್ಟಿ, ಮುಂಡ, ಕುಕ್ಕ, ಬಲಗೈ, ಎಡಗೈ ಇತ್ಯಾದಿಯಾಗಿ ಹನ್ನೆರಡು ಪಂಗಡಗಳಿರುವುದು ತಿಳಿದುಬರುತ್ತದೆ. ಇವರಲ್ಲಿ ಕೊಡಗಿನ ಮೂಲ

ಹೊಲೆಯರೆಂದರೆ ಅದು ಕೆಂಬಟ್ಟಿಗಳೇ ಆಗಿದ್ದಾರೆ. ಎಲ್ಲದರಲ್ಲೂ ಕೊಡವರ ಪದ್ಧತಿಗಳನ್ನು ಅಳವಡಿಸಿಕೊಂಡಿದ್ದರೂ ತಮ್ಮ ಸಾಂಸ್ಕೃತಿಕ ವೈಶಿಷ್ಟ್ಯತೆಯನ್ನು ಉಳಿಸಿಕೊಂಡಿರುವುದು ಇವರ ವಿಶೇಷ. 'ಉಣ್ಣುವ ಊಟ, ಆಡುವ ಮಾತು, ಹಾಡುವ ಹಾಡು, ಇರುವ ನಂಬಿಕೆ, ಪೂಜಿಸುವ ದೈವ, ನಡೆದ ರೂಢಿ, ಮಾಡುವ ಬದುಕು, ನಲಿಯುವ ಆಟ, ಆಚರಿಸುವ ಹಬ್ಬ, ಪಡೆದಿರುವ ದೇಹದ ಮಾಟ, ಚೆಲುವು, ಬೆಡಗು ಇವೆಲ್ಲ ಸಾಂಸ್ಕೃತಿಕ ಮಾನವ ಇತಿಹಾಸದಲ್ಲಿ ಅವರಿಗೊಂದು ವಿಶೇಷ ನೆಲೆ ನೀಡಿವೆ'.[೧೪] ಕೊಡಗಿನ ಮೂಲನಿವಾಸಿಗಳಾಗಿದ್ದರೂ ದಲಿತ ಸಮುದಾಯಕ್ಕೆ ಸೇರಿರುವ ಈ ಜನಾಂಗ ಇಂದಿಗೂ ಮೇಲ್ವರ್ಗದವರ ಶೋಷಣೆಗೆ ತುತ್ತಾಗುತ್ತಿರುವುದು ಶೋಚನೀಯ ಸಂಗತಿ. 'ಇತ್ತೀಚೆಗಿನ ಸಂಶೋಧನೆಗಳ ಪ್ರಕಾರ ಕೆಂಬಟ್ಟಿಗಳು ಕೊಡಗಿನ ಮೂಲನಿವಾಸಿಗಳು. ಇನ್ನುಳಿದ ಎಲ್ಲಾ ಸಮುದಾಯದವರು ಕಾಲಾಂತರದಲ್ಲಿ ಕೊಡಗು ಎಂದು ನಾವು ಇಂದು ಗುರುತಿಸುತ್ತಿರುವ ಪ್ರದೇಶದಲ್ಲಿ ನೆಲೆನಿಂತು ಇದೇ ಕೆಂಬಟ್ಟಿಗಳ ಭಾಷೆ ಮತ್ತು ಸಂಸ್ಕೃತಿಯನ್ನು ಅನುಸರಿಸುತ್ತಿದ್ದಾರೆ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.[೧೫]

ಕೆಂಬಟ್ಟಿಯವರನ್ನು ಕೊಡಗಿನ ಶೂದ್ರರೆಂದು ಗುರುತಿಸಲಾಗಿದ್ದು ಇವರನ್ನೇ ಹೋಲುವ ಜನಾಂಗಗಳನ್ನು ದೇಶದ ಹಲವು ಭಾಗಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತಿದೆ. ಚಾಂಡಾಲ, ವಲ್ಲುವನ್, ನಂಗರು, ಮಾದಿಗ, ಮರತ, ಕಾಲಡಿ, ಕಾಪಿಲ, ಮಾದಾಲ್, ಕುಕ್ಕ, ಪರೆಯ, ಪುಲಿಯನ್, ಪಂಬದೆ, ಚಮ್ಮಾರ ಹಾಗೂ ಆದಿಕರ್ನಾಟಕ ಎಂಬೆಲ್ಲಾ ಹೆಸರುಗಳಿವೆ. ಆದರೆ ಕೊಡಗಿನ ದಕ್ಷಿಣ ಭಾಗದಲ್ಲಿ ನೆಲೆನಿಂತಿರುವ ಇಲ್ಲಿನ ಪ್ರಬಲ ಮೂಲನಿವಾಸಿಗಳೆನಿಸಿರುವ ಇವರು ಸ್ಥಳೀಯವಾಗಿ ಕೆಂಬಟ್ಟಿ ಎಂಬ ಹೆಸರಿನಿಂದ ಗುರುತಿಸಿಕೊಂಡಿದ್ದಾರೆ. ಇವರನ್ನು ಕೆಂಬಟ್ಟಿ ಹೊಲೆಯರೆಂದು ಕರೆಯಲಾಗುತ್ತಿತ್ತು. ಇತ್ತೀಚೆಗೆ 'ಹೊಲೆಯ' ಶಬ್ದವನ್ನು ಬಳಸದೇ ಕೇವಲ ಕೆಂಬಟ್ಟಿ ಎಂದು ಮಾತ್ರ ಕರೆಯಲಾಗುತ್ತಿದೆ. ಸ್ಥಳೀಯವಾಗಿ ಕೆಂಬಟ್ಟಿ ಸಮುದಾಯದ ಒಬ್ಬರನ್ನು ಸಂಪರ್ಕಿಸಿ ವಿಚಾರಿಸಿದಾಗ 'ನಾವು ಕೆಂಬಟ್ಟಿ ಹೊಲೆಯರಲ್ಲ, ಪೊಲೆಯರು, ಕೊಡವ ಭಾಷೆಯಲ್ಲಿ 'ಪೊಲೆಯ' ಎಂದರೆ 'ದೀಪ' ಎಂದರ್ಥ. ನಾವೂ ಕೂಡ ಕೊಡವ ಸಮುದಾಯದ ಒಂದು ಪಂಗಡ ಎಂದು ಸ್ಪಷ್ಟಪಡಿಸಿದರು.

ಕೆಂಬಟ್ಟಿಗಳು ದುಡಿಮೆಯಲ್ಲಿ ನಿಷ್ಠೆಯಿಂದ ಮೈಬಗ್ಗಿಸಿ ದುಡಿಯುತ್ತಿದ್ದರು. ಇವರು ತಮ್ಮ ದುಡಿಮೆಯ ಮೇಲೆ ವಿಶೇಷವಾದ ಆಸಕ್ತಿಯನ್ನು ಹೊಂದಿದ್ದು ಪ್ರಾಮಾಣಿಕವಾಗಿ ದುಡಿಯುತ್ತಿದ್ದುದರಿಂದ ತಮ್ಮ ಯಜಮಾನರೊಂದಿಗೆ ಅನ್ಯೋನ್ಯ ಸಂಬಂಧವನ್ನು ಹೊಂದಿರುತ್ತಿದ್ದುದು ಇವರ ಬೇಡಿಕೆಯನ್ನು ಹೆಚ್ಚಿಸಿತ್ತು. ಹೀಗಾಗಿ ಇವರ ಕ್ರಯ ಕೂಡ ಅಧಿಕವಾಗಿತ್ತು. ಇಲ್ಲಿನ ಎರವರಿಗೆ ಕೆಂಬಟ್ಟಿ ಹೊಲೆಯರಷ್ಟು ಬೇಡಿಕೆ ಇರಲಿಲ್ಲ. ಕಾರಣ ಎರವರು ಆಗಾಗ ಓಡಿ ಹೋಗುತ್ತಿದ್ದರು ಮತ್ತು ಅಪರಾಧಗಳಲ್ಲಿ ಭಾಗಿಯಾಗುತ್ತಿದ್ದರು. ಆದರೆ ಕೆಂಬಟ್ಟಿಗಳು ಭೂಮಿ ಜಮ್ಮದಾಳುಗಳಾಗಿದ್ದುದರಿಂದ ಭೂಮಿಯೊಡನೆ ಬೇರ್ಪಡಿಸಲಾಗದ ಸಂಬಂಧವನ್ನು ಹೊಂದಿದ್ದರು. ಇವರು ದುಡಿಮೆಯ ಬಗ್ಗೆ ಶ್ರೇಷ್ಠವಾದ ನಿಲುವು ತಾಳಿದ್ದುದನ್ನು ಉಳಿಸಿಕೊಳ್ಳಲು ನಿಷ್ಠೆಯಿಂದ ನಡೆದುಕೊಂಡಿರಬಹುದೆಂದು ಅಭಿಪ್ರಾಯ ಪಡಲಾಗಿದೆ.[೧೬] ಕೊಡಗಿನ ಮೂಲ

ನಿವಾಸಿಗಳನ್ನು ಭೂಮಿ ಜಮ್ಮದಾಳುಗಳು ಮತ್ತು ಒಕ್ಕಲು ಜಮ್ಮದಾಳುಗಳು ಎಂದು ವಿಂಗಡಿಸಿಕೊಳ್ಳಲಾಗಿದೆ. ಯಾರು ಭೂಮಿಯೊಂದಿಗೆ ನೇರ ಸಂಬಂಧವನ್ನು ಹೊಂದಿದ್ದು ಮತ್ತು ಇವರನ್ನು ಯಾರು ಯಾವುದೇ ಕಾರಣಕ್ಕೂ ಬೇರ್ಪಡಿಸುವುದಕ್ಕೆ ಅವಕಾಶವಿರಲಿಲ್ಲದಿರುವವರು ಭೂಮಿ ಜಮ್ಮದಾಳುಗಳು. ಒಂದು ಪಕ್ಷ ಭೂಮಿಯನ್ನು ಮಾರುವುದಿದ್ದರೆ ಅದರೊಂದಿಗೆ ಇವರನ್ನೂ ಮಾರಬೇಕಿತ್ತು. ಇವರೇ ಕೆಂಬಟ್ಟಿಗಳಾಗಿದ್ದರು ಮತ್ತು ಯಜಮಾನನ ಸ್ವತ್ತಾಗಿದ್ದು, ಭೂಮಿಯೊಡನೆ ನೇರ ಸಂಬಂಧವಿಲ್ಲದೆ ಮಾರಾಟಕ್ಕೊಳಗಾಗುವಂತವರು. ಇನ್ನು ಒಕ್ಕಲು ಜಮ್ಮದಾಳುಗಳು ಎರವರಾಗಿದ್ದರು. ಇವರನ್ನು ಕೊಡಗಿನ ಗುಲಾಮರು ಎಂದೂ ಕರೆಯಲಾಗಿದೆ.

**ಹಿನ್ನೆಲೆ:** ಕೆಂಬಟ್ಟಿಗಳೆಂದು ಕರೆಯಿಸಿಕೊಳ್ಳುವ ಇವರಿಗೆ ಈ ಹೆಸರು ಏಕೆ ಮತ್ತು ಹೇಗೆ ಬಂದಿರುವುದೆಂಬುದನ್ನು ಹಲವು ವಾದಗಳ ಮೂಲಕ ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಕೊಡಗು ಭೂಪ್ರದೇಶದಲ್ಲಿ ಪ್ರಾಚೀನ ಕಾಲದಲ್ಲಿ ಬೆಟ್ಟದ ಅಂಚಿನ ಗದ್ದೆಗಳಲ್ಲಿ 'ಕುರ್ತು'(ಕೆಂಬತ್ತಿ ಭತ್ತ)ವನ್ನು ಬೆಳೆಯುತ್ತಿದ್ದರು. ಇದು ಕೆಂಪು ಬಣ್ಣದಿಂದ ಕೂಡಿರುವ ದಪ್ಪ ಭತ್ತ ತುಂಬಾ ರುಚಿಯಾಗಿದ್ದು, ಬೇಗ ಬೆಳೆಯವಂತದ್ದಾಗಿತ್ತು. ರಾಜರ ಜಮೀನುಗಳಲ್ಲಿ ಸಾಮಾನ್ಯ ಭತ್ತದ ಜೊತೆಗೆ ಈ ಕೆಂಬತ್ತಿಯನ್ನು ಬೆಳೆಯುತ್ತಿದ್ದರು. ಈ ಭತ್ತದ ಕೃಷಿಗೆ 'ಕೆಂಬಟ್ಟಿ'ಗಳೆಂದು ಕರೆಸಿಕೊಳ್ಳುತ್ತಿದ್ದ ಹೊಲೆಯರೆ ಹೆಚ್ಚು ತೊಡಗಿಕೊಂಡಿರುತ್ತಿದ್ದರು. ಈ ಕಾರಣದಿಂದಲೇ ಇವರು 'ಕೆಂಬಟ್ಟಿ'ಗಳೆಂದು ಗುರುತಿಸಿಕೊಂಡಿರಬಹುದು ಎಂಬ ಅಭಿಪ್ರಾಯವನ್ನು ಮುಂದಿಡಲಾಗಿದೆ.

ಮತ್ತೊಂದು ವಾದದ ಪ್ರಕಾರ, ಕೆಂಬಟ್ಟಿಗಳ ಮುಖ್ಯ ಕುಲದೇವತೆ ಪನ್ನಂಗಾಲತಮ್ಮೆಯ ಹಬ್ಬದಲ್ಲಿ ಉತ್ಸವಮೂರ್ತಿ ಅಥವಾ ಬಿಂಬವನ್ನು ಹೊರುವವರು ಕಡ್ಡಾಯವಾಗಿ ಕೆಂಪು ಉಡುಗೆ ಧರಿಸುತ್ತಾರೆ. ಅಲ್ಲದೆ ಎತ್ತು ಪೋರಾಟ್‌ಗೆ ಬಳಸುವ ಎತ್ತಿನ ದೇಹದ ಮೇಲೂ ಕೆಂಪು ವಸ್ತ್ರ ಹಾಕಿ ಕೊಂಬಿಗೂ ಕೆಂಪು ಬಣ್ಣವನ್ನು ಹಚ್ಚಿರುತ್ತಾರೆ. ಕೆಂಪು ಬಟ್ಟೆ ಕೆಂಬಟ್ಟಿಗಳ ದೈವ ಸಂಪ್ರದಾಯದ ಕಾರಣವೂ 'ಕೆಂಬಟ್ಟಿ' ಎಂಬ ಹೆಸರು ಈ ಜನರಿಗೆ ಅಂಟಿಕೊಂಡಿರಬಹುದೆಂಬ ಮತ್ತೊಂದು ಅಭಿಪ್ರಾಯವೂ ಇದೆ.

ಒಟ್ಟಿನಲ್ಲಿ ಭಾಷಿಕವಾಗಿ 'ಕೆಂಪುಬತ್ತ- ಕೆಂಬತ್ತ' ಹಾಗೂ ಧಾರ್ಮಿಕವಾಗಿ 'ಕೆಂಪು ಬಟ್ಟೆ- ಕೆಂಬಟ್ಟೆ'ಯಾಗಿರಬಹುದು. ಹೀಗೆ ವಿವಿಧ ಅಭಿಪ್ರಾಯಗಳನ್ನು ಗಮನಿಸಿದ ಮೇಲೆ 'ಕೆಂಪು' ಎನ್ನುವ ಬಣ್ಣವೇ ವಿಶೇಷಣವಾಗಿ ಬಂದು ಈ ಜನಾಂಗದ ಹೆಸರಿಗೆ ಅನ್ವಯವಾಗಿ 'ಕೆಂಬಟ್ಟಿ' ಅಥವಾ 'ಕೆಂಬಟ್ಟೆ' ಜನಾಂಗವೆಂದು ಕರೆಯಲ್ಪಟ್ಟಿದ್ದಾರೆ.

ಸಾಮಾಜಿಕ ನೆಲೆಯಲ್ಲಿ ಕೆಂಬಟ್ಟಿಗಳು ಕೊಡಗಿನಲ್ಲಿ ಕೆಳಹಂತದಲ್ಲಿದ್ದಾರೆ ಎಂದು ಕೊಂಡರೂ ಕೀಳಾಗಿದ್ದರು ಅಥವಾ ಕೀಳೆನಿಸಿಕೊಂಡಿದ್ದರು ಎನ್ನುವಂತಿರಲಿಲ್ಲ[೧೭] ಎಂಬ ಆಬಿಪ್ರಾಯವೊಂದಿದೆ. ಆದರೆ ಇಲ್ಲಿಯ ವಾಸ್ತವವೇ ಬೇರೆಯಾಗಿದೆ. ಕೊಡಗಿನ ಪ್ರಬಲ ಸಮುದಾಯಗಳ ನಿಯಂತ್ರಣದಲ್ಲಿ ಇಡೀ ಕೆಂಬಟ್ಟಿ ಸಮುದಾಯ ನಲುಗಿಹೋಗಿರುವ ನಿದರ್ಶನಗಳಿವೆ. ಸಾಮಾಜಿಕವಾಗಿ ಕೊಡಗಿನ ಇತರ ಜನರೊಂದಿಗೆ ಉತ್ತಮ ಒಡನಾಟವನ್ನು

ಹೊಂದಿದ್ದರು ಎಂಬುದಕ್ಕೆ ಕೊಡುವ ಕಾರಣ ಹೀಗಿದೆ. ವಿರಾಜಪೇಟೆ ತಾಲೂಕಿನ ಅರಮೇರಿ ಎಂಬ ಗ್ರಾಮದಲ್ಲಿ ಹುತ್ತರಿ ಕೋಲಾಟಕ್ಕೆ ಕೊಡವರೊಡನೆ ಕೆಂಬಟ್ಟಿಗಳು ಕೊಂಬು, ಕಹಳೆ ಊದಿಕೊಂಡು ಕೊಡವ ವೇಷ ಧರಿಸಿ ನಾಡಮಂದ್‌ಗೆ ಸಾಗುತ್ತಿದ್ದರು. ಅಲ್ಲದೆ ಪನ್ನಂಗಾಲತಮ್ಮೆ ಹಬ್ಬದಲ್ಲಿ ಹರಕೆಯನ್ನು ಅರಮೇರಿಯ ಯುವಕ ಪಾಡಿಗಳಲ್ಲಿ ಕೆಂಬಟ್ಟಿ ಜನಾಂಗದವರ ಮೂಲಕವೇ ಕೊಡವರು ಹಾಗೂ ಇತರ ಸಮುದಾಯದವರು ಸಂದಾಯ ಮಾಡುತ್ತಿದ್ದರು. ಹೀಗೆ ಕೆಂಬಟ್ಟಿಗಳು ಕೃಷಿಯಾಳುಗಳಾಗಿದ್ದರೂ ಸಾಧಾರಣ ಮಟ್ಟಿಗೆ ಗೌರವದ ಸ್ಥಾನವನ್ನು ಸಮಾಜದಲ್ಲಿ ಹೊಂದಿದ್ದರು ಎಂಬುದು ಸೆನ್ಸಸ್‌ನ ವರದಿಯಲ್ಲಿ ದಾಖಲಾಗಿರುವುದು ತಿಳಿದುಬರುತ್ತದೆ.[೧೮]

**ಶಾರೀರಿಕ ಲಕ್ಷಣಗಳು:** ಕೊಡಗಿನಲ್ಲಿ ವಾಸಿಸುತ್ತಿರುವ ಎರವರು ಹಾಗೂ ಪಣಿಯರಿಗಿಂತ ಭಿನ್ನವಾದ ಲಕ್ಷಣಗಳನ್ನು ಹೊಂದಿರುವ ಕೆಂಬಟ್ಟಿಯರು ನೋಡಲು ಸುಂದರವಾಗಿಯೂ ಇದ್ದಾರೆ. ಸಾಮಾನ್ಯವಾಗಿ ಕುಳ್ಳಗೆ, ದಪ್ಪ ಹಾಗೂ ಅಗಲ ಹೊಳ್ಳೆಯ ಮೂಗು, ದಪ್ಪ ತುಟಿ, ಸಾಮಾನ್ಯ ಗಾತ್ರದ ತಲೆಬುರುಡೆ, ಕಪ್ಪು ವರ್ಣದವರಲ್ಲದ, ಕೋಲುಮುಖ, ನೀಳ ನಾಸಿಕ, ಉಬ್ಬಿದ ಕೆನ್ನೆ ಹಾಗೂ ಉದ್ದನೆಯ ದೇಹವನ್ನುಳ್ಳವರಾಗಿದ್ದು ಬೆಳ್ಳಗಿನ ಬಣ್ಣವನ್ನು ಹೊಂದಿದವರಾಗಿದ್ದಾರೆ. ಇವರಲ್ಲಿ ಅನೇಕ ಹೆಂಗಸರೂ ರೂಪವತಿಯರೂ ಅಗಿದ್ದಾರೆ. ಇವರಲ್ಲಿ ಮಹಿಳೆಯರ ಸೌಂದರ್ಯದ ಕುರಿತು ರಿಕ್ಟರ್ ಹೇಳಿರುವ ಅಭಿಪ್ರಾಯ ಹೀಗಿದೆ. ಅಂದಿನ ಕಾಲದಲ್ಲಿ ರಾಜನ ವಿದ್ರೋಹದ ಆಪಾಧನೆಗೊಳಗಾದ ವ್ಯಕ್ತಿಯ ಒಕ್ಕದ ಗಂಡಸರನ್ನೆಲ್ಲ ಹತ್ಯೆಗೈದು, ಅವರ ಹೆಂಗಸರನ್ನು ಗುಲಾಮಗಿರಿಗೆ ತಳ್ಳಿ ಪನ್ಯಕ್ಕೆ ಕಳುಹಿಸುತ್ತಿದ್ದರು ಮತ್ತು ಹೊಲೆಯರಿಗೆ ಒಪ್ಪಿಸುತ್ತಿದ್ದರು ಎಂದು ಹೇಳಲಾಗಿದೆ.[೧೯] ಇದಕ್ಕೆ ಪೂರಕವೆಂಬಂತೆ ದಿವಾನ ಚವುರಿರ ಕಾರ್ಯಪ್ಪನನ್ನು ರಾಜದ್ರೋಹದ ಆಪಾದನೆ ಮೇಲೆ ಕೊಲ್ಲಿಸಿದ ೨ನೇ ಲಿಂಗರಾಜನು ಆತನ ಪತ್ನಿಯನ್ನು ಹೊಲೆಯರ ಜಾತಿಗೆ ತಳ್ಳಿರುವುದನ್ನು ನಡಿಕೇರಿಯಂಡ ಚಿಣ್ಣಪ್ಪನವರು ಪ್ರಸ್ತಾಪಿಸಿರುವ ಮಾಹಿತಿ ದೊರೆಯುತ್ತದೆ.[೨೦] ಹೀಗಾಗಿ ಕೆಂಬಟ್ಟಿ ಸಮುದಾಯದಲ್ಲಿ ಕೊಡಗಿನ ಮೇಲ್ವರ್ಗದ ಲಕ್ಷಣಗಳನ್ನು ಕಾಣಲು ಸಾಧ್ಯವಾಗುತ್ತದೆ ಎನ್ನಲಾಗಿದೆ. ಹುದಿಕೇರಿ, ಅರವತ್ತೊಕ್ಲು, ಕೋತೂರು, ಕೈಕೇರಿ, ಬಿಟ್ಟಂಗಾಲ, ಅಮ್ಮತ್ತಿ ಬಿಳಗುಂದ, ಬಲಮುರಿ, ಮೂರ್ನಾಡು ಇತ್ಯಾದಿ ಗ್ರಾಮಗಳಲ್ಲಿ ಕೆಂಬಟ್ಟಿ ಸಮೂಹದ ಸುಂದರವಾದ ಅನೇಕ ತರುಣ ತರುಣಿಯರಿದ್ದಾರೆ.

ಕೊಡವರಂತೆ ಕೆಂಬಟ್ಟಿಯರಿಗೂ ಮನೆತನದ ಹೆಸರುಗಳಿರುವುದು ವಿಶೇಷವೆನಿಸುತ್ತದೆ. ಅರಮೇರಿಯಲ್ಲಿ ಪಡುಕುಟ್ಟ, ಬೆಟ್ಟಕುಟ್ಟ, ಕಾಡುಕುಟ್ಟ, ಪೊಂದಕುಟ್ಟ, ಕುಟ್ಟಂಡ ಎಂಬ ಹೆಸರಿನ ಮನೆತನಗಳು ಈಗಲೂ ಇವೆ ಎಂದು ಕಂಡುಕೊಳ್ಳಲಾಗಿದೆ. ಕೆಂಬಟ್ಟಿಯರ ಸುಮಾರು ನೂರ ಇಪ್ಪತ್ತೈದಕ್ಕೂ ಹೆಚ್ಚು ಮನೆತನಗಳಿದ್ದವು. ಆದರೆ ಅವುಗಳಲ್ಲಿ ಈಗ ಬಳಕೆಯಲ್ಲಿರುವುದು ತೊಂಬತ್ತೈದು ಕುಟುಂಬಗಳು ಎಂದು ತಿಳಿದುಬರುತ್ತದೆ. (ವಕ್ತೃವಿನ ಮೂಲಕ ಪಡೆದ ಮಾಹಿತಿ) ಈ ವಿವರಗಳನ್ನು 'ಕೆಂಬಟ್ಟಿ ಹೊಲೆಯರ ಸಂಸ್ಕೃತಿ' ಕೃತಿಯಲ್ಲಿಯೂ ಪ್ರಸ್ತಾಪಿಸಲಾಗಿದೆ.[೨೧]

ಕೆಂಬಟ್ಟಿಯರು ಸಾಮಾನ್ಯವಾಗಿ ಗದ್ದೆಯ ಬಳಿ ಗೆರೆಕಾಡುಗಳಲ್ಲಿ ಗುಡಿಸಲು ಅಥವಾ ಮಣ್ಣಿನ ಗೋಡೆಯ ಸಣ್ಣ ಮನೆಗಳಲ್ಲಿ ವಾಸಮಾಡುತ್ತಾರೆ. ಅಲ್ಲದೆ ಇವರು ವಾಸಿಸುವ ನೆಲೆ ಮುಖ್ಯವಾದ ರಸ್ತೆಯಿಂದ ಸುಮಾರು ಒಂದರಿಂದ ಮೂರು ಮೈಲಿಗಳವರೆಗೆ ಕಾಡಿನ ನಡುವೆ ಇರುತ್ತವೆ, ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದ ಸಮೂಹವಾಗಿರುವುದರಿಂದ ಇತರ ಸಮಾಜಗಳಿಂದ ದೂರವುಳಿದಿರಬಹುದು ಅಥವಾ ದೂರವಿಟ್ಟಿರಬಹುದು. ಒಂದು ಕಾಲದಲ್ಲಿ ಕೊಡವ ಕುಟುಂಬದ ಕೃಷಿಯಾಳುಗಳಾಗಿ ವಂಶಪಾರಂಪರ್ಯವಾಗಿ ನಡೆದುಬರುತ್ತಿರುವ ಕುಟುಂಬಗಳು ಇದ್ದವು. ಜೊತೆಗೆ ಅಲ್ಲಲ್ಲಿ ಯಾರ ಹಂಗಿಗೂ ಸಿಕ್ಕಿಕೊಳ್ಳದೆ ಸ್ವತಂತ್ರವಾಗಿ ಬಾಳುತ್ತಿರುವ ಕುಟುಂಬಗಳು ಇವೆ. ಕೊಡಗಿನಲ್ಲಿ ಮುಖ್ಯವಾಗಿ ದಕ್ಷಿಣ ಕೊಡಗಿನ ಕೋತೂರು, ಹುದಿಕೇರಿಯಿಂದ ಉತ್ತರ ಕೊಡಗಿನ ಮೂರ್ನಾಡುವರೆಗೆ ಕೆಂಬಟ್ಟಿಯರ ಒಕ್ಕಲು ಕಂಡುಬರುತ್ತವೆ. ಕಿಗ್ಗಟ್ಟುನಾಡು, ಬೆಟ್ಟಿಯತ್‌ನಾಡು, ಬೆಪ್ಪುನಾಡು, ಎಡನಾಲ್ಕುನಾಡು, ಕಡಿಯತ್‌ನಾಡು, ಪಾಡಿನಾಲ್ಕುನಾಡು, ಕುಯ್ಯಂಗೇರಿನಾಡು, ಸೂರ್ಲಬಿ, ಯಡವನಾಡು ಮುಂತಾದ ಕಾಡುಗಳ ಅಂಚಿನ ಗ್ರಾಮಗಳಲ್ಲಿ ವಾಸಿಸುತ್ತಿದ್ದಾರೆ.

ಸಾಮಾಜಿಕವಾಗಿ ಹಿಂದುಳಿದವರ ಉದಾರತೆಯಾಗಲಿ, ಪ್ರಾಮಾಣಿಕತೆಯಾಗಲಿ, ನಿಷ್ಠೆಯಾಗಲಿ ಕೆಲವೊಮ್ಮೆ ಗೌಣವಾಗುವುದುಂಟು. ಎಲ್ಲವನ್ನು ತಾನು ತಿನ್ನುವ, ತೊಡುವ, ವಾಸಿಸುವ ಸ್ಥಿತಿಗತಿಗಳ ಆಧಾರದ ಮೇಲೆ ನಿರ್ಧರಿಸುವುದು ಅಂದಿನಿಂದ ಇಂದಿನವರೆಗೂ ನಡೆದು ಬಂದಿರುವುದು ವಿಪರ್ಯಾಸವೆಂದೇ ಹೇಳಬಹುದು. ಕೆಂಬಟ್ಟಿಯರು ಕೊಡವರ ಅನೇಕ ಪದ್ಧತಿಗಳನ್ನು ತಮ್ಮವೆಂದೇ ಭಾವಿಸಿ ಅನುಸರಿಸಿಕೊಂಡು ಬರುತ್ತಿದ್ದಾರೆ. ವಾಸದ ಮನೆಗಳಲ್ಲೂ ಕೊಡವರನ್ನು ಅನುಕರಿಸುವ ಪ್ರಯತ್ನ ಮಾಡಿದ್ದಾರೆ. ಅಷ್ಟೇನು ಸ್ಥಿತಿವಂತರಲ್ಲದ ಕೆಂಬಟ್ಟಿಯರು ಗುಡ್ಡದ ತಪ್ಪಲು, ಕಾಡು ಹಾಗೂ ತಮ್ಮ ಒಡೆಯರ ಗದ್ದೆಗಳ ಸಮೀಪ ಗೆರೆಕಾಡುಗಳಲ್ಲಿ ಚಿಕ್ಕದಾಗಿ ನಿರ್ಮಿಸಿಕೊಂಡಿರುವ ಹುಲ್ಲು ಹೊದಿಸಿದ ಗುಡಿಸಲುಗಳಲ್ಲಿ ವಾಸವಿರುತ್ತಿದ್ದರು. ಇಂಥಹ ಗುಡಿಸಲುಗಳನ್ನು 'ಪಳ್ಳಿ' ಎಂದು ಕರೆಯುವ ಕಾರಣ ಕೆಂಬಟ್ಟಿಯರು ವಾಸಿಸುವ ಮನೆಗೆ 'ಹೊಲೆಯರ್ ಪಳ್ಳಿ' ಎಂದು ಕೊಡವ ಭಾಷೆಯಲ್ಲಿ ಕರೆಯಲಾಗಿದೆ. ಅಲ್ಲದೆ ಕೆಲವು ಕುಟುಂಬಗಳು ತಮ್ಮ ಕೊಡವ ಯಜಮಾನರ ಐನ್‌ಮನೆಗೆ ಬರುವ ದಾರಿಯ ಬದಿಯಲ್ಲಿ ಅಥವಾ ಅವರ ಒಡೆತನದ ಪುಟ್ಟ ಮನೆಗಳಲ್ಲಿ ವಾಸಿಸುತ್ತಿರುವುದೂ ಇದೆ. ಪ್ರಾರಂಭದಲ್ಲಿ ಎಲ್ಲ ಕೆಂಬಟ್ಟಿಯರು ಗುಡಿಸಲುಗಳಲ್ಲಿಯೇ ವಾಸಿಸುತ್ತಿದ್ದರು. ಕಾಲಕ್ರಮೇಣ ಸರ್ಕಾರ ಅಥವಾ ದಣಿಗಳು ಇವರ ದುಡಿಮೆಗೆ ಫಲವಾಗಿ ದೊರೆತ ಸಹಾಯದಿಂದ ಮಳೆ ಗಾಳಿಗಳಿಂದ ರಕ್ಷಿಸಿಕೊಳ್ಳಬಹುದಾದಂತಹ ಮನೆಗಳನ್ನು ಕಟ್ಟಿಕೊಂಡಿದ್ದಾರೆ.

ಕೆಂಬಟ್ಟಿಯರು ಕೊಡವ ಸಂಸ್ಕೃತಿಯೊಂದಿಗೆ ನಿಕಟವರ್ತಿಗಳಾಗಿರುವುದರಿಂದ ಕೊಡವರ 'ಐನ್‌ಮನೆ'ಯ ಸಾಂಕೇತಿಕ ರಚನಾಕ್ರಮವನ್ನು ಅಳವಡಿಸಿಕೊಂಡಿದ್ದಾರೆ. ಕೊಡವರಿಗೆ ಕೇರಳದಿಂದ ವಲಸೆ ಬಂದ ಐರಿರ ಎಂಬ ಜಾತಿಯ ಜನರು 'ಐನ್‌ಮನೆ'ಗಳನ್ನು ಕಟ್ಟಿಕೊಡುತ್ತಿದ್ದರು. ಕೊಡವರ ಪ್ರಭಾವಕ್ಕೊಳಗಾದ ಕೆಂಬಟ್ಟಿ ಜನರು ತಾವೂ ಇಂಥ ಮನೆಗಳಲ್ಲಿ

ಕನ್ನಿಕಂಬ, ಐಮರ, ನೆಲ್ಲಕ್ಕಿನಡುಬಾಡೆ, ತೂಕುಂಬೊಳಿಚಗಳ ವ್ಯವಸ್ಥೆಯನ್ನು ಮಾಡಿಕೊಂಡಿದ್ದಾರೆ. ಕೊಡವರ 'ಐನ್‌ಮನೆ'ಯ ಸ್ವರೂಪವಿಲ್ಲದಿದ್ದರೂ ವಂಶಪಾರಂಪರ್ಯವಾಗಿ ವಾಸವಿರುವ ಗುಡಿಸಲುಗಳನ್ನೂ 'ಐನ್‌ಮನೆ' ಎಂದು ಕರೆದುಕೊಂಡಿದ್ದಾರೆ.[೨೨] ಕೆಲವರು ಉತ್ತಮ ಮನೆಗಳನ್ನೂ ನಿರ್ಮಿಸಿಕೊಂಡಿದ್ದಾರೆ.

**ಉಡುಗೆ–ತೊಡುಗೆ:** ಆರ್ಥಿಕ ಚೈತನ್ಯ, ದುಡಿಮೆಯ ಕ್ರಮ, ಸಂಪ್ರದಾಯದ ಪಾಲನೆ ಹಾಗೂ ಸಾಂಸ್ಕೃತಿಕ ಪ್ರಭಾವಗಳು ಮಿಳಿತವಾಗುವಂತೆ ಕೆಂಬಟ್ಟಿಯರು ವಸ್ತ್ರಗಳನ್ನು ತೊಟ್ಟುಕೊಳ್ಳುತ್ತಾರೆ. ಸಾಮಾನ್ಯ ದಿನಗಳಲ್ಲಿ ಸಾಧಾರಣ ಬಟ್ಟೆ ಧರಿಸಿಕೊಳ್ಳುವ ಇವರು ಮದುವೆ ಮತ್ತು ಹಬ್ಬಗಳ ಸಮಯದಲ್ಲಿ ಸ್ವಲ್ಪ ವಿಶೇಷವಾಗಿಯೇ ದಿರಿಸುಗಳನ್ನು ತೊಡುತ್ತಾರೆ. ಮದುವೆ ಸಂದರ್ಭಗಳಲ್ಲಿ ಕೊಡವರ ಸಾಂಪ್ರದಾಯಿಕ ವೇಷಗಳಾದ ತಲೆಗೆ ಪೇಟ, ಮೈಗೆ ಕುಪ್ಪಸ ದಟ್ಟಿ, ಪೀಚೆಕತ್ತಿ, ಉಮ್ಮತ್ತಿ, ಚಂಗೂಲ, ವಡಿಕತ್ತಿಗಳನ್ನು ಧರಿಸುತ್ತಾರೆ. ಇವುಗಳನ್ನು ಹೊಂದಲಾಗದವರು ಇತರರಿಂದ ಎರವಲು ಪಡೆದು ತೊಟ್ಟುಕೊಳ್ಳುತ್ತಾರೆ. ಕೆಂಬಟ್ಟಿ ಮಹಿಳೆಯರಂತೂ ಸಂಪೂರ್ಣವಾಗಿ ಕೊಡವ ಮಹಿಳೆಯರಂತೆ ಸಾಂಪ್ರದಾಯಿಕ ಶೈಲಿಯಲ್ಲಿಯೇ ಸೀರೆ ಉಟ್ಟುಕೊಳ್ಳುತ್ತಾರೆ.

**ಭಾಷೆ:** ಕೆಂಬಟ್ಟಿಯರು 'ಕೊಡವ' ಭಾಷೆಯನ್ನು ಬಳಸುವುದರೊಂದಿಗೆ 'ಇದು ನಮ್ಮ ಮಾತೃಭಾಷೆಯೆಂದು ಹೇಳಿಕೊಳ್ಳುತ್ತಾರೆ.[೨೩] ಇವರಿಗೆ ಕನ್ನಡ ಮತ್ತು ಮಲೆಯಾಳ ಭಾಷೆಗಳೂ ಬರುತ್ತವೆ. ಕೊಡಗಿನ ಮೂಲ ಮಕ್ಕಳಾಗಿರುವುದರಿಂದ ಕೊಡವ ಭಾಷೆಯನ್ನು ಬಳಸಿದರೂ ದಿನನಿತ್ಯದ ವ್ಯವಹಾರ ಮತ್ತು ಬರಹಗಳಿಗೆ ಕನ್ನಡ ಭಾಷೆಯನ್ನೇ ಬಳಸುತ್ತಾರೆ. ಇವರು ಮೂಲತಃ ಕೇರಳದ ಮಲಬಾರು ಕಡೆಯಿಂದ ಕೊಡಗಿಗೆ ವಲಸೆ ಬಂದು ನೆಲೆಸಿರಬಹುದು ಎಂಬ ಅಭಿಪ್ರಾಯವಿದ್ದು ಆ ಕಾರಣದಿಂದಲೇ ಇವರು ಮಲೆಯಾಳ ಭಾಷೆ ಬಳಸುವುದು ಸಹಜವಾಗಿದೆ ಎನ್ನಲಾಗುತ್ತದೆ. ಅಲ್ಲದೆ ಇವರ ಅನೇಕ ಪ್ರದರ್ಶನ ಕಲೆಗಳಲ್ಲಿ ಬಳಸುವ ಬಾಷೆಯೂ ಮಲೆಯಾಳವೇ ಆಗಿರುವುದರಿಂದ ಇವರು ಕೇರಳದ ಕಡೆಯಿಂದಲೇ ಬಂದಿದ್ದಾರೆಂಬುದು ಮನದಟ್ಟಾಗುತ್ತದೆ.

**ಅ. ಆಚರಣೆಗಳು**

**ಜನನ:** ಭಾರತೀಯ ಸಂಪ್ರದಾಯದಲ್ಲಿ ಮಗುವಿನ ಜನನಕ್ಕೆ ವ್ಯಕ್ತವಾಗುವ ಪ್ರತಿಕ್ರಿಯೆ ಹಲವು ರೀತಿಯಲ್ಲಿರುತ್ತವೆ. ಕೆಂಬಟ್ಟಿ ಸಮುದಾಯವೂ ಇದಕ್ಕೆ ಹೊರತಲ್ಲ. ಪ್ರಾಣಿ ಪಕ್ಷಿಗಳೇ ತಮ್ಮ ವಂಶದ ಕುಡಿಗಳ ಬಗ್ಗೆ ತುಂಬಾ ಸಂತೋಷ ವ್ಯಕ್ತಪಡಿಸುತ್ತವೆ. ಮನುಷ್ಯನಾದವನು ಮಗುವಿನ ಆಗಮನವನ್ನು ಹತ್ತು ಹಲವು ರೀತಿಯಲ್ಲಿ ಆಚರಿಸುತ್ತಾನೆ. ಕೊಡಗಿನ ಹಾಗೂ ಕೊಡವರ ಪ್ರಭಾವಕ್ಕೆ ಹೊಂದಿಕೊಂಡಿರುವ ಕೆಂಬಟ್ಟಿಯರು ಈ ಸಂದರ್ಭದಲ್ಲೂ ಕೊಡವರನ್ನೇ ಅನುಸರಿಸುವುದನ್ನು ಕಾಣಬಹುದಾಗಿದೆ. ಮಗು ಹುಟ್ಟಿದ ಕೂಡಲೇ ಕೊಡವರು ಕೋವಿಯಿಂದ ಗುಂಡು ಹಾರಿಸುವ ಮೂಲಕ ಮಗುವಿನ ಆಗಮನವನ್ನು ಇಡೀ ಊರಿಗೆ ತಿಳಿಯುವಂತೆ

ಮಾಡುತ್ತಾರೆ. ಕೊವಿಯನ್ನು ಹೊಂದಿಲ್ಲದ ಇವರಲ್ಲಿ ಕೆಲವರು ಕೊಡವರಿಂದ ಕೋವಿಯನ್ನು ಪಡೆದು ಗುಂಡು ಹಾರಿಸುತ್ತಾರೆ. ಇವರು ಮಗು ಜನಿಸಿದ ಕೂಡಲೇ ಕಾಡಿಗೆ ಕಲ್ಲು ಎಸೆಯುವ ಪದ್ಧತಿಯನ್ನು ಅನುಸರಿಸುತ್ತಿದ್ದಾರೆ. ಕೆಂಬಟ್ಟಿಯರಲ್ಲಿ ಗಂಡು ಮಗು ಜನಿಸಿದರೆ ಸಾಮಾನ್ಯವಾಗಿ ಮೂರು ಕಲ್ಲುಗಳನ್ನು ಕಾಡಿಗೆ ಎಸೆಯುತ್ತಾರೆ. ಹಾಗೆಯೇ ಮಗು ಹೆಣ್ಣಾದರೆ ಗಂಗಾಳವನ್ನು ಹೊಡೆಯುತ್ತಾರೆ. ಕಾಡಿಗೆ ಕಲ್ಲು ಎಸೆಯುವುದು ಹುಟ್ಟಿದ ಗಂಡು ಕಾಡಿಗೆ ಹೋಗಿ ಬೇಟೆಯಾಡಿ ಪ್ರಸಿದ್ಧಿ ಪಡೆಯಲಿ ಎಂದಾದರೆ, ಗಂಗಾಳ ಬಡಿಯುವುದು ಹೆಣ್ಣು ಅಡುಗೆಯಲ್ಲಿ ಸಿದ್ಧಹಸ್ತಳಾಗಲಿ ಎಂಬ ಹಾರೈಕೆಯ ಸಂಕೇತ ಈ ಆಚರಣೆಯಲ್ಲಿದೆ ಎಂದು ಹೇಳಲಾಗುತ್ತದೆ.

ಕೊಡಗಿನ ಕೆಲವು ಭಾಗಗಳಲ್ಲಿ ಗಂಡು ಮತ್ತು ಹೆಣ್ಣು ಮಗು ಜನಿಸಿದಾಗ ಅನುಸರಿಸುವ ಕ್ರಮಗಳು ಕೆಂಬಟ್ಟಿಯರಲ್ಲಿ ಬೇರೆಬೇರೆಯಾಗಿರುವುದು ತಿಳಿದುಬರುತ್ತದೆ. ಅರವತ್ತೊಕ್ಲು ಗ್ರಾಮದಲ್ಲಿ ಹುಟ್ಟಿದ ಮಗು ಗಂಡಾದರೆ ಕಲ್ಲನ್ನು ಕಾಡಿನತ್ತ ಪಶ್ಚಿಮಕ್ಕೆ ಎಸೆದರೆ, ಅರಮೇರಿಯಲ್ಲಿ ದಿಕ್ಕಿನ ಬಗ್ಗೆ ಯಾವ ಗೊಂದಲವಿಲ್ಲ. ಅರಮೇರಿ ಬಲ್ಯಣಗೇರಿಯಲ್ಲಿ ಮಗು ಗಂಡಾದರೆ ಏಳು ಕಲ್ಲುಗಳನ್ನು ಕಾಡಿಗೆ ಎಸೆಯಲಾಗುತ್ತದೆ. ಹೆಣ್ಣಾದರೆ ಏಳು ಕಲ್ಲುಗಳನ್ನು ಬಾವಿಗೆ ಹಾಕುತ್ತಾರೆ. ಬೇಟೋಳಿ, ಅಮ್ಮತ್ತಿ ಬಿಳಗುಂದಗಳಲ್ಲಿ ಏಳು ಕಲ್ಲುಗಳ ಬದಲು ಮೂರು ಮೂರು ಕಲ್ಲುಗಳನ್ನು ಬಳಸುತ್ತಾರೆ. ಮರಂದೋಡುವಿನಲ್ಲಿ ಗಂಡಾದರೆ ಐದು ಕಲ್ಲು ಕಾಡಿಗೆ, ಮೂರು ಕಲ್ಲು ಬಾವಿಗೆ ಎಸೆಯುತ್ತಾರೆ. ಹಾಗೆಯೇ ಹೊಸೂರು ಬೆಟ್ಟೋರಿಯಲ್ಲಿ ಮೂರು ಕಲ್ಲುಗಳನ್ನು ಕಾಡಿಗೆ ಮತ್ತು ಎರಡು ಕಲ್ಲುಗಳನ್ನು ಬಾವಿಗೆ ಎಸೆಯಲಾಗುತ್ತದೆ.[೨೪] ಇದೊಂದು ಪದ್ಧತಿಯಲ್ಲಿ ಕೆಂಬಟ್ಟಿ ಜನರು ಯಾರನ್ನೂ ಅನುಸರಿಸದೆ ತಮ್ಮ ಅನನ್ಯತೆಯನ್ನು ಕಂಡುಕೊಂಡಿದ್ದಾರೆ.

**ಮರಣ:** ಇವರ ಕುಟುಂಬಗಳಲ್ಲಿ ಯಾರಾದರೂ ಮರಣ ಹೊಂದಿದರೆ 'ಕೊಟ್ಟ್ ಕೊಂಬು' ವಾದ್ಯ ಮಾಡುವುದರ ಮೂಲಕ ಊರಿನವರಿಗೆ ಸುದ್ದಿ ಮುಟ್ಟಿಸುವ ಕೆಲಸ ಮಾಡುತ್ತಾರೆ. ಕೆಲವು ಕಡೆ ಕೊಡವ ಯಜಮಾನರಿಂದ ಕೋವಿ ಪಡೆದು ಬಂದು ಜೋಡಿ ಗುಂಡು ಹಾರಿಸುವುದೂ ಇದೆ. ಈ ಸಮಯದಲ್ಲಿ ಸತ್ತವರ ಮುಂದೆ ಅಂಗಕಳಿ ನೃತ್ಯ ಮಾಡುತ್ತಾರೆ. ಹಾಗೂ ಸತ್ತವರ ಜೀವನ ಸಂಗತಿಗಳನ್ನು ಹೇಳಿಕೊಂಡು ಅಳುತ್ತಾ ಹಾಡುತ್ತಾರೆ. ಸತ್ತ ವ್ಯಕ್ತಿಯ ತಲೆಯ ಸಮೀಪ ಹರಳೆಣ್ಣೆ ದೀಪವನ್ನು ಹಚ್ಚಿಟ್ಟಿರುತ್ತಾರೆ. ಇದರ ಬಳಿ ಭತ್ತ ತುಂಬಿದ 'ಹುತ್ತರಿ ಕುಕ್ಕೆ', ಮತ್ತೊಂದು ಕುಕ್ಕೆಯಲ್ಲಿ ಅಕ್ಕಿ ಇಟ್ಟು ಅದರ ಮೇಲೆ ತೆಂಗಿನಕಾಯಿ ಇಟ್ಟು ಇದಕ್ಕೆ ಕಬ್ಬಿಣದ ಬಾಣವನ್ನು ಚುಚ್ಚಿರುತ್ತಾರೆ. ಕೊಡವರು ಸತ್ತಾಗ ಕುಣಿಯುವ ಅಂಗಕಳಿಯಂತೆ ಇಲ್ಲೂ 'ಕೆಟ್ಟಿರೋ ಅಯ್ಯನೆ' ಎಂದು ಹಾಡುತ್ತ ಹೆಣದತ್ತ ಕೈ ನೀಡಿ ಡೋಲಿನ ಬಡಿತಕ್ಕೆ ಅನುಗುಣವಾಗಿ ದೀಪದ ಸುತ್ತ ಸಾವುಗುಣಿತವನ್ನು ಮಾಡುತ್ತಾರೆ.

ಇವರಲ್ಲಿ ಸತ್ತವರನ್ನು ಹೂಳುವುದು ಮತ್ತು ಸುಡುವುದು ಎರಡೂ ಕ್ರಮ ರೂಢಿಯಲ್ಲಿದೆ. ಸ್ಮಶಾನಕ್ಕೆ ಹೋಗುವವರು ಕೊಡವ ವೇಷ ಧರಿಸಿ ಹೋಗುತ್ತಾರೆ. ಮುತ್ತೈದೆ ತೀರಿಕೊಂಡರೆ ತಲೆಯ ಮೇಲೆ ಕೆಂಪು ಸೀರೆ ಹಾಗು ಬಿಳಿ ಸೀರೆ ಇಡುವ ಪದ್ಧತಿ ಇವರಲ್ಲಿದೆ. ಯಾರೇ ಸತ್ತರು

ಹನ್ನೊಂದನೇ ದಿನದ ತಿಥಿಯಂದು ಹೆಂಗಸರೆಲ್ಲ ಬಿಳಿ ಸೀರೆ ಧರಿಸಿ ಸಮಾಧಿ ಬಳಿಗೆ ಹೋಗುತ್ತಾರೆ.

ಕೆಂಬಟ್ಟಿಯರಲ್ಲಿ ಗರ್ಬಿಣಿ ಮರಣ ಹೊಂದಿದರೆ ಆಕೆಯ ಹೊಟ್ಟೆಯಿಂದ ಭ್ರೂಣವನ್ನು ಹೊರತೆಗೆದು ಅಕ್ಕಪಕ್ಕ ಒಂದೇ ಗುಂಡಿಯಲ್ಲಿ ಹೂಳುತ್ತಾರೆ. ಹೀಗೆ ಮಾಡದೇ ಹೋದರೆ ದೇಶಕ್ಕೆ ಹಾಗೂ ತಮಗೆ ರೋಗ, ಬರ, ಕೇಡುಗಳು ಬರಬಹುದೆಂಬ ಭಯವೇ ಇದಕ್ಕೆ ಕಾರಣವಾಗಿತ್ತು ಎನ್ನಲಾಗಿದೆ.[೨೫] ಆದರೆ ಈಗೆಲ್ಲ ಆಸ್ಪತ್ರೆಗಳಲ್ಲಿಯೇ ಹೆರಿಗೆಯಾಗುವುದರಿಂದ ಇಂಥ ಪ್ರಸಂಗಗಳು ನಿಂತುಹೋಗಿರುವುದನ್ನು ಗಮನಿಸಲಾಗಿದೆ.

**ಆ. ವಿವಾಹ ಪದ್ಧತಿ**

ಕೆಂಬಟ್ಟಿಯರಲ್ಲಿ ಮದುವೆ ಕಾರ್ಯಗಳು ಕೊಡವರು ಅನುಸರಿಸುವ ಕ್ರಮಗಳಂತೆಯೇ ನಡೆಯುವುದು ಕಂಡುಬರುತ್ತದೆ. ಮದುವೆಯ ಸಿದ್ಧತೆಗಳು, ಧಾರಾ ಮುಹೂರ್ತ, ಶಾಸ್ತ್ರ–ಸಂಪ್ರದಾಯಗಳು ಕೊಡವ ಮನೆತನದ ಸಂಪ್ರದಾಯಗಳಂತೆಯೇ ನೆರವೇರುತ್ತವೆ. ಮದುವೆಗೆ ಮೊದಲು ಹೆಣ್ಣು ಮತ್ತು ಗಂಡುಗಳನ್ನು ಗೊತ್ತು ಮಾಡುವ ಕೆಲಸ ನಡೆಯುತ್ತದೆ. ಇವರಲ್ಲಿಯೂ ಮದುವೆಯಂತಹ ಶುಭ ಕಾರ್ಯಗಳಿಗೆ ನೆರವಾಗುವುದಕ್ಕೆ 'ಅರುವ' ಇರುತ್ತಾನೆ. ಇವನ ನೇತೃತ್ವದಲ್ಲಿಯೇ ಹೆಣ್ಣು ಮತ್ತು ಗಂಡುಗಳ ಸಂಬಂಧ, ಅವರಿಗಿರುವ ಆಸ್ತಿ, ವ್ಯವಹಾರಗಳ ಬಗ್ಗೆ ಪರಸ್ಪರ ವಿಚಾರ ವಿನಿಮಯ ಮಾಡಿಕೊಳ್ಳಲಾಗುತ್ತದೆ. ಪರಸ್ಪರ ಒಪ್ಪಿತವಾದ ಮೇಲೆ ಜಾತಕ ನೋಡಿ ಅಥವಾ ಹೂವನ್ನು ಎತ್ತುವ ಮೂಲಕ ವಿವಾಹ ನಿಶ್ಚಯಿಸುವುದುಂಟು. ಈ ಸಮಯದಲ್ಲಿ ಬಿಳಿ ಹೂ ಬಂದರೆ ಮದುವೆಗೆ ದಾರಿ ಸುಗಮವಾದಂತೆ. ಕೆಲವು ಸಲ ಇದಾವುದನ್ನೂ ಗಮನಿಸದೆ ಮುಂದುವರೆದು ಮದುವೆಗಳು ನಿರ್ಧಾರವಾಗುತ್ತವೆ.

ಇಲ್ಲಿ ಗಂಡು ಮತ್ತು ಹೆಣ್ಣು ಒಂದೇ ಮನೆತನದ(ಒಕ್ಕ)ದವರಾಗಿರಬಾರದೆಂಬ ನಿರ್ಬಂಧವಿದೆ. ಗಂಡು ಮತ್ತು ಹೆಣ್ಣಿನ ಮನೆಗಳಲ್ಲಿ ಪ್ರತ್ಯೇಕವಾಗಿ ಮುಹೂರ್ತ ನಡೆಯುತ್ತದೆ. ಇವರ ಮನೆಗಳ ಮುಂದೆ ಚಪ್ಪರ ಹಾಕಿರುತ್ತಾರೆ. ಈ ಚಪ್ಪರಕ್ಕೆ ಹಾಲು ಬರುವ ಒಂದು ಮರದ ಕಂಬವಿರಲೇಬೇಕು. ಈ ಕಂಬದೊಂದಿಗೆ ಏಳು, ಒಂಬತ್ತು, ಹನ್ನೆರಡು ಸಂಖ್ಯೆಯಲ್ಲಿ ಇತರ ಕಂಬಗಳನ್ನು ನೆಡುತ್ತಾರೆ.

ಮದುವೆಯ ಮಹೂರ್ತದ ದಿನದಂದು ವಧು–ವರರನ್ನು ಶಾಸ್ತ್ರೋಕ್ತವಾಗಿ ಸಿದ್ಧಗೊಳಿಸುತ್ತಾರೆ. ಸಿದ್ಧಳಾದ ವಧುವನ್ನು ಚಪ್ಪರದಡಿಯಲ್ಲಿ ಕೂರಿಸುತ್ತಾರೆ. ಶಾಸ್ತ್ರದ ನೆಲೆಯಲ್ಲಿ ಮಂಡೆಗರಿ ಚಾಪೆಯನ್ನು ಹಾಸಿ, ಮುಕ್ಕಾಲಿ ಮಣೆಗಳನ್ನು ಇಟ್ಟಿರುತ್ತಾರೆ. ಈ ಸಮಯದಲ್ಲಿ ಹೆಂಗಸರು ಕೊಡವ ಮಹಿಳೆಯರ ಮಾದರಿಯಲ್ಲಿ ಸೀರೆಯುಟ್ಟು ತಲೆಗೆ ಪಟ್ಟೋಳಿ(ಕೆಂಪು ವಸ್ತ್ರ)ಯನ್ನು ಇಳಿಬಿಟ್ಟಿರುತ್ತಾರೆ. ವಧುವಿಗೂ ಇದೇ ವೇಷವಿರುತ್ತದೆ. ವಧುವನ್ನು ಅಲಂಕರಿಸಿ 'ಪತ್ತಾಕ' ಕಟ್ಟಿ ತಳಿಯಕ್ಕಿ ಬೊಳಕು ಸಹಿತವಾಗಿ ಬೆಳಗೊಡೆ ಹಿಡಿದು ನಡೆಮುಡಿಯ ಮೇಲೆ ಸ್ನಾನದ ಮನೆಯ

ಪಾರ್ಶ್ವದಿಂದ ಚಪ್ಪರದಲ್ಲಿ ಮುಹೂರ್ತ ಮಾಡುವ ಸ್ಥಳಕ್ಕೆ ಕರೆತಂದು ಮುಕ್ಕಾಲಿ ಮಣೆಯ ಮೇಲೆ ಕೂರಿಸುತ್ತಾರೆ. ಇಲ್ಲಿ ಕೊಡವರಂತೆಯೇ ಇವರಲ್ಲಿಯೂ ಹೆಣ್ಣಿಗೆ ತಾಯಿಯೇ ತಾಳಿಕಟ್ಟುವುದು ರೂಢಿಯಲ್ಲಿದೆ. ಈ ಸಮಯದಲ್ಲಿ ಗಂಡಸರೆಲ್ಲರೂ ಕೊಡವ ಪುರುಷ ವೇಷಧಾರಿಗಳಾಗಿರುತ್ತಾರೆ.

ನಂತರ ಸೇಸೆ(ಅಕ್ಷತೆ) ಹಾಕುವ ಕಾರ್ಯ ನಡೆಯುತ್ತದೆ. ಪೂರ್ವ ದಿಕ್ಕಿಗೆ ಮುಖಮಾಡಿ ಕುಳಿತಿರುವ ವಧುವಿಗೆ ನೆಂಟರು ಬಂಧುಗಳು ಮೂರು ಸಲ ಅಕ್ಕಿ ಸೇಸೆ ಹಾಕುತ್ತಾರೆ. ಜೊತೆಗೆ ಹಿತ್ತಾಳೆ ಗಿಂಡಿಯಲ್ಲಿನ ಹಾಲನ್ನು ಬಾಯಿಗಿಟ್ಟು ಕುಡಿಸುತ್ತಾರೆ. ಹೀಗೆ ಶಾಸ್ತ್ರಗಳು ನಡೆಯುತ್ತಿರುವ ಸಂದರ್ಭದಲ್ಲಿ ವಧುವಿನ ಮನೆಯ ಮುಂದೆ ಮೂರು ಅಡಿ ಎತ್ತರದ ಬಾಳೆ ಕಂದುಗಳನ್ನು ತುದಿ ಸಮ ಮಾಡಿ ಮೇಲೆ ಬಾಳೆ ಪಟ್ಟಿ ಕಟ್ಟಿ ಹೂವು ಸಿಕ್ಕಿಸಿ ಗೂಟಕ್ಕೆ ಹೊಡೆದು ನಿಲ್ಲಿಸುತ್ತಾರೆ. ಇದನ್ನು 'ಬಾಳೆ ಬಿರುದು' ಎಂದು ಕರೆಯುತ್ತಾರೆ. ಇದು ಗಂಡಿನ ಸೋದರ ಮಾವನಿಗೆ ಗೌರವದ ಸಂಕೇತವಾಗಿ ಏರ್ಪಡಿಸಲಾಗುವಂತದ್ದು. ಹೀಗೆ ನಿಲ್ಲಿಸಿದ ಬಾಳೆ ಕಂಬಗಳು ಐದು, ಏಳು, ಒಂಬತ್ತು, ಹನ್ನೆರಡು ಸಂಖ್ಯೆಯಲ್ಲಿಯೇ ಇರುತ್ತವೆ. ವಧು–ವರರನ್ನು ಮನೆಯ ಮುಂದೆ ನಿಲ್ಲಿಸಿ ಇವರ ಜೊತೆ ಬಂದ ನೆಂಟರು ಇವುಗಳನ್ನು ವಡಿಕತ್ತಿಯಿಂದ ಕತ್ತರಿಸುತ್ತಾರೆ.

ಇತ್ತ ಗಂಡಿನ ಮನೆಯಲ್ಲಿಯೂ ಹೆಣ್ಣಿನ ಮನೆಯಲ್ಲಿ ನಡೆಯುವಂತೆಯೇ ಶಾಸ್ತ್ರಗಳು ನಡೆಯುತ್ತವೆ. ನಂತರ ವರ ವಧುವಿನ ಮನೆಗೆ ಬಂದು ಬಾಳೆ ಬಿರುದು ಪಡೆದು ಒಳ ಪ್ರವೇಶ ಮಾಡುತ್ತಾನೆ. ಇಲ್ಲಿ ವಧು–ವರರನ್ನು ಮುಕ್ಕಾಲಿ ಮಣೆಯ ಮೇಲೆ ಕುಳ್ಳಿರಿಸಿ ದಂಪತಿ ಮಹೂರ್ತ ಮಾಡುತ್ತಾರೆ. ಎಲ್ಲಾ ಶಾಸ್ತ್ರಗಳನ್ನು ಮುಗಿಸಿ, ಔತಣವಾದ ನಂತರ ವರ ತಾನು ವರಿಸಿದ ಹೆಣ್ಣನ್ನು ತನ್ನ ಮನೆಗೆ ಕರೆದುಕೊಂಡು ಹೋಗುತ್ತಾನೆ.

ವಧು–ವರರ ವೇಷ ಕೊಡವರ ಸಾಂಪ್ರದಾಯಿಕ ವೇಷದಂತೆಯೇ ಇರುತ್ತದೆ. ವಧು ತನ್ನ ಬಲ ಎದೆಯ ಮೇಲೆ ಬರುವಂತೆ ಬಲಮುರಿ ಸೆರಗಿನ ಸೀರೆಯನ್ನು ಉಟ್ಟು ತುಂಬುತೋಳಿನ ರವಿಕೆಯನ್ನು ಧರಿಸುತ್ತಾಳೆ. ಕೊರಳಿಗೆ ತನ್ನ ತಾಯಿ ಕಟ್ಟಿದ ತಾಳಿ ಪದಕವಾದ 'ಪತ್ತಾಕ', ಕರಿಮಣಿ, ಪೊಮ್ಮಾಲೆ, ಕಿವಿಗೆ ನಾಗರೂಪವಿರುವ ಪುತ್ಥಳಿ ಕೆತ್ತಿದ ಓಲೆ ಹಾಕಿರುತ್ತಾಳೆ. ಹಾಗೂ ವರ ಬಿಳಿ ಪಾನಿಮಂಡೆತುಣಿ(ಬಿಳಿ ಪೇಟ) ಕುಪ್ಪಸದಟ್ಟಿ, ಪೀಚೆಕತ್ತಿ, ಉಮ್ಮತ್ತಿ, ಚಂಗಳ ಹಾಗೂ ವಡಿಕತ್ತಿಗಳನ್ನು ಧರಿಸುತ್ತಾನೆ. ಕೆಂಬಟ್ಟಿಯರಲ್ಲಿ ಎಲ್ಲರೂ ಈ ಆಭರಣಗಳನ್ನು ಹೊಂದಲು ಶಕ್ತರಾಗಿಲ್ಲ. ಹಾಗಾಗಿ ಕೆಲವು ಸಂದರ್ಭಗಳಲ್ಲಿ ಇಂಥ ಆಭರಣಗಳನ್ನು ಕೊಡವ ಯಜಮಾನರಿಂದ ಪಡೆದು ಅದರ ಅಗತ್ಯ ಮುಗಿದ ಕೂಡಲೇ ಹಿಂದಿರುಗಿಸುತ್ತಾರೆ.

ಕೆಂಬಟ್ಟಿಯರಲ್ಲಿ ಒಂದೇ ಕುಟುಂಬದೊಳಗೆ ಮದುವೆ ನಿಷೇಧವಿದ್ದರೂ ಕೆಲವೊಮ್ಮೆ ಪ್ರೇಮ ವಿವಾಹಗಳು ನಡೆಯುತ್ತವೆ. ಇದಕ್ಕೆ ತಪ್ಪುಕಾಣಿಕೆಯನ್ನು ನೀಡಿ ಕ್ಷಮೆ ಕೇಳಿದರೆ ಅದು ಸಮ್ಮತವಾಗುತ್ತದೆ ಎಂಬ ನಂಬಿಕೆಯಿದೆ. ಇವರಲ್ಲಿ ಕೂಡಾವಳಿ ವಿವಾಹ, ವಿಧವಾ ವಿವಾಹಗಳೂ ಜಾರಿಯಲ್ಲಿವೆ. ಅಣ್ಣ ಆಕಸ್ಮಿಕವಾಗಿ ತೀರಿ ಹೋದಾಗ ಮೈದುನನೇ ಅತ್ತಿಗೆಯನ್ನು

ಮದುವೆಯಾಗಲು ಅವಕಾಶವಿದೆ. ಕೊಡವರಲ್ಲಿಯೂ ಇದೇ ಕ್ರಮವಿರುವುದು ಇಲ್ಲಿ ಗಮನಿಸಬೇಕಾದ ವಿಚಾರ.

ಕೆಂಬಟ್ಟಿಯರಲ್ಲಿ ಅಂತರ್ಜಾತೀಯ ವಿವಾಹಗಳು ಪ್ರೀತಿ ಪ್ರೇಮದ ಕಾರಣದಿಂದ ನಡೆದಿವೆ. ಬ್ರಾಹ್ಮಣ, ಅಮ್ಮಕೊಡವ, ಲಿಂಗಾಯತ, ಗೌಡ, ನಾಯರ್, ಪೆಗ್ಗಡೆ, ಕುರುಬ, ನಾಯಿಂದ, ಆದಿಕರ್ನಾಟಕ, ಬಿಲ್ಲವ, ತುಳುಗೌಡ, ಐರಿರ, ಎರವ, ಕುಂಬಾರ ಮೊದಲಾದ ಜಾತಿಯ ಹೆಣ್ಣು ಗಂಡುಗಳೊಂದಿಗೆ ಇವರು ವಿವಾಹವಾಗಿದ್ದಾರೆ.[೨೬]

**ಇ. ಹಬ್ಬಗಳು**

ಕೊಡಗಿನಲ್ಲಿ ಇವರ ಹಬ್ಬಗಳನ್ನು ಮಳೆಬಿಟ್ಟ ಕಾಲದ ಹಬ್ಬಗಳು, ಚಳಿಗಾಲದ ಹಬ್ಬಗಳು ಎಂದು ಗುರುತಿಸಲಾಗಿದೆ. ಮಳೆಬಿಟ್ಟ ಕೂಡಲೇ ಬರುವ ಹಬ್ಬ ಕೈಲ್ ಮುಹೂರ್ತ, ನಂತರ ಕಾವೇರಿ ಸಂಕ್ರಮಣ ಹಾಗೂ ಚಳಿಗಾಲದ ಹಬ್ಬವಾಗಿ ಹುತ್ತರಿ ಬರುತ್ತದೆ. ಈ ಮೂರೂ ಹಬ್ಬಗಳನ್ನು ಪ್ರಮುಖವಾಗಿ ಆಚರಿಸುವವರು ಕೊಡವರಾದರೂ ಇವರೊಂದಿಗೆ ಇಲ್ಲಿನ ಗೌಡ ಜನಾಂಗ, ಎರವರು ಹಾಗೂ ಕೆಂಬಟ್ಟಿಯರೂ ಆಚರಿಸುತ್ತಾರೆ.

ಕೆಂಬಟ್ಟಿಯರು ಕೊಡವರನ್ನು ಸಂಪೂರ್ಣವಾಗಿ ಅನುಕರಿಸುವುದರಿಂದ ಕೊಡವರು ಆಚರಿಸುವ ಪ್ರಮುಖ ಹಬ್ಬಗಳಾದ ಕೈಲ್‌ಮುಹೂರ್ತ, ಕಾವೇರಿ ಸಂಕ್ರಮಣ ಮತ್ತು ಹುತ್ತರಿಗಳನ್ನು ಇವರೂ ಆಚರಿಸಿಕೊಂಡು ಬರುತ್ತಿದ್ದಾರೆ. ಹಾಗಾಗಿ ಕೃಷಿಯಾಧಾರಿತವಾದ ಈ ಮೂರೂ ಹಬ್ಬಗಳನ್ನು ಈ ಭಾಗದಲ್ಲಿ ಪ್ರಸ್ತಾಪಿಸದೆ ಕೆಂಬಟ್ಟಿಯರು ವಿಶೇಷವಾಗಿ ಅಚರಿಸುವ ಮತ್ತು ಇವರದೇ ಆದಂತಹ, ಅನನ್ಯತೆಯ ಭಾಗವಾಗಿ ಕಾಣಿಸಿಕೊಳ್ಳುತ್ತಿರುವ ಧಾರ್ಮಿಕ ಹಬ್ಬಗಳೆಂದು ಗುರುತಿಸಿಕೊಂಡಿರುವ, ಹಾಗೂ ಇವರಿಂದಲೇ ಪ್ರಸಿದ್ಧಿಗೆ ಬಂದಿರುವ 'ಪನ್ನಂಗಾಲ ತಮ್ಮೆ ಹಬ್ಬ' ಮತ್ತು ಇದರೊಂದಿಗೆ ಬೆಸೆದು ಕೊಂಡಿರುವ ಆಚರಣೆಗಳನ್ನು ವಿವರಿಸುವ ಪ್ರಯತ್ನ ಮಾಡಲಾಗಿದೆ. ಪನ್ನಂಗಾಲ ತಮ್ಮೆ ಹಬ್ಬದ ಆಚರಣೆಯ ಹಿಂದಿನ ಮತ್ತು ನಂತರದ ದಿನಗಳಲ್ಲಿ ನಡೆಯಬಹುದಾದ ಕೆಲವು ಕಟ್ಟುಪಾಡುಗಳು ಮತ್ತು ನಿಯಮ, ನಿಷೇಧಗಳಿಗೆ ಕೆಂಬಟ್ಟಿಯರು ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದ್ದಾರೆ.

**ಎತ್ತು ಪೊರಾಟ್ ಹೋಗುವುದು:** ಪನ್ನಂಗಾಲತಮ್ಮೆ ದೇವಿಗೆ ಹರಕೆಯನ್ನು ಹೊತ್ತವರು ಹರಕೆಯ ವಸ್ತುಗಳನ್ನು ಎತ್ತಿನ ಮೇಲೆ ಹೇರಿಕೊಂಡು ಹೋಗಿ ಹರಕೆಯೊಪ್ಪಿಸುವುದನ್ನೇ 'ಎತ್ತು ಪೊರಾಟ್ ಹೋಗುವುದು' ಎನ್ನುತ್ತಾರೆ. 'ಪೊರಾಟ್' ಎಂದರೆ 'ಹೇರಾಟ' 'ಹೇರುವುದು' ಎಂಬರ್ಥವಿದೆ. ಎತ್ತುಗಳನ್ನು ತೊಳೆದು ಐನ್‌ಮನೆಯ ಎದುರಿನ ಕಲ್ಲುಬೋಟಿಗೆ ತಂದು ನಿಲ್ಲಿಸುತ್ತಾರೆ. ಅದರ ಮೇಲೆ ಎರಡೂ ಕಡೆಗೂ ಸಮವಿರುವಂತೆ ಗೋಣಿಚೀಲದಿಂದ ಮಾಡಿದ 'ಕವುಂದಿ'ಯನ್ನು ಹೊದಿಸುತ್ತಾರೆ. ಇದರ ಮೇಲೆ ಹುಲ್ಲು ಹಾಕುತ್ತಾರೆ. ನಂತರ ಕೆಂಪು ವಸ್ತ್ರ, ಕೊಂಬಿಗೆ ಕೆಂಪುಬಣ್ಣ, ಕೊರಳಿಗೆ ಹೂವು ಮತ್ತು ಘಂಟೆಗಳನ್ನು ಕಟ್ಟಿ ಅಲಂಕರಿಸುತ್ತಾರೆ. ಮಧ್ಯಾಹ್ನದ

ಊಟವನ್ನು ಮುಗಿಸಿಕೊಂಡು ಎಲ್ಲರೂ ಹೊರಡಲು ಸಿದ್ಧರಾಗುತ್ತಾರೆ. ಎತ್ತಿನ ಮೇಲೆ ಹಾಕಿರುವ ಎರಡೂ ಕಡೆಯ ಚೀಲಗಳಿಗೆ ತಲಾ ಐದು ಸೇರು ಅಕ್ಕಿ, ಒಂದು ತೆಂಗಿನ ಕಾಯಿ, ಬೆಲ್ಲ ಹಾಕುತ್ತಾರೆ. ಇದನ್ನು 'ಪೋರ್' ತುಂಬುವುದು ಎನ್ನುತ್ತಾರೆ. ಹೊರಡುವ ಸಮಯ ಸಮೀಪಿಸುತ್ತಿದ್ದಂತೆ ನೆಲ್ಲಕ್ಕಿ ನಡುಬಾಡೆಯಿಂದ ದುಡಿ ಬಾರಿಸುತ್ತಾ, ದೇವರನ್ನು ಪ್ರಾರ್ಥಿಸಿ, ಹಾಡುತ್ತಾ ಕಲ್ಲುಬೋಟಿಯ ಹತ್ತಿರ ಬರುತ್ತಾರೆ. ನಂತರ ಎತ್ತಿನೊಂದಿಗೆ ಎಲ್ಲರೂ ಮೂರು ಸುತ್ತು ಪ್ರದಕ್ಷಿಣೆ ಬಂದು ದೇವಸ್ಥಾನದ ಕಡೆಗೆ ನಡೆಯುತ್ತಾರೆ. ಅಲ್ಲಿ ತಾವು ತಂದ ಹರಕೆಯ ವಸ್ತುಗಳನ್ನು ದೇವರಿಗೆ ಅರ್ಪಿಸಿ ಬರುತ್ತಾರೆ.

**ಪನ್ನಂಗಾಲ ತಮ್ಮೆ ಹಬ್ಬ:** ಪನ್ನಂಗಾಲ ತಮ್ಮೆ ಇಗ್ಗುತಪ್ಪ ದೇವರ ಸಹೋದರಿ ಮತ್ತು ಕೆಂಬಟ್ಟಿ ಕುಲದವರು ಆರಾಧಿಸಿಕೊಂಡು ಬರುತ್ತಿರುವ ಮುಖ್ಯ ದೇವತೆ. ಈ ದೇವತೆಯ ಹೆಸರಿನಲ್ಲಿ ವಾರ್ಷಿಕವಾಗಿ ಮತ್ತು ಎರಡು ವರ್ಷಗಳಿಗೊಮ್ಮೆ ಮಾಡುವ ಈ ಹಬ್ಬವನ್ನು ಎರಡು ದಿನಗಳವರೆಗೆ ಮಾಡಿ ಸಂಭ್ರಮಿಸುತ್ತಾರೆ. ಒಂದನೇ ದಿನದಂದು 'ಕೊಡೆ ಬರುವ ಹಬ್ಬ' ಮತ್ತು ಎರಡನೇ ದಿನ 'ಕುರುಂದ ಹಬ್ಬ' ವೆಂದು ಗುರುತಿಸಿಕೊಂಡು ಆಚರಿಸುತ್ತಾ ಬಂದಿದ್ದಾರೆ.

ಈ ಹಬ್ಬವನ್ನು ಎರಡು ದಿನಗಳಗಲ್ಲಿ ಆಚರಿಸುವುದರೊಂದಿಗೆ ಸಣ್ಣ ಹಬ್ಬ ಮತ್ತು ದೊಡ್ಡ ಹಬ್ಬ ಎಂದು ಮಾಡಿಕೊಂಡು ವಾರ್ಷಿಕವಾಗಿ ಸಣ್ಣ ಹಬ್ಬ, ಮತ್ತು ಎರಡು ವರ್ಷಗಳಿಗೊಮ್ಮೆ ದೊಡ್ಡ ಹಬ್ಬವೆಂದು ಅತ್ಯಂತ ಶ್ರದ್ಧಾ ಭಕ್ತಿಯಿಂದ, ಹಲವು ನಿಯಮ, ನಿಷೇಧಗಳನ್ನು ಅಳವಡಿಸಿಕೊಂಡು ಆಚರಿಸುತ್ತಾ ಬಂದಿದ್ದಾರೆ. ಈ ವರ್ಷ ದೊಡ್ಡ ಹಬ್ಬಕ್ಕೆ ಕೆಂಬಟ್ಟಿಯರು ತಯಾರಿ ನಡೆಸುತ್ತಿದ್ದಾರೆ.

ಹಬ್ಬದ ದಿನವನ್ನು ನಿಶ್ಚಯ ಮಾಡಿದ ನಂತರ ಇಡೀ ಗ್ರಾಮದಲ್ಲಿ ಯಾವುದೇ ರೀತಿಯ ಮಾಂಸಾಹಾರದ ಬಳಕೆ, ಮದ್ಯ ಸೇವನೆ, ಪ್ರಾಣಿ ಹಿಂಸೆ, ಬೇಟೆ, ಗುಂಡು ಹಾರಿಸುವುದು ನಿಷೇಧವಿರುತ್ತದೆ. ಅಲ್ಲದೆ ದೇವರನ್ನು ಹೊರುವವನು ಮನೆಯ ಹೊರಗೆ ಮಲಗಬೇಕು, ಅವನು ಯಾರಿಗೂ ಬೈಯ್ಯಬಾರದು, ಚಾಡಿ ಹೇಳಬಾರದು ಮೊದಲಾದ ಕಟ್ಟುಪಾಡುಗಳನ್ನು ಹಾಕಿಕೊಂಡು ಪ್ರಾಮಾಣಿಕವಾಗಿ ಇವುಗಳನ್ನು ಪಾಲಿಸಿಕೊಂಡು ಬರುತ್ತಿದ್ದಾರೆ. ಹೀಗೆ ನಿಷೇಧಗಳನ್ನು ರೂಪಿಸಿಕೊಳ್ಳುವ ವಿಧಾನಕ್ಕೆ 'ಕಟ್ಟು ಹಾಕುವುದು' ಎನ್ನುತ್ತಾರೆ. ದೇವರ ಕಾರ್ಯಗಳಲ್ಲಿ ಈ ರೀತಿ ನಡೆದುಕೊಂಡರೆ ಮಾತ್ರ ಅನುಗ್ರಹ ದೊರೆಯುತ್ತದೆ ಎಂಬ ನಂಬಿಕೆ ಮತ್ತು ಭಯ ಇವುಗಳ ಮೂಲವಿರಬೇಕು. ಈ ಮೇಲಿನ ಎಲ್ಲಾ ನಿಯಮಗಳು ಮೂರರಿಂದ ಹದಿನೈದು ದಿನಗಳವರೆಗೆ ಜಾರಿಯಲ್ಲಿರುತ್ತವೆ. ದೊಡ್ಡ ಹಬ್ಬಕ್ಕೆ ಹದಿನೈದು ದಿನ ಹಾಗೂ ಸಣ್ಣ ಹಬ್ಬಕ್ಕೆ ಹತ್ತು ದಿನ ಮೊದಲೇ ಕಟ್ಟು ಬೀಳುತ್ತದೆ. ಹಬ್ಬದ ದಿನದ ಆಚರಣೆಗಳಿಗಿಂತ ಅದರ ಹಿಂದಿನ ದಿನಗಳ ಸಿದ್ಧತೆ ವಿಜೃಂಭಣೆಯಿಂದ ವ್ಯವಸ್ಥಿತವಾಗಿ ನಡೆಯುವಂತದ್ದು ಇವರಲ್ಲಿ ವಿಶೇಷವಾಗಿದೆ. ಇಂದಿಗೂ ಈ ಪದ್ಧತಿ ಮುಂದುವರೆದುಕೊಂಡು ಬರುತ್ತಿದೆ.

ಸಣ್ಣ ಹಬ್ಬಕ್ಕೆ ಪನ್ನಂಗಾಲತಮ್ಮೆ ದೇವಸ್ಥಾನದಲ್ಲಿಯೇ ಕಟ್ಟು ಬಿದ್ದರೆ, ದೊಡ್ಡ ಹಬ್ಬಕ್ಕೆ ಅಮ್ಮಂಗೇರಿಯಲ್ಲಿ ಮೇಚಂಡ ಮನೆಯ ಬಳಿ ಕಟ್ಟು ಬೀಳುತ್ತದೆ. ಈ ಕೆಲಸವನ್ನು ಪಾರುಪತ್ಯಗಾರರಾದ ಕೊಡವ, ಕರ್ತಂಡ, ಅಂಜಪರವಂಡ, ಅಪ್ಪಾರಂಡ ಹಾಗೂ ಐರಿರ ಮುಖ್ಯಸ್ಥರು ಸೇರುತ್ತಾರೆ. ಅಲ್ಲದೆ ಮೇರಿಯಂಡ, ಕೊಟ್ಟೊಳಕೆ, ಅರೆಯಂಡ ಮೊದಲಾದವರ ಜೊತೆಗೆ ಕೆಂಗೋಲ್, ಅಂಜರಿಕೆ, ಮಠತ್ ಕೆಂಬಟ್ಟಿ ಕುಡಿಗಳು ಸೇರುತ್ತಾರೆ. ನಂತರ 'ಕಣಿಯ' ಈ ಎಲ್ಲರ ಸಮ್ಮುಖದಲ್ಲಿ ಹಬ್ಬವನ್ನು ನಿಶ್ಚಯ ಮಾಡುತ್ತಾನೆ. ನಂತರ ಎಲ್ಲರೂ ಹಬ್ಬದ ಸಿದ್ಧತೆ ಮತ್ತು ಹಬ್ಬ ಸಂಬಂಧಿ ನಿಯಮಗಳಿಗೆ ಬದ್ಧರಾಗುತ್ತಾರೆ. ಕೆಂಬಟ್ಟಿ, ಮೇದ ಮತ್ತು ಕಣಿಯ ಸಮೂಹದವರಿಲ್ಲದೇ ಕೊಡಗಿನಲ್ಲಿ ಯಾವ ಹಬ್ಬಗಳೂ ನಡೆಯುವುದಿಲ್ಲ. ಏಕೆಂದರೆ ಇವರ ಸಹಾಯ ಅನಿವಾರ್ಯವಿರುತ್ತದೆ. ಹಬ್ಬದ ಆಚರಣೆ ಮತ್ತು ಹಬ್ಬದ ಸುತ್ತ ಇರುವ ಅನೇಕ ಪದ್ಧತಿಗಳು, ನಿಷೇಧಗಳು ಕೆಂಬಟ್ಟಿ ಸಮುದಾಯದಲ್ಲಿ ಬಹಳ ಸಂಕೀರ್ಣವಾಗಿರುವುದು ಕಂಡುಬರುತ್ತದೆ.

**ಕೊಡೆ ಬರುವ ಹಬ್ಬ:** ಮೊದಲೇ ಸಿದ್ಧ ಮಾಡಿಕೊಂಡಿದ್ದ ಕೊಡೆಗಳನ್ನು ಪನ್ನಂಗಾಲದ ಗದ್ದೆಯ ಹತ್ತಿರ ತರುವ ಕಾರ್ಯಗಳು ನಡೆಯುತ್ತವೆ. ದೊಡ್ಡ ಕೊಡೆಯನ್ನು ಕಣಿಯ ಹಾಗೂ ಮಾದಂಡ ಕುಲದ ಕೆಂಬಟ್ಟಿ ಹಿಡಿದರೆ, ಸಣ್ಣ ಕೊಡೆಯನ್ನು ಕುಂಜಿಲದ ಕಲ್ಯಾಟಂಟ ಕೆಂಬಟ್ಟಿ ಹಿಡಿದು ಬರುತ್ತಾರೆ. ಬಂದು ಕಕ್ಕಬೆ ನದಿಯ ಸಮೀಪ ಸ್ವಲ್ಪ ಸಮಯ ತಂಗುತ್ತಾರೆ. ನಂತರ ಕೊಡೆ ಹಿಡಿದೇ ಓಡುವ ಓಟ ನಡೆಯುತ್ತದೆ. ಓಡಿ ಓಡಿ ಪನ್ನಂಗಾಲ ಗದ್ದೆಯ ನಡುವೆ ಬಂದು ನಿಲ್ಲುತ್ತವೆ. ಇಲ್ಲಿ ಕೊಡೆಗಳನ್ನು ನೇರವಾಗಿ ಹಿಡಿದು ನಿಲ್ಲುತ್ತಾರೆ. ಈ ಸಮಯದಲ್ಲಿ ದೊಡ್ಡ ಕೊಡೆ ತಿರುಗುತ್ತಾ ಕೆಲವು ಅಡಿಗಳಷ್ಟು ಕೊರೆಯುತ್ತದೆ. ತಿರುಗಿಸಿದರೆ ಸಹಜವಾಗಿ ಕೊಡೆಯ ಹಿಡಿಯಂತಿರುವ ಭಾಗ ಚೂಪಾಗಿರುವುದರಿಂದ ಆಳಕ್ಕೆ ಇಳಿಯುತ್ತದೆ. ಈ ಜಾಗ ಪನ್ನಂಗಾಲ ತಮ್ಮೆ ನೆಲೆ ನಿಂತ ಸ್ಥಳವಾಗಿರುವ ಕಾರಣದಿಂದ ಕೊಡೆಯು ಅಲ್ಲಿ ಆಳವಾಗಿ ಇಳಿಯುತ್ತದೆ ಎಂಬ ನಂಬಿಕೆ ಕೆಂಬಟ್ಟಿಯರಲ್ಲಿದೆ. ಇದೆಲ್ಲಾ ಆಗುವಷ್ಟರಲ್ಲಿ ಮಧ್ಯಾಹ್ನವಾಗಿರುತ್ತದೆ.

ಈ ಕಡೆ ದೇಗುಲದ ಹತ್ತಿರ ಆಚರಣೆಗಳು ಮುಂದುವರೆದಿರುತ್ತವೆ. ದೇವಿಯ ವಿಗ್ರಹವನ್ನು ಶುಚಿಗೊಳಿಸಿ, ಹರಕೆಯ ರೂಪದಲ್ಲಿ ಬಂದ ಆಭರಣಗಳನ್ನು ವಿಗ್ರಹಕ್ಕೆ ತೊಡಿಸಿ, ಅದನ್ನು ಪೂಜಾರಿಯು ದೇಗುಲಕ್ಕೆ ಅಭಿಮುಖವಾಗಿ ಇಡುತ್ತಾನೆ. ಈ ಸಂದರ್ಭದಲ್ಲಿ ಪೂಜಾರಿಗೆ ದೇವಿ ಮೈಮೇಲೆ ಬಂದಂತೆ ಆವೇಶಕ್ಕೊಳಗಾಗುತ್ತಾನೆ. ಅಷ್ಟರಲ್ಲಿ ವಾದ್ಯಗಳ ವೈವಿಧ್ಯಮಯ ಶಬ್ದಗಳು ಕೇಳಲ್ಪಡುತ್ತವೆ. ಆವೇಶ ಬಂದ ಕೆಂಬಟ್ಟಿ ಪೂಜಾರಿ ಸುಮಾರು ಇಪ್ಪತ್ತು ಮೆಟ್ಟಿಲುಗಳನ್ನು ಕಣ್ಣು ಮುಚ್ಚಿಯೇ ಹತ್ತಿ ಇಳಿದು ಓಡಾಡುವುದು ಇಲ್ಲಿ ನೆರೆದವರ ಭಕ್ತಿ ಮತ್ತಷ್ಟು ಹೆಚ್ಚಾಗುವಂತೆ ಮಾಡುತ್ತದೆ.

ಅನೇಕ ಕ್ರಿಯಾ ವಿಧಿವಿಧಾನಗಳು ನೆರವೇರಿದ ನಂತರ ಸಂಜೆಯ ಹೊತ್ತಿಗೆ ದೇವಿಯ 'ತಡಂಬ'ವನ್ನು ದೇಗುಲದ ಹೊರಗೆ ತರುತ್ತಾರೆ. ಇದನ್ನು ಹೊತ್ತು ದೇಗುಲಕ್ಕೆ ಅಭಿಮುಖವಾಗಿ

ನಿಲ್ಲುತ್ತಾರೆ. ಕೊಡೆ ಮತ್ತು ಕಡತಲೆಗಳನ್ನು ಹಿಡಿದ ಎಲ್ಲರೂ ಅಮ್ಮೆಯ ವಿಗ್ರಹದ ಜೊತೆಗೆ ದೇಗುಲವನ್ನು ಮೂರು ಸುತ್ತು ಬರುತ್ತಾರೆ. 'ಬಿಂಬ' ಕೂರಿಸುವುದು ಎಂಬ ಇನ್ನೊಂದು ವಿಧಿಯನ್ನು ನೆರವೇರಿಸುತ್ತಾರೆ. ಇದಾದ ನಂತರ ಕೊಡೆ ಸಹಿತ ಎಲ್ಲಾ ಪರಿಕರಗಳನ್ನು ನೀರಿನಿಂದ ತೊಳೆಯುತ್ತಾರೆ.

ತದನಂತರ ಮುಂದಿನ ಕಾರ್ಯವಾಗಿ ಎಲ್ಲಾ ಕೆಂಬಟ್ಟಿ ಕುಟುಂಬಗಳು ಬಂದಿರುವ ಬಗ್ಗೆ 'ನಾಡು ಕರೆಯುವುದು' ಮಾಡುತ್ತಾರೆ. ಎಂದರೆ ದೇವಿಯೊಂದಿಗೆ ಸಂಬಂಧಿಸಿದ ಮೂವತ್ಮೂರು ಕೆಂಬಟ್ಟಿಗಳನ್ನು ಕರೆಯುವುದು ಎಂದರ್ಥ. ಹೀಗೆ ಕರೆಯವುದರ ಜೊತೆಗೆ ದೇವಿಯ ಆವೇಶ ಬಂದ ವ್ಯಕ್ತಿ ಪನ್ನಂಗಾಲತಮ್ಮೆಯಾಗಿ ತನ್ನ ಆರು ಜನ ಅಣ್ಣಂದಿರ ಹೆಸರು, ವೇಷ, ನಡೆನುಡಿ ಎಲ್ಲವನ್ನು ವರ್ಣಿಸುತ್ತಾಳೆ. ಕೂಡಲೇ ತನ್ನ ಅಣ್ಣ ಇಗ್ಗುತಪ್ಪ ನೆಲೆಸಿರುವ ದಿಕ್ಕಿನ ಕಡೆಗೆ ನಗುತ್ತಾ ಓಡುವ ಪ್ರಯತ್ನ ಮಾಡುತ್ತಾಳೆ. ಆದರೆ ಆಕೆ ಈ ಸ್ಥಳದಿಂದ ಹೊರಟು ಹೋದರೆ ಹಬ್ಬ ನಿಂತಂತೆಯೇ ಎಂದು ಭಾವಿಸಿ ಆಕೆಯನ್ನು ಉಳಿದ ಆವೇಶ ಬಂದವರು ತಡೆದು ಸಮಾಧಾನ ಪಡಿಸುತ್ತಾರೆ. ದೇವಿಯ ಸಮಾಧಾನದೊಂದಿಗೆ ಮೊದಲ ದಿನದ ಹಬ್ಬ ಮುಗಿಯುತ್ತದೆ.

**ಕುರುಂದ ಹಬ್ಬ:** ಎರಡನೇ ದಿನದ ಹಬ್ಬವಾಗಿ ಕುರುಂದವನ್ನು ಆಚರಿಸುತ್ತಾರೆ. ಈ ದಿನ ಕೊಡವರೂ ಸೇರಿದಂತೆ ಎಲ್ಲಾ ವರ್ಗದ ಜನರು ಯಾವ ತರತಮ ಬೇಧವಿಲ್ಲದೆ ಹರಕೆ ಸಲ್ಲಿಸಲು ದೇವಾಲಯಕ್ಕೆ ಬಂದು ಸೇರುತ್ತಾರೆ. 'ಕುರುಂದ' ಆಡುವುದು ಈ ಹಬ್ಬದ ವಿಶೇಷವಾಗಿರುತ್ತದೆ. 'ಕುರುಂದ' ಎಂದರೆ ಜುಟ್ಟು ತೆಗೆದ ತೆಂಗಿನ ಕಾಯಿಗಳಿಂದ ತಲೆಗೆ ಹೊಡೆದುಕೊಳ್ಳುವ ಒಂದು ಆವೇಶಭರಿತ ಆಟ. ಹೀಗೆ ತಲೆಗೆ ಹೊಡೆದುಕೊಳ್ಳುವುದರಿಂದ ಆಗುವ ಅಪಾಯವನ್ನು ತಪ್ಪಿಸುವ ಪ್ರಯತ್ನ ನಡೆಯುತ್ತದೆಯಾದರೂ ಅಲ್ಲಲ್ಲಿ ಕೆಲವರು ಹೊಡೆದು ಕೊಳ್ಳುತ್ತಾರೆ. ಸಾವಿರಕ್ಕೂ ಅಧಿಕ ತೆಂಗಿನ ಕಾಯಿಗಳು ಕುರುಂದಕ್ಕೆ ಬಂದಿರುತ್ತವೆ.

ಈ ಎಲ್ಲಾ ಕ್ರಿಯೆಗಳು ನಡೆದ ನಂತರ ಗರ್ಭಗುಡಿಯಲ್ಲಿರುವ ಅಮ್ಮೆಯ ವಿಗ್ರಹವನ್ನು ಪ್ರಾರ್ಥಿಸಿ ಹೊರಗೆ ತಂದು ಇಗ್ಗುತಪ್ಪ ದೇಗುಲದತ್ತ ಮುಖ ಮಾಡಿ ಇಡುತ್ತಾರೆ. ದೇವಿಯ ಮೇಲಿನ ನೆತ್ತಿವಟ್ಟ, ಸರಗಳು ಮೊದಲಾದ ಆಭರಣಗಳನ್ನು ಕೊಡವರ ಭಂಡಾರ ತಕ್ಕನಾದ ಅಂಜಿಪರವಂಡರ ವಶಕ್ಕೆ ತಲುಪಿಸುತ್ತಾರೆ. ಇಲ್ಲಿಗೆ ಈ ಹಬ್ಬದ ಎಲ್ಲ ಕಾರ್ಯಗಳು ಮುಗಿದಂತಾಗುತ್ತವೆ.

ಒಟ್ಟಿನಲ್ಲಿ ಕೆಂಬಟ್ಟಿಯರ ಈ ಹಬ್ಬ ಎರಡು ದಿನಗಳಲ್ಲಿ ನಡೆಯುವುದಾದರೂ ಬಹಳ ವಿಧಿವತ್ತಾದ ಮತ್ತು ವಿಸ್ತಾರವಾದ ಆಚರಣೆಯಾಗಿರುವುದು ಕಂಡು ಬರುತ್ತದೆ. ಈ ಹಬ್ಬದ ಮತ್ತೊಂದು ವಿಶೇಷವೆಂದರೆ ಕೆಂಬಟ್ಟಿಯವರೊಂದಿಗೆ ಕೊಡವರಾದಿಯಾಗಿ ಅನೇಕ ವರ್ಗದ ಜನರು ಭಾಗವಹಿಸಿ ತಮ್ಮ ಹರಕೆಗಳನ್ನು ಅರ್ಪಿಸುತ್ತಾರೆ.

**ಈ. ಪ್ರದರ್ಶನ ಕಲೆಗಳು**

ಪ್ರಬಲ ಸಮುದಾಯಗಳಂತೆ ಹಣಕಾಸಿನ ವಿಚಾರದಲ್ಲಿ ಸರಿಸಮನಾಗಿ ಕಾಣಿಸಿಕೊಳ್ಳಲು ಸಾಧ್ಯವಾಗದಿದ್ದರೂ ಸಾಂಸ್ಕೃತಿಕವಾಗಿ ತಮ್ಮದೇ ಆದ ಶ್ರೀಮಂತಿಕೆಯನ್ನು ಹೊಂದಿದ್ದಾರೆ. ಮನುಷ್ಯನ ಸಹಜ ಗುಣವೇ ಹಾಗೆ ತನಗಾದ, ಆಗುತ್ತಿರುವ ಎಲ್ಲಾ ನೋವುಗಳನ್ನು ಮರೆತು ದೇವರ ಹೆಸರಿನಲ್ಲಿ ಅಥವಾ ಧಾರ್ಮಿಕ ವಿಧಿವಿಧಾನಗಳಲ್ಲಿ ತನ್ನನ್ನು ತೊಡಗಿಸಿಕೊಂಡು ಮಾನಸಿಕ ಸಂತೋಷವನ್ನು ಹೊಂದುವುದರ ಮೂಲಕ ತೃಪ್ತಿಪಡುತ್ತಾನೆ. ಕೊಡವರ 'ಮನೆಯಾಳು'ಗಳೆನಿಸಿರುವ ಕೆಂಬಟ್ಟಿಯರು ತಮ್ಮ ಗ್ರಾಮಗಳಲ್ಲಿ ಮನರಂಜನೆಗಾಗಿ ಹತ್ತು ಹಲವು ಪ್ರದರ್ಶನಾತ್ಮಕ ಕಲೆಗಳನ್ನು ಅಳವಡಿಸಿಕೊಂಡು ಬಂದಿದ್ದಾರೆ.

ಕೆಂಬಟ್ಟಿ ಜನಾಂಗ ವೇಷಹಾಕಿ ಕುಣಿಯುವ ಕಲೆಗಳಿಗೆ, ನೃತ್ಯಗಳಿಗೆ ಹೆಚ್ಚು ಮಹತ್ವ ನೀಡಿರುವುದು ಕಂಡುಬರುತ್ತದೆ. ವೇಷಗಳ ದೃಷ್ಟಿಯಿಂದ ಹುತ್ತರಿ, ಬೇಡುಹಬ್ಬ, ಸುಗ್ಗಿಹಬ್ಬ ಹಾಗೂ ಗ್ರಾಮದೇವತೆಯ ಹಬ್ಬಗಳಲ್ಲಿ ವೇಷ ಧರಿಸುವುದು ಕಾಣಸಿಗುತ್ತದೆ. ಮಳೆಗಾಲದ ಮುನ್ನ ನಡೆಯಲ್ಪಡುವ ಬೇಡುಹಬ್ಬದಲ್ಲಿ ಗಂಡಸರು ಪ್ರಧಾನವಾಗಿ ಭಾಗವಹಿಸುತ್ತಾರೆ. ಇವರು ಹಾಕುವ ವೇಷಭೂಷಣಗಳು ರಂಜನೆಯನ್ನು ಮೂಡಿಸುತ್ತವೆ. ವೇಷ ಹಾಕುವ ಮೂಲ ಉದ್ದೇಶವೇ ನೋಡುಗರಿಗೆ ಮನೋರಂಜನೆಯನ್ನು ನೀಡುವುದಾಗಿರುತ್ತದೆ. ಹಾಗಾಗಿ ಇವರು ಮಾಡುವ ಅಂಗಚೇಷ್ಟೆ, ಭಾವಾಭಿನಯ, ಆಡುವ ಮಾತು, ತೋರುವ ನಟನೆ, ನಗುವನ್ನುಂಟುಮಾಡುತ್ತದೆ. ಕೆಂಬಟ್ಟಿಗಳು ರೂಢಿಸಿಕೊಂಡಿರುವ ಕಲೆಗಳೆಂದರೆ, ಮಾಪಿಳ್ಳೆ ಕಳಿ, ವಡ್ಡಕಳಿ, ಚೂಳೆ(ಸೂಳೆ)ಕುಂದ, ಪಟ್ಟಕಳಿ(ಬ್ರಾಹ್ಮಣ ವೇಷ), ಗಾಡಿಗ ಅಥವಾ ಗಾಡಿಗರಿ, ಸಿದ್ದಿಕಳಿ ಅಥವಾ ಮಕ್ಕ ಸಿದ್ದಿ ಕಳಿ, ಕಾಪಳ ಕಳಿ, ಹಾವಾಡಿಗ, ಮಿಲಿಟರಿ ಪೋಲೀಸು, ಸಾರಾಯಿ ಸ್ಕ್ವಾಡ್, ಕರಡಿಮಂಗಲ, ಗೊಂಬೆ ಬುಂಡೆಕಳಿ, ಪಿಲ್ಲುಭೂತ, ಬಸವನಕಳಿ ಇತ್ಯಾದಿಗಳು. ಈ ಎಲ್ಲಾ ಕಲೆಗಳಲ್ಲಿ ಇವರು ಬಳಸುವ ಭಾಷೆ ಮಲೆಯಾಳವಾಗಿರುತ್ತದೆ. ಇಲ್ಲಿನ ಎಲ್ಲಾ ಕಲೆಗಳು ಒಂದೊಂದು ವೃತ್ತಿಯನ್ನು ಅನುಕರಿಸುವಂತದ್ದೇ ಅಗಿವೆ. ಅವುಗಳಲ್ಲಿ ವಡ್ಡಕಳಿ ಮತ್ತು ಮಾಪಿಳ್ಳೆ ಕಳಿ ಕುರಿತ ಸಂಕ್ಷಿಪ್ತ ಮಾಹಿತಿ ನೀಡಲಾಗಿದೆ.

**ವಡ್ಡಕಳಿ:** ಕಲ್ಲು ಒಡೆಯುವ ವೃತ್ತಿಯನ್ನು ಮಾಡುವ ವೇಷವೇ ವಡ್ಡಕಳಿ. ಮಂಡಿಯವರೆಗೆ ಬಿಳಿ ಪಂಚೆಯೊಂದನ್ನು ಉಟ್ಟುಕೊಂಡು, ಕೈಯಲ್ಲಿ ಗುದ್ದಲಿ ಅಥವಾ ಸುತ್ತಿಗೆಯನ್ನು ಹಿಡಿದುಕೊಂಡು ಮನೆಮನೆಗಳ ಹತ್ತಿರ ಹೋಗಿ ಅನೇಕ ವಿಧದಲ್ಲಿ ಅಭಿನಯಿಸುತ್ತಾನೆ. ಇಲ್ಲಿ ಮಾತ್ರ ಕನ್ನಡ ಭಾಷೆಯನ್ನು ಬಳಸಲಾಗುತ್ತದೆ. ಮನೆಮನೆಗೆ ಹೋಗಿ ಯಾರದಾದರು ಒಬ್ಬರ ಮನೆಯ ಮೆಟ್ಟಿಲುಗಳ ಮೇಲೆ ನಿಂತು ಅದರ ಕಲ್ಲನ್ನು ಒಡೆಯುವವನಂತೆ ನಟಿಸುತ್ತಾನೆ. ಆ ಮನೆಯ ಮಾಲೀಕ ಅದನ್ನು ಗಂಭೀರವಾಗಿ ಪರಿಗಣಿಸದೆ ಪ್ರೀತಿಯಿಂದ 'ಅದನ್ನು ಒಡೆಯೋದು ಬೇಡ ಮಾರಾಯ ಮನೆಗೇನಾದರೂ ಸಾಮಾನುಗಳು ಅಥವಾ ಹಣವೇನಾದರು ಬೇಕಾ ಕೇಳು ಕೊಡುತ್ತೇನೆ' ಎಂದು ಹೇಳಿ ಆತನಿಗೆ ಹಲವು ವಸ್ತುಗಳನ್ನು ಕೊಟ್ಟು ಕಳುಹಿಸುತ್ತಾನೆ.

ಪರೋಕ್ಷವಾಗಿ ಸಹಾಯದ ನಿರೀಕ್ಷೆ ಮಾಡುವಂತೆ ಕಾಣುವ ಈ ಆಟದಲ್ಲಿ ಮನೋರಂಜನೆಯನ್ನೊದಗಿಸುವ ಪ್ರಯತ್ನವೂ ಇರುವುದು ಗೊತ್ತಾಗುತ್ತದೆ.

**ಮಾಪಿಳ್ಳೆಕಳಿ:** ಮಲೆಯಾಳದ ವ್ಯಕ್ತಿಯ ವೇಷವನ್ನು ಧರಿಸಿ ಕೈಯಲ್ಲಿ ಬೈನೆ ಮರದ ಕತ್ತಿಯನ್ನು ಹಿಡಿದಿರುತ್ತಾನೆ. ಒಂದು ಕುಕ್ಕೆ(ಬುಟ್ಟಿ)ಗೆ ಮೀನು, ತರಕಾರಿ, ತೆಂಗಿನಕಾಯಿಗಳನ್ನು ತುಂಬಿಕೊಂಡು ಬೀದಿಬೀದಿಗಳಲ್ಲಿ ಮಾರಾಟ ಮಾಡುವವನಂತೆ ವರ್ತಿಸುತ್ತಾನೆ. ಇದು ಮಾಪಿಳ್ಳೆಯರ ವೇಷವಾಗಿರುವುದರಿಂದ ಮಲೆಯಾಳಿ ಭಾಷೆಯನ್ನು ಸಹಜವಾಗಿ ಬಳಸುತ್ತಾನೆ. ಕೊಡಗಿನಲ್ಲಿರುವ ಮಲೆಯಾಳಿಗರ ಬದುಕು ಹಾಗೂ ಅವರ ನಡಾವಳಿಗಳನ್ನು ಈ ಆಟ ಸಂಕೇತಿಸುತ್ತದೆ.

ಈ ಮೇಲಿನ ಕಲೆಗಳಿಗೆ ಕೆಂಬಟ್ಟಿಯರು ವೇಷಕ್ಕೆ ಬಳಸಿಕೊಳ್ಳುವ ಸಾಧನಗಳು ವಸ್ತುಗಳು ಸ್ವಾಭಾವಿಕವಾಗಿ ಅರಣ್ಯದಲ್ಲಿ ದೊರೆಯುವಂತವುಗಳಾಗಿವೆ. ಅರಣ್ಯದಂಚಿನಲ್ಲಿ ವಾಸಿಸುತ್ತಿದ್ದು ಅದರೊಂದಿಗೆ ಅವಿನಾಭಾವ ಸಂಬಂದವನ್ನು ಹೊಂದಿರುವುದರ ಸಂಕೇತವಾಗಿ ಅವರೇ ತಯಾರು ಮಾಡಿಕೊಂಡ ವೇಷಗಳನ್ನು ಧರಿಸಿ ಮನರಂಜನೆ ನೀಡುವುದರ ಜೊತೆಗೆ ತಾವೂ ಸಂತೋಷವನ್ನು ಹೊಂದುತ್ತಾರೆ. ಬಡವರ ದಯನೀಯ ಸ್ಥಿತಿಗಳೇ ಹೀಗೆ ದುಬಾರಿ ಬೆಲೆಯ ವಸ್ತುಗಳಿಗೆ ಆಸೆ ಪಡದೆ ಸ್ವಾಭಾವಿಕವಾಗಿ ಸುತ್ತಮುತ್ತಲ ಪರಿಸರದಲ್ಲಿಯೇ ದೊರೆಯುವ ವಸ್ತುಗಳನ್ನೇ ಬಳಸಿಕೊಂಡು ತೃಪ್ತಿಯನ್ನು ಹೊಂದುವ ಪ್ರಯತ್ನ ಮಾಡುತ್ತಾರೆ.

**ಉ. ಜನಪದ ನೃತ್ಯಗಳು**

ಕೆಂಬಟ್ಟಿಯರು ಕೊಡಗಿನ ಮೂಲ ನಿವಾಸಿಗಳಾಗಿದ್ದರು ಹಾಗೂ ಇವರ ಭಾಷೆ ಮತ್ತು ಸಂಸ್ಕೃತಿಯನ್ನು ಇಲ್ಲಿರುವ ಉಳಿದ ಸಮುದಾಯಗಳು ಅನುಸರಿಸುತ್ತಿದ್ದರು[೨೭] ಎಂಬ ಅಭಿಪ್ರಾಯದ ಪ್ರಕಾರ ಕೊಡವರೂ ಸೇರಿದಂತೆ ಮಿಕ್ಕವರು ಕೆಂಬಟ್ಟಿಯರನ್ನು ಅನುಸರಿಸಿರಬಹುದು. ಆದರೆ ಇದನ್ನು ಒಪ್ಪುವ ಸನಿಹದಲ್ಲಿ ಕೊಡವರಿಲ್ಲ. ಕೊಡವರ ಸಂಪರ್ಕದಲ್ಲಿ ಹಿಂದಿನಿಂದಲೂ ಬೆಳೆದು ಬಂದಿರುವ ಕೆಂಬಟ್ಟಿಯರು ಕೊಡವರ ಅಚಾರ, ಸಂಪ್ರದಾಯಗಳನ್ನು ಅನುಸರಿಸುತ್ತಿದ್ದಾರೆ ಎಂದೇ ಹೇಳಲಾಗುತ್ತಿದೆ. ಕೊಡವರು ಕೆಂಬಟ್ಟಿಯರನ್ನು ಅನುಸರಿಸಿದರೋ, ಅಥವಾ ಕೆಂಬಟ್ಟಿಗಳು ಕೊಡವರನ್ನು ಅನುಸರಿಸುತ್ತಿದ್ದಾರೋ ಎಂಬ ಪ್ರಶ್ನೆ ಕಾಡಿದರೂ ಇವರಿಬ್ಬರಲ್ಲಿ ಅನೇಕ ಪದ್ಧತಿಗಳು ಒಂದೇ ರೀತಿಯಲ್ಲಿರುವುದು ಮಾತ್ರ ಸ್ಪಷ್ಟವಾಗಿದೆ.

**ಉಮ್ಮತ್ತಾಟ್ ಕುಣಿತ:** ಕೊಡವರಲ್ಲಿ ಇದು ಸ್ತ್ರೀ ಪ್ರಧಾನವಾದ ಕುಣಿತ. ಆದರೆ ಕೆಂಬಟ್ಟಿಯರಲ್ಲಿ ಸ್ತ್ರೀ ಪುರುಷರಿಬ್ಬರೂ ಪ್ರತ್ಯೇಕವಾಗಿ ಭಾಗವಹಿಸಿ ನರ್ತಿಸುತ್ತಾರೆ. ಸಮುದ್ರ ಮಥನ ಸಮಯದಲ್ಲಿ ಹೊರಬಂದ ಅಮೃತವನ್ನು ದೇವತೆಗಳಿಗೆ ಹಂಚಲು ವಿಷ್ಣು ಮೋಹಿನಿ ರೂಪ ಧರಿಸಿ ಉಮೆಯ ನೃತ್ಯವನ್ನು ಅನುಸರಿಸಿ, ಅಸುರರನ್ನು ಬೆರಗುಗೊಳಿಸಿ ಉಪಾಯವಾಗಿ ಸುರರಿಗೆ ಹಂಚಿದ ಆ ಸಮಯದ ನೃತ್ಯವೇ ಉಮ್ಮತ್ತಾಟ್‌ಗೆ ಮೂಲ ಪ್ರೇರಣೆಯಾಗಿದೆ. ಈ ನೃತ್ಯದಲ್ಲಿ ಮೊದಲಿಗೆ ಕಾವೇರಿ ಮಾತೆಯನ್ನು ಸ್ತುತಿಸಲಾಗುತ್ತದೆ. ಕಂಚಿನ ತಾಳವನ್ನು ಹಿಡಿದು ತಾಳ ತಟ್ಟುತ್ತಾ ದೀಪದ

ಸುತ್ತ ಕುಣಿಯಲಾಗುತ್ತದೆ. ಈ ಸಂದರ್ಭದಲ್ಲಿ ಹಿನ್ನೆಲೆ ವಾದ್ಯಗಳಿರುತ್ತವೆ. ಲಯ, ತಾಳಬದ್ಧವಾಗಿ ಕಂಚಿನ ತಾಳಗಳನ್ನು ತಟ್ಟುತ್ತಾ ಕುಣಿಯುವಾಗ ಆಕರ್ಷಕ ಭಂಗಿಗಳೂ ಬೇರೆ ಬೇರೆಯಾಗಿದ್ದು ಆಕರ್ಷಕವಾಗಿರುತ್ತದೆ. ಇಲ್ಲಿ ಹೆಂಗಸರ ಬದಲಾಗಿ ಗಂಡಸರು ಕುಣಿದರೂ ನೃತ್ಯದ ಸ್ವರೂಪ ಬದಲಾಗುವುದಿಲ್ಲ. ಅಮ್ಮತ್ತಿಬಿಳಗುಂದ, ಚೆಂಬೆ ಬೆಳ್ಳೂರು ಕಡೆಗಳಲ್ಲಿ ಕೆಂಬಟ್ಟಿ ಗಂಡಸರು ಕೊಡವ ಹೆಣ್ಣುವೇಷ ಧರಿಸಿ ಕುಣಿದರೆ, ಬಿಟ್ಟಂಗಾಲದ ಕೆಂಬಟ್ಟಿಗಳು ಕುಪ್ಪಸ ದಟ್ಟಿ, ಮಂಡೆತುಣಿ(ತಲೆಗೆ ಕಟ್ಟುವ ಪೇಟ) ತೊಟ್ಟು ಕೊಡವ ಗಂಡಸರ ವೇಷದಲ್ಲಿಯೇ ಕುಣಿಯುತ್ತಾರೆ.

**ಹುತ್ತರಿ ಕೋಲಾಟ:** ಕೊಡಗಿನ ಸುಗ್ಗಿ ಹಬ್ಬವಾದ 'ಪುತ್ತರಿ ನಮ್ಮೆ' ಕೊಡಗರ ಪಾಲಿಗೆ ಅತ್ಯಂತ ಸಂಭ್ರಮದ ಹಬ್ಬ. ಕೊಡವರು ಈ ಕಲೆಯನ್ನು ರೂಢಿಸಿಕೊಂಡು ಬಂದು ಕೊಡಗಿನ ಎಲ್ಲ ವರ್ಗದ ಜನರನ್ನು ಪ್ರಭಾವಿತರನ್ನಾಗಿಸಿದುದಲ್ಲದೆ ಅವರೂ ಇದರಲ್ಲಿ ತೊಡಗಿಸಿಕೊಳ್ಳುವಂತೆ ಮಾಡಿದ್ದಾರೆ.

ಹೆಸರೇ ಹೇಳುವಂತೆ ಇದು ಕೋಲು ಹಿಡಿದು ಕುಣಿಯುವಂತದ್ದು. ಒಂದು ನಿರ್ದಿಷ್ಟ ಮರದ ಸುತ್ತ ಕೊಡವ ಸಾಂಪ್ರದಾಯಿಕ ಉಡುಗೆ-ತೊಡುಗೆಗಳನ್ನು ಧರಿಸಿ ಕೈಯಲ್ಲಿ ಎರಡು ಬೆತ್ತದ ಕಡ್ಡಿಗಳನ್ನು ಹಿಡಿದು ತಾಳಬದ್ಧವಾಗಿ ನರ್ತಿಸುತ್ತಾ ವೃತ್ತಾಕಾರದಲ್ಲಿ ಚಲಿಸುತ್ತಾರೆ. ಕೋಲಾಟಕ್ಕೆ ಬಳಸುವ ಬೆತ್ತದ ಕಡ್ಡಿಗಳನ್ನು 'ಬೆತ್ತದ ಜೊಪ್ಪಕೋಟ್' ಎಂದು ಮತ್ತು ಕೋಲಾಟದ ಸ್ಥಳವನ್ನು 'ಮಂದ್' ಎಂದು ಕರೆಯುತ್ತಾರೆ. ಕೆಂಬಟ್ಟಿಯರು ವಾದ್ಯ ನುಡಿಸುತ್ತಾ ಕೊಡವರ ಜೊತೆಜೊತೆಯಾಗಿ 'ಮಂದ್'ಗೆ ಹೋಗುತ್ತಾರೆ. ಮೊದಮೊದಲು ಕೊಡವರು ಹಾಗೂ ಕೆಂಟ್ಟಿಯರು ಒಟ್ಟಿಗೇ 'ನಾಡಮಂದ್'ಗೆ ತೆರಳಿ ಪ್ರತ್ಯೇಕ ಗುಂಪಾಗಿ ಕೋಲಾಟ ಆಡುತ್ತಿದ್ದರು. ಇತ್ತೀಚೆಗೆ ಅರಮೇರಿಯಲ್ಲಿ ಮಾತ್ರ ಈ ಪದ್ಧತಿ ಮುಂದುವರೆದಿದೆ[೨೮]

ಹುತ್ತರಿ ಕೋಲ್ಲುಗಣಿತ ನಾಲ್ಕು ಸುತ್ತುಗಳಲ್ಲಿ ನಡೆಯುವಂತದ್ದು. ಮೊದಲ ಸುತ್ತಿನಲ್ಲಿ ಕೈಯಲ್ಲಿ ಕೋಲು ಹಿಡಿದು ಕೇವಲ ಹಾವ ಭಾವ ಪ್ರದರ್ಶನ ಮಾತ್ರವಿದ್ದು, ಎರಡನೇ ಸುತ್ತಿಗೆ ಕೋಲುಗಳ ಬಡಿತ ಪ್ರಾರಂಭವಾಗುತ್ತದೆ. ಇಲ್ಲಿ ಕೋಲುಗಳನ್ನು ಅಕ್ಕ-ಪಕ್ಕ, ಹಿಂದೆ-ಮುಂದೆ, ಮೇಲೆ-ಕೆಳಗೆ ಹೊಡೆಯುವುದರ ಮೂಲಕ ಆಟಕ್ಕೆ ಮೆರುಗು ತಂದು ಕೊಡುತ್ತಾರೆ. ಮೂರನೇ ಮತ್ತು ನಾಲ್ಕನೇ ಸುತ್ತಿಗೆ ಬರುವಷ್ಟರಲ್ಲಿ ಕೋಲುಗಳ ಬಡಿತ, ನೃತ್ಯದ ವಿಧಾನ ಬದಲಾಗಿ ವೈವಿಧ್ಯಮಯ ರೀತಿಯಲ್ಲಿ ದೇಹವನ್ನು ಬಾಗಿ ಬಳುಕಿಸುತ್ತ, ನರ್ತಿಸುತ್ತಾ, ಮರದ ಸುತ್ತಲೂ ಪರಿಭ್ರಮಣಾಕಾರದಲ್ಲಿ ನರ್ತಿಸುತ್ತ ನೆರೆದವರಿಗೆ ಮುದವನ್ನು ನೀಡುತ್ತಾರೆ. ಈ ಸಂದರ್ಭದಲ್ಲಿ ಹಾಡುವ 'ಪೊಯಿಲೇ ಪೊಯಿಲೇ' ಎಂಬ ಶಬ್ದದ ಸಮೂಹ ದನಿ ಉತ್ಸಾಹವನ್ನು ತುಂಬುತ್ತದೆ. ಕೋಲಾಟದ ಹಾಡು ಈ ರೀತಿಯಿರುತ್ತದೆ.

ಪೊಯಿಲೇ ಪೊಯಿಲೇ
ಹುತ್ತರಿ ಹಬ್ಬದ ಕೋಲು ಪೊಯಿಲೇ ಪೊಯಿಲೇ
ಹುತ್ತರಿ ಹಾಡನು ಸ್ವಲ್ಪವೇ ಹಾಡಿರಿ ತರುಣರೇ ಪೊಯಿಲೇ

ಯುವಕರ ಬಾಯೊಳು ತಂಬಿಟ್ಟು ಮುದ್ದೆ
ಸವಿದಿದೆ ನಾಲಿಗೆ ತಾಳು
ಕಚ್ಚುಟ್ಟಿ ಮುಳ್ಳಿನ ಕಾಡಲಿ ಜಿಂಕೆಯ ಹೆಜ್ಜೆ ಪೊಯಿಲೇ
ಅಲ್ಲವು ನಮ್ಮಯ ಬಾಳು
ನಮ್ಮಯ ತರುಣರೆ ಹಾಡಿರೆ ನೀವು ಪೊಯಿಲೇ
ಬೆತ್ತದ ಕೋಲಿಗೆ ಬೆಳ್ಳಿಯ ಮಣಿಸರ ಪೊಯಿಲೇ
ಬೆತ್ತದ ಕೋಲಿಗೆ ರೇಷ್ಮೆಯ ಗೊಂಡೆ ಪೊಯಿಲೇ
ನಮ್ಮಯ ಹೂಹುತ್ತರಿ ಕೋಲದು ಬಾಣಿಗೆ ಪೊಯಿಲೇ
ಬರುತಲಿ ಆಡುವುದು ಪೊಯಿಲೇ
ಬೆತ್ತದ ಕೋಲಿಗೆ ರೇಷ್ಮೆಯ ಗೊಂಡೆ ಪೊಯಿಲೇ
ಕೊಲ್ಲೀರ ಮನೆಯೊಳು ಕೊಲ್ಲೀರ ಹಿರಿಯರೆ
ಕೋಲಾಟದ ರಭಸದಿ ಜಾರಿದೆ ಸೊಂಟದಪಟ್ಟಿ ಪೊಯಿಲೇ ಪೊಯಿಲೇ
ಅಜ್ಜಯ್ಯನ ನಡುಪಟ್ಟಿಯು ಜಾರಿದೆ ಕೋಲಾಟದಿ ಪೊಯಿಲೇ
ನಮ್ಮಯ ತರುಣರೆ ಹಾಡಿರೆ ನೀವು ಪೊಯಿಲೇ
ತರುಣರ ಬಾಯೊಳು ಹುತ್ತರಿ ತಂಬಿಟ್ಟು ಪೊಯಿಲೇ
ತರುಣರ ಬಾಯೊಳು ಕೇಚಕ್ಕಿ ಕೂಳು ಪೊಯಿಲೇ
ಮಳ್ಳಿ ಮೀನಿನ ಸಾರು ನೆನಪೊಳು ಆಟ ಪೊಯಿಲೇ
ತರುಣರ ಬಾಯೊಳು ಹುತ್ತರಿ ಕೋಲಿನ ಪೊಯಿಲೆ
ಆಟದ ಹಾಡೊಳು ತಂಬಿಟ್ಟಿನ ನೆನಪು ಪೊಯಿಲೆ[೨೦]

ಕೊಡವರೊಂದಿಗಲ್ಲದೆ ಕೆಂಬಟ್ಟಿಯರು ಪ್ರತ್ಯೇಕವಾಗಿ ತಮ್ಮ ದೇವರಕಾಡಿನ ಮರದ ಸುತ್ತ ಅಥವಾ ಕೇರಿಯ ದೇವತೆಯ ಗುಡಿ ಅಥವಾ ನೆಲೆಯ ಸುತ್ತ ಈ ಕೋಲ್ಲುಣಿತವನ್ನು ಪ್ರದರ್ಶಿಸುತ್ತಾರೆ.

**ಅಂಗಕಳಿ:** ಇದು ಶೋಕ ನೃತ್ಯವಾಗಿದ್ದು, ಕೆಂಬಟ್ಟಿ ಜನರು ತಮ್ಮ ಒಡೆಯನ ಮನೆಯ ಹಿರಿಯರು ಯಾರಾದರೂ ಮರಣಹೊಂದಿದಾಗ ಆ ಸಮಯದಲ್ಲಿ ಮಾಡುವ ನೃತ್ಯವಾಗಿದೆ. ಪೂಜಿಸಿದ ಶವದ ಹತ್ತಿರ ಬಂದು ತನ್ನ ಒಡೆಯ ನೀಡಿದ ಬಟ್ಟೆಯನ್ನು ತೊಟ್ಟು ಮೆಟ್ಟಿಲ ಬಳಿ ಸಾವಿಗೆ ಕೈಕೊಡುವಂತೆ 'ಕೆಟ್ಟಿರೋ ಆದನೇ(ಒಡೆಯ), ಕೆಟ್ಟಿರೋ ಅಬ್ಬೆಯೇ(ಹಿರಿಯಳು) ಎಂದು ಮೂರು ಬಾರಿ ಹೇಳುತ್ತ ಅಲ್ಲಿ ನುಡಿಸುತ್ತಿರುವ ಡೋಲಿನ ಶಬ್ದಕ್ಕೆ ಅನುಗುಣವಾಗಿ ದೀಪದ ಸುತ್ತ ಶೋಕ ನೃತ್ಯವನ್ನು ಮಾಡುತ್ತಾನೆ. ಕೆಂಬಟ್ಟಿಗಳು ತಮ್ಮ ಕುಟುಂಬದ ಹಿರಿಯರು ಮರಣ ಹೊಂದಿದಾಗಲೂ ಈ ನೃತ್ಯವನ್ನು ಮಾಡುವುದುಂಟು.

## ೫.೨. ಬುಡಕಟ್ಟು ಜನಾಂಗಗಳು

ಯಾವುದೇ ದೇಶದಲ್ಲಿ ಒಂದು ಸ್ಥಳದಲ್ಲಿ ಎಲ್ಲರಿಗಿಂತ ಮೊದಲು ನೆಲೆನಿಂತು ತಮ್ಮ ಬದುಕನ್ನು ಕಟ್ಟಿಕೊಂಡವರು ಅಲ್ಲಿನ ಮೂಲನಿವಾಸಿಗಳೆನಿಸಿಕೊಳ್ಳುತ್ತಾರೆ. ಭಾರತವೂ ಸೇರಿದಂತೆ ಹಲವು ರಾಷ್ಟ್ರಗಳನ್ನು ಗಮನಿಸಿದರೆ ಎಲ್ಲಾ ಕಡೆ ಮೂಲನಿವಾಸಿಗಳು ಕಾಣಿಸಿಕೊಳ್ಳುತ್ತಾರೆ. ದ್ರಾವಿಡರನ್ನು ಭಾರತದ ಮೂಲನಿವಾಸಿಗಳು ಎಂದು ಗುರುತಿಸಲಾಗಿದೆ. ಹೀಗೆ ಮೂಲನಿವಾಸಿಗಳೆನಿಸಿ ಕೊಂಡವರಲ್ಲಿ ಬಹುಪಾಲು ಆದಿವಾಸಿಗಳು ಅಥವಾ ಬುಡಕಟ್ಟು ಜನರೇ ಆಗಿರುತ್ತಾರೆ. ಇವರು ಗುಂಪು ಗುಂಪಾಗಿ ವಾಸಿಸುತ್ತಿದ್ದು, ಹೊಟ್ಟೆಪಾಡಿಗಾಗಿ ಬೇಟೆಯನ್ನು ಮತ್ತು ಸ್ವಾಭಾವಿಕವಾಗಿ ದೊರೆಯಬಹುದಾದ ಗೆಡ್ಡೆಗೆಣಸುಗಳನ್ನು ಅವಲಂಬಿಸಿರುತ್ತಿದ್ದರು. ಈಗ ಕಾಲ ಬದಲಾಗಿದ್ದು ಆಹಾರಕ್ಕಾಗಿ ಅರಣ್ಯವನ್ನು ಅವಲಂಬಿಸಬೇಕಾದ ಸ್ಥಿತಿಯಿಲ್ಲವಾಗಿದೆ.

'ಒಂದು ನಿರ್ದಿಷ್ಟ ಪ್ರದೇಶದಲ್ಲಿ ವಾಸಿಸುವ ಅಥವಾ ಅದನ್ನು ತನ್ನದೆಂದು ಹೇಳಿಕೊಳ್ಳುವಂಥ ರಾಜಕೀಯವಾಗಿ ಅಥವಾ ಸಾಮಾಜಿಕವಾಗಿ ಹೊಂದಿಕೊಂಡಿರುವ ಮತ್ತು ಸ್ವಯಮಾಡಳಿತವುಳ್ಳ ಸಮೂಹವೇ ಬುಡಕಟ್ಟು ಎಂದು ಲಂಡನ್ನಿನ ರಾಯಲ್ ಆಂತ್ರೋಪಾಲಾಜಿಕಲ್ ಇನ್‌ಸ್ಟಿಟ್ಯೂಟ್ ವ್ಯಾಖ್ಯಾನಿಸುತ್ತದೆ.[೩೦]

ಬುಡಕಟ್ಟು ಜನಸಮುದಾಯ ಸಹಜವಾಗಿ ಕಾಡುಮೇಡುಗಳಲ್ಲಿ ವಾಸಮಾಡುವವರು. ಇವರು ಒಂದು ಪ್ರದೇಶದಲ್ಲಿ ವ್ಯವಸ್ಥಿತವಾಗಿ ನೆಲೆನಿಲ್ಲದೆ ವಲಸೆಗೆ ಹೆಚ್ಚು ಮಹತ್ವ ನೀಡುತ್ತಾರೆ. ಹೀಗೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ವಲಸೆ ಕೈಗೊಳ್ಳಲು ಹಲವು ಕಾರಣಗಳಿರಬಹುದು. ಮುಖ್ಯವಾಗಿ ಭವಿಷ್ಯದ ಕನಸು ಕಾಣದೆ ವರ್ತಮಾನದ ವಿಚಾರಗಳಿಗೆ ಮಹತ್ವ ನೀಡಿ ಒಂದು ಕಡೆ ಸಂಪತ್ತನ್ನು ಕೂಡಿಹಾಕದೆ ಇರುವುದು ಇವರ ಅಲೆಮಾರಿ ಜೀವನಕ್ಕೆ ಕಾರಣವಿರಬಹುದು. ಬೆಟ್ಟಗುಟ್ಟಗಳಲ್ಲಿ ಸ್ವಚ್ಛಂಧವಾಗಿ ವಿಹರಿಸುತ್ತಾ ಅಲ್ಲೇ ದೊರೆಯಬಹುದಾದ ಅರಣ್ಯ ಉತ್ಪನ್ನಗಳನ್ನು ಸೇವಿಸುತ್ತಾ ಅಗತ್ಯಕ್ಕೆ ಅನುಗುಣವಾಗಿ ಕಾಡು ಪ್ರಾಣಿಗಳನ್ನು ಬೇಟೆಯಾಡಿ ತಮ್ಮ ಹಸಿವನ್ನು ನೀಗಿಸಿಕೊಂಡು ತಾತ್ಕಾಲಿಕವಾಗಿ ತೃಪ್ತಿಪಡುವ ಜನರಿವರು.

ಭಾರತದಲ್ಲಿ ಒಟ್ಟು ೪೭೨ ಬುಡಕಟ್ಟು ಸಮುದಾಯಗಳಿವೆ ಎಂದು ಗುರುತಿಸಲಾಗಿದೆ.[೩೧] ಈಶಾನ್ಯ ಭಾರತ, ಬಿಹಾರ, ಒರಿಸ್ಸಾ, ಮದ್ಯಪ್ರದೇಶ, ಗುಜರಾತ್, ಮಹಾರಾಷ್ಟ್ರ, ಆಂದ್ರಪ್ರದೇಶ, ಲಕ್ಷದ್ವೀಪ ಹಾಗೂ ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳು ಭಾರತದಲ್ಲಿ ಆದಿವಾಸಿಗಳು ಅತಿ ಹೆಚ್ಚು ವಾಸಮಾಡುತ್ತಿರುವ ಪ್ರದೇಶಗಳು. ತಮಿಳುನಾಡು, ಕೇರಳ ಮತ್ತು ಕರ್ನಾಟಕ ರಾಜ್ಯಗಳಲ್ಲಿ ಅಲ್ಲಲ್ಲೆ ವಿರಳವಾಗಿ ವಾಸಿಸುತ್ತಿದ್ದಾರೆ.

ಕರ್ನಾಟಕ, ಕೇರಳ ಮತ್ತು ತಮಿಳುನಾಡು ರಾಜ್ಯಗಳ ಗಡಿಭಾಗಗಳಲ್ಲಿ ಇರುಳ, ಪಣಿಯ, ಸೋಲಿಗ, ಕಾಡರ್, ಅಡಿಯ, ಜೇನುಕುರುಬ, ಬೆಟ್ಟಕುರುಬ, ಚೋಳನಾಯಕನ್, ಕಾಟ್ಟುನಾಯಕನ್, ವೆಟ್ಟನಾಯಕನ್, ಮಲೆಯರ್, ತೋಡ ಮೊದಲಾದ ಬುಡಕಟ್ಟುಗಳು

ಹರಡಿಕೊಂಡಿವೆ. ಇವರಲ್ಲದೆ ಕುಡಿಯ, ಮಲೆಕುಡಿಯ, ಎರವ(ಪಂಜರಿ), ಕಾಡುಕುರುಬ, ಹಸಲರು, ಬಿಲ್ಲರು, ಕಚ್ಚೆಗೌಳಿಗರು, ಥಂಕ ಮೊದಲಾದವರು ಕರ್ನಾಟಕದ ಬ್ರಹ್ಮಗಿರಿ ಮತ್ತು ಸಹ್ಯಾದ್ರಿ ಬೆಟ್ಟ ಶ್ರೇಣಿಗಳಲ್ಲಿ ಪ್ರಮುಖವಾಗಿ ಕಂಡುಬರುತ್ತಾರೆ. ದಕ್ಷಿಣ ಕನ್ನಡದಲ್ಲಿ ಮಲೆಕುಡಿಯ, ಚಿಕ್ಕಮಗಳೂರು ಜಿಲ್ಲೆಯಲ್ಲಿ ಗೌಡಾಳು, ಕೊಡಗಿನಲ್ಲಿ ಕುಡಿಯ, ಎರವ, ಪಣಿಯ, ಮೈಸೂರು ಜಿಲ್ಲೆಯಲ್ಲಿ ಸೋಲಿಗ, ಇರುಳ, ಬೆಟ್ಟಕುರುಬ, ಜೇನುಕುರುಬ ಮತ್ತು ಶಿವಮೊಗ್ಗ ಜಿಲ್ಲೆಯಲ್ಲಿ ಹಸಲರು ಗಣನೀಯವಾಗಿ ವಾಸಿಸುತ್ತಿರುವುದನ್ನು ಸಂಶೋಧಕರು ಗುರುತಿಸಿದ್ದಾರೆ.

ಹೀಗೆ ಕರ್ನಾಟಕದಾದ್ಯಂತ ಹಲವು ಬುಡಕಟ್ಟು ಜನಾಂಗಗಳಿವೆ. ಮುಖ್ಯವಾಗಿ ಕೊಡಗಿನ ಬುಡಕಟ್ಟು ಸಮುದಾಯದ ಅಧ್ಯಯನದ ದೃಷ್ಟಿಯಿಂದ ಇಲ್ಲಿ ವಾಸಮಾಡುತ್ತಿರುವ ಹಾಗೂ ಸಾಂಸ್ಕೃತಿಕವಾಗಿ ಗುರುತಿಸಿಕೊಂಡಿರುವ ಜೇನುಕುರುಬರು ಮತ್ತು ಎರವರ ಜೀವನ ಕ್ರಮಗಳನ್ನು ಅಧ್ಯಯನ ಮಾಡಿ ವಿಶ್ಲೇಷಣೆಗೊಳಪಡಿಸಲಾಗಿದೆ

### ೫.೨.೧. ಜೇನುಕುರುಬರು

ಕೊಡಗಿನಲ್ಲಿ ವಾಸಿಸುತ್ತಿರುವ ಬುಡಕಟ್ಟು ಸಮುದಾಯಗಳಲ್ಲಿ ಜೇನುಕುರುಬರು ಪ್ರಮುಖರಾಗಿದ್ದಾರೆ. ಇವರು ಈ ಜಿಲ್ಲೆಯ ಕುಶಾಲನಗರ, ಸೋಮವಾರಪೇಟೆ, ಗೋಣಿಕೊಪ್ಪಲಿನ ಸುತ್ತಮುತ್ತಲ ಪ್ರದೇಶಗಳಲ್ಲಿ ಹೆಚ್ಚಾಗಿ ವಾಸಿಸುತ್ತಿದ್ದಾರೆ. ಮೈಸೂರು ಜಿಲ್ಲೆಯ ಹೆಗ್ಗಡದೇವನ ಕೋಟೆ, ಹುಣಸೂರು ತಾಲೂಕಿನ ಅನೇಕ ಕಡೆ ಹೆಚ್ಚಾಗಿ ಕಂಡುಬರುತ್ತಾರೆ. ಕರ್ನಾಟಕದಲ್ಲಲ್ಲದೆ ತಮಿಳುನಾಡಿನ ನೀಲಗಿರಿ ಅರಣ್ಯ ಪ್ರದೇಶ ಹಾಗೂ ಕೇರಳದ ಮಾನಂದವಾಡಿ ಭಾಗಗಳಲ್ಲಿ ಇವರು ಅಧಿಕ ಪ್ರಮಾಣದಲ್ಲಿ ವಾಸಿಸುತ್ತಿದ್ದಾರೆ. ಕಿಕ್ಕೇರಿ ನಾರಾಯಣ ಅವರು ಇವರನ್ನು ಕುರಿತು 'ಚಾರಿತ್ರಿಕವಾಗಿ ಈ ಜನಾಂಗ ಸ್ಥಳೀಯರೇ ಅಥವಾ ಮತ್ತೆಲ್ಲಿಂದಾದರೂ ಬಂದವರೆ ಎಂಬ ಯಾವ ನಿರ್ದಿಷ್ಟ ಮಾಹಿತಿಯೂ ಸಿಗುವುದಿಲ್ಲ' ಎನ್ನುತ್ತಾರೆ.[೨] ಆದರೆ ಇವರು ಇಲ್ಲೇ ನೆಲೆ ನಿಂತು ತಮ್ಮ ಬದುಕನ್ನು ಕಟ್ಟಿಕೊಂಡಿದ್ದಾರೆ. ಹಾಗಾಗಿ ಕೊಡಗಿಗೆ ಪಕ್ಕದ ತಮಿಳುನಾಡು ಮತ್ತು ಕೇರಳಗಳಿಂದ ಬಂದಿರಬಹುದು.

'ಕುರು' ಎಂದರೆ ಬೆಟ್ಟ, 'ಕುರುಬ' ಎಂದರೆ ಬೆಟ್ಟದಲ್ಲಿ ವಾಸಿಸುವವನು ಎಂದು ಅಭಿಪ್ರಾಯ ಪಡಲಾಗಿದೆ. ಕೇರಳ ಮತ್ತು ತಮಿಳುನಾಡುಗಳಲ್ಲಿ ವಾಸಿಸುವ ಇವರನ್ನು ಕಟ್ಟನಾಯಕರು, ಶೋಲ ನಾಯಕರು, ತೇನ್ ಕುರುಮ, ಜೇನು ಕೊಯ, ಕುರುವ ಎಂಬ ಹೆಸರುಗಳಿಂದ ಕರೆಯಲಾಗಿದೆ. ಅಲ್ಲದೆ ಇದರೊಂದಿಗೆ ಜೇನುಕುರುಬ, ಕಾವಾಡಿ ಎಂಬ ಹೆಸರುಗಳಿಂದ ಕರೆಯಲಾಗುತ್ತದೆ. ತಲತಲಾಂತರಗಳಿಂದ ಇವರು ಆನೆಗಳನ್ನು ಹಿಡಿದು ಪಳಗಿಸುವುದರಲ್ಲಿ ನೈಪುಣ್ಯತೆಯನ್ನು ಹೊಂದಿದ್ದಾರೆ ಎಂದು ಹೇಳಬಹುದು. ಇವರು ಬೇರೆ ಬೇರೆ ರಾಜರುಗಳಿಗೆ ಕಾಡಿನ ಅನೆಗಳನ್ನು ಹಿಡಿದು ಪಳಗಿಸಿಕೊಡುತ್ತಿದ್ದರು. ಇಂದಿಗೂ ಮೈಸೂರು

ದಸರಾದ ವಿಜಯ ದಶಮಿಯ ದಿನ ಅಂಬಾರಿ ನಡೆಸುವ ಕಾವಾಡಿಗಳು ಜೇನುಕುರುಬರೇ ಆಗಿದ್ದಾರೆ.

ಮದರಾಸಿನ ೧೮೯೧ನೇ ಜನಗಣತಿಯ ಪ್ರಕಾರ ಜೇನುಕುರುಬರು ಮೂಲ ನಿವಾಸಿಗಳಾದ ಕುರುಬರ(ಪಲ್ಲವರ) ವಂಶಸ್ಥರೆಂದು ಸುಮಾರು ೮ನೇ ಶತಮಾನದ ಆದಿಯಲ್ಲಿ ಚೋಳ, ಕೊಂಗ, ಚಾಳುಕ್ಯ ರಾಜರು ಇವರನ್ನು ಕಾಡಿಗೆ ಅಟ್ಟಿದರು ಎಂಬ ಉಲ್ಲೇಖವಾಗಿರುವುದು ಕಂಡು ಬರುತ್ತದೆ.[೩೩] ಇವರು ಕಾಡಿನಲ್ಲೇ ಅರೆ ಅಲೆಮಾರಿಗಳಾಗಿ ವಾಸಮಾಡುತ್ತಿದ್ದು, ಇಂದಿಗೂ ಅಲೆಮಾರಿ ಜೀವನವನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ. ಈ ಕಾರಣದಿಂದ ತಾವು ವಾಸಿಸುತ್ತಿದ್ದ ಕಾಡೆಲ್ಲ ತಮಗೇ ಸೇರಿದ್ದು ಎಂದು ನಂಬಿದ್ದರು. ಇತ್ತೀಚೆಗೆ ಇವರು ತಮ್ಮ ನಿಲುವುಗಳನ್ನು ಕಾನೂನು ಕಾಯಿದೆಯ ಪ್ರಕಾರ ಬದಲಾವಣೆ ಮಾಡಿಕೊಂಡಿದ್ದಾರೆ.

**ಶಾರೀರಿಕ ಲಕ್ಷಣ:** ಜೇನುಕುರುಬರು ಸಾಮಾಜಿಕವಾಗಿ ಗುರುತಿಸಿಕೊಂಡಿರುವಂತೆ ಶಾರೀರಿಕ ವಾಗಿಯೂ ಭಿನ್ನತೆಯನ್ನು ಹೊಂದಿದ್ದಾರೆ. 'ಬೆಟ್ಟಕುರುಬರಿಗಿಂತ ಜೆನುಕುರುಬರು ಪ್ರತ್ಯೇಕವಾಗಿ ಕಾಣಿಸಿಕೊಳ್ಳುತ್ತಾರೆ. ಇವರು ಕಕೇಷಿಯನ್ನರಿಗಿಂತ ಮಂಗೋಲಿಯನ್ ಜನಾಂಗವನ್ನು ಹೆಚ್ಚಾಗಿ ಹೋಲುತ್ತಾರೆ ಹಾಗೂ ಅವರ ಮುಖದ ಕೆನ್ನೆ ಮೂಳೆಯು ಉಬ್ಬಿಕೊಂಡು ಎದ್ದು ಕಾಣುವ ಹಾಗಿದೆಯೆಂದೂ, ಮೂಗು ಚಪ್ಪಟೆಯಾಗಿ, ಚಿಕ್ಕದಾಗಿ ತುಟಿಗಳು ದಪ್ಪವಾಗಿ, ಕಣ್ಣು ಸಣ್ಣಗಿದ್ದು ಕೃಷ್ಣವರ್ಣದವರಾಗಿದ್ದಾರೆ. ಗುಂಗುರು ಕೂದಲಿದ್ದು ಬಾಚದೇ ಇರುವುದರಿಂದ ಜಡೆಗಟ್ಟಿದಂತಿರುತ್ತದೆ. ಅವರು ಮಧ್ಯಮ ಎತ್ತರದ ಮಟ್ಟಸ ಆಳುಗಳು'[೩೪] ಎಂದು ಗುರುತಿಸಿರುವುದನ್ನು ಉಲ್ಲೇಖಿಸಲಾಗಿದೆ.

**ಸಾಮಾಜಿಕ ಜೀವನ ಕ್ರಮ:** ಅರಣ್ಯವನ್ನೇ ತಮ್ಮ ಆಶ್ರಯ ತಾಣವನ್ನಾಗಿ ಮಾಡಿಕೊಂಡಿರು ವುದರಿಂದ ಅಷ್ಟೇನು ವ್ಯವಸ್ಥಿತವಲ್ಲದ ಸಣ್ಣ ಮನೆಗಳನ್ನು ನಿರ್ಮಿಸಿಕೊಂಡು ನೆಮ್ಮದಿಯ ಜೀವನವನ್ನು ನಡೆಸುತ್ತಿದ್ದ ಜೇನು ಕುರುಬರು ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿ ತಮ್ಮ ಬದುಕಿನ ಕ್ರಮವನ್ನು ಬದಲಾಯಿಸಿಕೊಂಡಿದ್ದಾರೆ. ಸ್ವಾತಂತ್ರ್ಯ ಬಂದ ನಂತರವೂ ಇವರ ಜೀವನ ಕ್ರಮದಲ್ಲಿ ವ್ಯತ್ಯಾಸ ಕಂಡುಬರುವುದಿಲ್ಲ. ೧೯೭೩ರಲ್ಲಿ ಕಬಿನಿ ನದಿಗೆ ಅಡ್ಡಲಾಗಿ ಅಣೆಕಟ್ಟೆ ಕಟ್ಟಿದ್ದರಿಂದ ಅನೇಕ ಸಾವಿರ ಎಕರೆ ಅರಣ್ಯ ಮುಳುಗಡೆಯಾಗುವುದರ ಜೊತೆಗೆ ಮುಳುಗಡೆಯಾದ ಊರುಗಳನ್ನು ಪುನಃ ಕಟ್ಟಲು ಕಾಡುಗಳನ್ನು ಕಡಿಯಬೇಕಾಗಿ ಬಂತು. ಆಗ ನಾಡಿನವರು ಕಾಡಿನವರು ಎಲ್ಲರಿಗೂ ಹತ್ತಿರ ಹತ್ತಿರವೆ ಜಾಗಗಳನ್ನು ನೀಡಲಾಯಿತು ಎಂಬುದು ಇವರ ಹಿಂದಿನ ಜೀವನ ಪದ್ಧತಿಯನ್ನು ತಿಳಿಸುತ್ತದೆ.[೩] ಕಾಡುಗಳಲ್ಲೇ ವಾಸಿಸುವ ಇವರಿಗೆ ಜೇನುಕೀಳುವುದೇ ಮೂಲ ವೃತ್ತಿಯೂ ಆಗಿತ್ತು. ಕಾಲ ಸರಿದಂತೆ ಇವರ ಬದುಕು, ವೃತ್ತಿ ಸಾಕಷ್ಟು ಪಲ್ಲಟಗೊಂಡಿವೆ. ಜೇನುಕುರುಬರು ತಮ್ಮ ಜೀವನ ವಿಧಾನವನ್ನು ಬದಲಾಯಿಸಿಕೊಂಡು

ಶೈಕ್ಷಣಿಕ, ಆರ್ಥಿಕ ಮತ್ತು ಸಾಮಾಜಿಕವಾಗಿ ಸಾಧಾರಣಮಟ್ಟಿಗೆ ಬದಲಾಗಿ ಮುಖ್ಯವಾಹಿನಿಗೆ ಮರಳಿರುತ್ತಾರೆ. ಅವರ ವೇಷ, ಭಾಷೆ, ಜೀವನ ಪದ್ಧತಿ ಭಾಗಶಃ ವ್ಯತ್ಯಾಸಗೊಂಡಿದೆ.

ಕಾಡಿನ ಮಕ್ಕಳಾದ ಇವರು ಅಲ್ಲೇ ದೊರೆಯುವ ಬಿದಿರುಗಳನ್ನು ಕತ್ತರಿಸಿ ಸಣ್ಣ ಸಣ್ಣ ಗುಡಿಸಲುಗಳನ್ನು ಆಯತಾಕಾರದಲ್ಲಿ ಕಟ್ಟುತ್ತಾರೆ. ನಾಲ್ಕು ಮರದ ಕಂಬಗಳನ್ನು ನೆಟ್ಟು ಅವುಗಳ ಮೇಲೆ ಅಡ್ಡಲಾಗಿ ಮರದ ತೊಲೆಗಳನ್ನು ಇಟ್ಟು ವಾಸಕ್ಕೆ ಯೋಗ್ಯವಾದ ರೀತಿಯಲ್ಲಿ ಗುಡಿಸಲುಗಳನ್ನು ಕಟ್ಟಿಕೊಂಡಿರುತ್ತಾರೆ. ಗುಡಿಸಿಲಿನ ಸುತ್ತಲೂ ಇರುವ ಬಿದಿರಿನ ತಡಿಕಗೆ ಹೊರಭಾಗದಿಂದ ನೆಲದಿಂದ ಮೂರು ಅಡಿಗಳ ಎತ್ತರದವರೆಗೆ ಮಣ್ಣನ್ನು ಮೆತ್ತಿಕೊಂಡು ಗೋಡೆಯ ಗಟ್ಟಿತನವನ್ನು ಹೆಚ್ಚಿಸಿಕೊಳ್ಳುತ್ತಾರೆ. ಒಳಗೆ ಬಿದಿರಿನ ಪರದೆಯನ್ನು ಕಟ್ಟಿ ಅಡುಗೆ ಕೋಣೆಯನ್ನು ಪ್ರತ್ಯೇಕಿಸಿಕೊಳ್ಳುತ್ತಾರೆ. ಇನ್ನುಳಿದ ಭಾಗ ಊಟಕ್ಕೆ ಊಟದ ಮನೆಯಾಗಿ, ಮಲಗಲು ಮಲಗುವ ಕೋಣೆಯಾಗಿ ಮಾರ್ಪಾಟಾಗುತ್ತಿರುತ್ತದೆ.

ಈ ರೀತಿಯ ಗುಡಿಸಲುಗಳನ್ನು ನಿರ್ಮಿಸಿಕೊಂಡು ಬದುಕುವ ಇವರು ಒಂದೇ ಕಡೆ ನೆಲೆ ನಿಲ್ಲುವವರಲ್ಲ. ಅಲೆಮಾರಿಗಳಂತೆ ಕಾಡಿನಲ್ಲಿಯೇ ತಮ್ಮ ಬಿಡಾರಗಳನ್ನು ಬದಲಾಯಿಸುತ್ತಿರುತ್ತಾರೆ. ಹತ್ತರಿಂದ ಹದಿನೈದು ಗುಡಿಸಲುಗಳನ್ನು ಕಟ್ಟಿಕೊಂಡು ವಾಸಿಸುವ ಇವರ ಬದುಕಿನ ರೀತಿನೀತಿಗಳು ವಿಶಿಷ್ಟವಾದವುಗಳಾಗಿವೆ. ಇವರ ಗ್ರಾಮರಚನೆ ವೃತ್ತಾಕಾರದಿಂದ ಕೂಡಿದ್ದು, ಇವುಗಳನ್ನು 'ಹಾಡಿ' ಎಂದು ಕರೆಯಲಾಗುತ್ತದೆ. ಈ ಹಾಡಿಗಳನ್ನು ನಿರ್ಮಿಸಿಕೊಳ್ಳುವುದಕ್ಕಿಂತ ಮೊದಲು ನಾವು ಗುರುತಿಸಿರುವ ಜಾಗ ನಮಗೆ ಸುರಕ್ಷಿತವೇ ಅಥವಾ ಏನಾದರೂ ತೊಂದರೆಯಾಗುತ್ತದೆಯೋ ಎಂಬುದನ್ನು ಅವರ ಜ್ಞಾನದ ಮಿತಿಯಲ್ಲಿ ಪರೀಕ್ಷಿಸಿಕೊಳ್ಳುತ್ತಾರೆ. ಒಂದು ಪ್ರದೇಶದಲ್ಲಿ ಕಲ್ಲುಗಳನ್ನು ಒಂದರ ಮೇಲೊಂದರಂತೆ ಜೋಡಿಸಿಟ್ಟು ಅವುಗಳನ್ನು ಪೂಜಿಸಿ ವಾಪಸ್ಸಾಗುತ್ತಾರೆ. ಮರುದಿನ ಹೋದಾಗ ಆ ಕಲ್ಲುಗಳು ಅವರಿಟ್ಟಂತೆಯೇ ಯಥಾವತ್ತಾಗಿದ್ದರೆ ಈ ಜಾಗ ತಮಗೆ ಸುರಕ್ಷಿತವಾದದ್ದು, ಇಲ್ಲಿ ಯಾವುದೇ ಗಾಳಿ, ಗರಗಗಳ ಅಡಚಣೆಯಿಲ್ಲ ಎಂದು ನಂಬಿ ಹಾಡಿಗಳನ್ನು ರಚಿಸಿಕೊಳ್ಳುತ್ತಾರೆ. ಯಾವ ವಿಜ್ಞಾನದ ಪ್ರಯೋಗಗಳನ್ನೂ ಅವಲಂಬಿಸದ ಈ ಜನ ತಾವೇ ನಿರ್ಮಿಸಿಕೊಂಡ ನಿಯಮಗಳಿಗನು ಸಾರವಾಗಿ ಹಾಡಿಗಳನ್ನು ರಚನೆ ಮಾಡಿಕೊಳ್ಳುವುದು ಕಂಡುಬರುತ್ತದೆ.

**ಅ. ಆಚರಣೆಗಳು**

ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಅಷ್ಟೇನು ಉತ್ತಮ ಸ್ಥಿತಿಯಲ್ಲಿಲ್ಲದ ಜೇನುಕುರುಬರು ತಮ್ಮ ಸಾಂಸ್ಕೃತಿಕ ಅಭಿವ್ಯಕ್ತಿಯಲ್ಲಿ ಶ್ರೀಮಂತಿಕೆಯನ್ನು ಹೊಂದಿದ್ದಾರೆ. ಜನನ, ಮರಣ, ಮದುವೆ ಮುಂತಾದವುಗಳನ್ನು ಸಾಂಪ್ರದಾಯಿಕವಾಗಿ ಯಾವುದೇ ಆಡಂಬರಗಳಿಲ್ಲದೆ, ಧಾರ್ಮಿಕ ಶ್ರದ್ಧಾ ಭಕ್ತಿಗಳಿಂದ ಆಚರಿಸಿಕೊಂಡು ಬರುತ್ತಿದ್ದಾರೆ.

**ಜನನ:** ಜೇನುಕುರುಬರ ಸ್ತ್ರೀಯರು ಗರ್ಭಿಣಿಯರಾಗಿರುವಾಗ ಯಾವುದೇ ಆರೈಕೆಯೂ ಇಲ್ಲದೆ ಮಕ್ಕಳಿಗೆ ಜನ್ಮ ನೀಡುತ್ತಾರೆ. ತಮ್ಮ ಗುಡಿಸಲುಗಳಲ್ಲಿಯೇ, ಕೆಲವು ಸಂದರ್ಭಗಳಲ್ಲಿ ಕೂಲಿ ಕೆಲಸಕ್ಕೆಂದು ಹೋದಾಗ ಅಲ್ಲಿಯೇ ಅವರಿಗೆ ಹೆರಿಗೆಯಾಗಿರುವುದು ಕಂಡು ಬಂದಿದೆ. ಇವರು ಮಗು ಹುಟ್ಟಿದ ಕೂಡಲೇ ಹೊಕ್ಕುಳ ಬಳ್ಳಿಯನ್ನು ಬಿದಿರು ಕೊಳವೆಯಿಂದ ಕತ್ತರಿಸುತ್ತಾರೆ. ಮಗು ಹುಟ್ಟಿದ ಕೂಡಲೇ ಒಂದು ತಟ್ಟೆಯನ್ನು ಬಡಿಯಲಾಗುತ್ತದೆ. ಹಿಂದೆ ಕಂಚಿನ ತಟ್ಟೆಯನ್ನು ಬಡಿಯಲಾಗುತ್ತಿತ್ತು. ಇಂದು ಸ್ಟೀಲ್ ತಟ್ಟೆಯನ್ನೆ ಬಡಿಯುತ್ತಾರೆ. ಈ ಶಬ್ದವನ್ನು ಕೇಳಿ ಮಗು ಅಳಬೇಕು ಎಂಬುದು ಇದರ ಉದ್ದೇಶವಾಗಿದ್ದು, ಅತ್ತರೆ ಮಾತ್ರ ಮಗು ಅರೋಗ್ಯವಾಗಿದೆ ಎಂಬ ನಂಬಿಕೆ ಇವರದು. ಜನನವಾದ ಸ್ವಲ್ಪ ಸಮಯದಲ್ಲಿ ಮಗುವಿಗೆ ಅರ್ಧ ಚಮಚ ಹರಳೆಣ್ಣೆ ಕುಡಿಸಿದರೆ ತಾಯಿಗೆ ಗಾಳಿ ಸೊಪ್ಪಿನ ರಸವನ್ನು ಕುಡಿಸುತ್ತಾರೆ. ಮೂರು ತಿಂಗಳು ತುಂಬುವವರೆಗೆ ಗುಡಿಸಿಲಿನ ಹೊರಗೇ ಇರಿಸುತ್ತಾರೆ. ಮೂರು ತಿಂಗಳ ನಂತರ ತಾಯಿ ಮತ್ತು ಮಗುವನ್ನು ನೀರೆರೆದು ಗುಡಿಸಲಿನ ಒಳಗೆ ಕರೆದು ಕೊಂಡು ಮಗುವನ್ನು ತೊಟ್ಟಿಲಿಗೆ ಹಾಕುವ ಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ.

ನಾಮಕರಣದ ಸಮಯದಲ್ಲಿ ದೇವರಿಗೆ ಹಣ್ಣು ಕಾಯಿಗಳನ್ನು ಸಮರ್ಪಿಸುವ ಮೂಲಕ ಶಾಸ್ತ್ರವನ್ನು ಪೂರೈಸುತ್ತಾರೆ. ಗಂಡು ಮಕ್ಕಳಿಗೆ ಕಾಳ, ಮಾದ, ಮರಿಯ, ದೇವ ಮೊದಲಾದ ಹೆಸರುಗಳನ್ನಿಟ್ಟರೆ, ಹೆಣ್ಣು ಮಕ್ಕಳಿಗೆ ಕಾಳಿ, ಕೆಂಚಿ, ಮಾದಿ ಮೊದಲಾದ ಹೆಸರುಗಳನ್ನು ಇಡುತ್ತಾರೆ. ಮೊದಲ ಮೂರು ತಿಂಗಳು ಮಾತ್ರ ಗಂಡ–ಹೆಂಡತಿ ತಮ್ಮ ಮಗುವನ್ನು ಜೋಪಾನ ಮಾಡಿಕೊಳ್ಳುತ್ತಾರೆ. ನಂತರ ತಾಯಿ ತಾನು ದುಡಿಯುವಲ್ಲಿಗೇ ಕರೆದುಕೊಂಡು ಹೋಗುತ್ತಾಳೆ. ಮಗು ಅದೇ ವಾತಾವರಣದಲ್ಲಿ ಬೆಳೆಯುತ್ತದೆ. ಯಾವುದೇ ಮೂಲ ಸೌಲಭ್ಯಗಳಿಲ್ಲದೆ ಬೆಳೆಯುವ ಹಾಡಿಯ ಮಕ್ಕಳು ಪ್ರಕೃತಿಯ ಒಡನಾಟದಲ್ಲಿಯೇ ಬೆಳೆದು ಜೀವನದಲ್ಲಿ ಎದುರಾಗಬಹುದಾದ ಯಾವುದೇ ಸಂಕಷ್ಟಗಳನ್ನು ಧೈರ್ಯದಿಂದ ಪರಿಹರಿಸಿಕೊಳ್ಳುವ ವಿಶ್ವಾಸವನ್ನು ಗಳಿಸಿಕೊಳ್ಳುತ್ತಾರೆ ಮತ್ತು ಬದುಕಿ ತೋರಿಸುತ್ತಾರೆ.

**ಮರಣ:** ಇವರು ಶವವನ್ನು ಹೂಳುವ ಮತ್ತು ಸುಡುವ ಪದ್ಧತಿಯನ್ನು ಅನುಸರಿಸುತ್ತಾರೆ. ಅಕಾಲಿಕ ಮರಣ ಬಂದರೆ ಅಂಥವರನ್ನು ಸುಡುವುದು, ಸ್ವಾಭಾವಿಕವಾಗಿ ವಯಸ್ಸಾಗಿ ಸತ್ತರೆ ಅವರನ್ನು ಹೂಳುತ್ತಾರೆ. ಸಂಸ್ಕಾರದ ಸಮಯದಲ್ಲಿ ವಿವಾಹಿತರು ಹಾಗೂ ಅವಿವಾಹಿತರು ಇಬ್ಬರಿಗೂ ಒಂದೇ ರೀತಿಯ ಶಾಸ್ತ್ರವಿರುತ್ತದೆ. ಹೆಣವನ್ನು ಕೊಂಡೊಯ್ಯಲು 'ಸಟ್ಟೆ–ಬಡಿ' ಎಂದು ಕರೆಯಲ್ಪಡುವ ಚಟ್ಟವನ್ನು ಕಟ್ಟುತ್ತಾರೆ. ಇದನ್ನು ಹೂಗಳಿಂದ ಅಲಂಕರಿಸಿ ನಾಲ್ಕು ಜನ ಹೊತ್ತುಕೊಂಡೊಯ್ಯುತ್ತಾರೆ. ಐದು ಜನ ಗುಂಡಿ ತೆಗೆಯುವ ಕಾರ್ಯ ಮಾಡುತ್ತಾರೆ. ಶವವನ್ನು ಗುಂಡಿಯೊಳಗೆ ಮಲಗಿಸುವುದರಿಂದ ಹಿಡಿದು ಕಡೆಯ ಪೂಜೆಯವರೆಗೂ ಎಲ್ಲಾ ಶಾಸ್ತ್ರಗಳನ್ನು ಹಾಡಿಯ ಯಜಮಾನನೇ ಮಾಡುತ್ತಾನೆ.

ಜೇನುಕುರುಬರು ವಾಸ ಮಾಡುವ ಗುಡಿಸಲಿನಲ್ಲಿ ಯಾವುದೇ ವ್ಯಕ್ತಿ ಪ್ರಾಣ ಬಿಡದ ಹಾಗೆ ಎಚ್ಚರ ವಹಿಸುತ್ತಾರೆ. ಒಂದು ವೇಳೆ ಮರಣ ಹೊಂದಿದರೆ ಅವರು ನೆರಳು ಅಥವಾ ಭೂತ, ಪಿಶಾಚಿಯಾಗಿ ಇಲ್ಲೆ ಸುತ್ತುತ್ತಿರುತ್ತಾರೆ ಎಂಬ ಭಯದಿಂದ ಗುಡಿಸಲಿನಲ್ಲಿ ಯಾರೂ ಸಾಯದಂತೆ ನೋಡಿಕೊಳ್ಳುತ್ತಾರೆ. ಯಾವುದೇ ವ್ಯಕ್ತಿ ಸಾವಿನ ಸನಿಹದಲ್ಲಿದ್ದಾನೆ ಎಂದು ಗೊತ್ತಾದ ಕೂಡಲೆ ಆತನನ್ನು ಮನೆಯಿಂದ ಹೊರಗೆ ಹಜಾರದಲ್ಲಿ ಮಲಗಿಸುವ ಏರ್ಪಾಡು ಮಾಡುತ್ತಾರೆ. ಹೀಗೆ ಮನೆಯೊಳಗೇ ಪ್ರಾಣ ಬಿಟ್ಟ ವ್ಯಕ್ತಿಯನ್ನು ಸಂಸ್ಕಾರ ಮಾಡಿದ ನಂತರ ಅದಕ್ಕೆ ಪರಿಹಾರವಾಗಿ ಒಂದು ಕೋಳಿ, ನಿಂಬೆ ಕಾಯಿ ಕತ್ತರಿಸಿ ಬಲಿಕೊಡುವುದುಂಟು. ಸಮಾಧಿಯ ಮೇಲೆ ಒಂದು ಕಳಸವನ್ನು ಇಟ್ಟು ಒಂದು ಮಂಡಲವನ್ನು ಮಾಡುತ್ತಾರೆ. ಈ ಸಮಯದಲ್ಲಿ ಇವರು ಹೇಳುವ ಒಂದು ಮಂತ್ರ ಹೀಗಿದೆ.

'ಆರು ಬಲೆ, ತೂರು ಬಲೆ, ಎಪ್ಪತ್ತೇಳು ಬಲೆ, ಆತಗಣ, ಭೂತಗಣ, ತಪ್ಪಿತೊದ್ರಿ ಬಂದಾದು ಉಂಟಾದ್ರೆ ಎನ್ನ ಗುರು ಪಾದದಲ್ಲಿ ನಿಲ್ಲಬೇಕು. ಹಿಂದೆ ಬಂದ್ರೆ ಮುಂದೆ ಕಟ್ಟು, ನೆತ್ತಿ ಮೇಲೆ ನಾರಾಯಣ ಕಾವ್ಲು, ಬೆನ್ನ ಮೇಲೆ ಬ್ರಹ್ಮದೇವ್ರು ಕಾವ್ಲು...' ಹೀಗೆ ಹೇಳುತ್ತಾ ಒಂದು ಕೋಳಿ ಕೊಯ್ದು, ಕಾಯಿ ಒಡೆದು, ಅಡಿಕೆ, ಬೀಡಿ, ಬೆಂಕಿ ಪೊಟ್ಟಣ, ಕೋಳಿ ಮೊಟ್ಟೆ, ನಿಂಬೆ ಕಾಯಿ ಹಸಿಗೋಟು, ತಗಡು ಮುಂತಾದವುಗಳನ್ನೆಲ್ಲ ಸಮಾಧಿಯ ಮೇಲಿಟ್ಟು ಮಂತ್ರವನ್ನು ಪಠಿಸುತ್ತಾರೆ.[೩೬] ಈ ರೀತಿಯಲ್ಲಿ ಆಹಾರ ಪದಾರ್ಥಗಳು ಹಾಗೂ ಬೀಡಿ ಬೆಂಕಿ ಪೊಟ್ಟಣಗಳನ್ನೆಲ್ಲ ಇಡುವುದು ಕ್ಷುದ್ರ ದೇವತೆಗಳನ್ನು ಸಂತುಷ್ಟಿಗೊಳಿಸುವ ಪ್ರಯತ್ನವೆಂದು ಹೇಳಬಹುದು. ಇವೆಲ್ಲ ಮನುಷ್ಯ ಸಮಾಧಾನಕ್ಕೆಂದು ಸ್ಥಾಪಿಸಲ್ಪಟ್ಟ ಆಚರಣೆಗಳೇ ಆಗಿವೆ.

**ಆ. ವಿವಾಹ ಪದ್ಧತಿ**

ಜೇನುಕುರುಬರಲ್ಲಿರುವ ವೈವಾಹಿಕ ಸಂಬಂಧಗಳು ಹಿಂದೆ ಬಹಳ ಭಿನ್ನವಾಗಿದ್ದವು ಎಂದು ತಿಳಿದುಬರುತ್ತದೆ. ಇವರು ಸಾಂಪ್ರದಾಯಿಕವಾದ ವಿವಾಹ ಬಂಧನಗಳಿಗಿಂತ ಹುಡುಗ ಹುಡುಗಿ ಪರಸ್ಪರ ಮೆಚ್ಚಿ ವಿವಾಹವಾಗಿ ಪ್ರತ್ಯೇಕ ವಾಸಮಾಡುವುದು ರೂಢಿಯಲ್ಲಿತ್ತು. ಕ್ರಮೇಣ ಬೇರೆ ಬೇರೆ ಜನಸಂಪರ್ಕದಿಂದಾಗಿ ಕೆಲವೊಂದು ಬದಲಾವಣೆ ಮಾಡಿಕೊಂಡು ಗುರುಹಿರಿಯರ ಸಮ್ಮುಖದಲ್ಲಿ ವಿವಾಹವಾಗುವುದನ್ನು ಅಳವಡಿಸಿಕೊಂಡಿದ್ದಾರೆ.

ಇವರ ಹಾಡಿಗಳಲ್ಲಿ ಯಾರದ್ದಾದರು ಮನೆಯಲ್ಲಿ ಪ್ರಾಯಕ್ಕೆ ಬಂದಿರುವ ಹುಡುಗಿಯ ಮನೆಗೆ ಹುಡುಗನ ಮನೆಯವರು ತೆರಳುತ್ತಾರೆ. ಮದುವೆಗೆ ಹೆಣ್ಣಿನ ಮನೆಯವರು ಒಪ್ಪಿದರೆಂದರೆ ಹುಡುಗಿಯ ಮುಂದೆ ಒಂದು ಬಟ್ಟೆಯನ್ನು ಹಾಸಿ ಅದರ ಮೇಲೆ ವೀಳ್ಯದೆಲೆ, ಹೂಗಳನ್ನು ಇಟ್ಟು, ಅದರ ಮೇಲೆ ತೆರವಾಗಿ ಒಂದಷ್ಟು ಹಣವನ್ನು ಇಡುವುದರ ಮೂಲಕ ನಿಶ್ಚಿತಾರ್ಥ ಶಾಸ್ತ್ರವನ್ನು ನೆರವೇರಿಸುತ್ತಾರೆ.

ಕೆಲವೊಮ್ಮೆ ಹುಡುಗಿ ಇನ್ನು ಚಿಕ್ಕವಳಿರುವಾಗಲೇ ಇವಳು ಇಂಥವನಿಗೇ ಮದುವೆಯಾಗಬೇಕು ಎಂದು ತೀರ್ಮಾನವಾಗಿರುತ್ತದೆ. ಅಂತಹ ಸಂದರ್ಭಗಳಲ್ಲಿ ಹುಡುಗ ತನಗೆ ಗೊತ್ತಾದ ಹುಡುಗಿಯ ಮನೆಯಲ್ಲಿಯೇ ಇದ್ದು, ಅವರೊಡನೆ ತಾನೂ ದುಡಿಯುತ್ತ ಸಂಪಾದಿಸಿದ ಹಣವನ್ನು ಅವರಿಗೂ ಕೊಡುತ್ತಾ ಕಾಲ ಕಳೆಯುತ್ತಾನೆ. ಹುಡುಗಿ ಮೈ ನೆರೆದಳು ಎಂದು ಗೊತ್ತಾದ ಕೂಡಲೇ ಅವಳನ್ನು ಮದುವೆ ಮಾಡಿಕೊಂಡು ಬೇರೆ ಗುಡಿಸಲು ಕಟ್ಟಿಕೊಂಡು ವಾಸ ಮಾಡಲು ತೊಡಗುತ್ತಾನೆ. ಹಿರಿಯರ ನೇತೃತ್ವದಲ್ಲಿ ನಿಶ್ಚಯವಾಗಿದ್ದ ಸಮಯಗಳಲ್ಲಿಯೂ ಹುಡುಗನೆ ಹುಡುಗಿಯ ಮನೆಗೆ ಹೋಗಿ ಅತ್ತೆಗೆ ಸೀರೆ, ಮಾವನಿಗೆ ಪಂಚೆಯನ್ನು ಹಾಗೂ ಹುಡುಗಿಗೆ ಸೀರೆ, ಸರಗಳನ್ನು ಕೊಟ್ಟು, ಹುಡುಗಿಯನ್ನು ತನ್ನ ಜೊತೆಯಲ್ಲಿ ಕರೆದು ಕೊಂಡು ಬರುತ್ತಾನೆ. ಹೀಗೆ ಮಾಡುವುದರ ಮೂಲಕವೂ ವಿವಾಹ ಶಾಸ್ತ್ರಬದ್ಧವಾಗಿ ನಡೆದಂತಾಗುತ್ತದೆ.

ಶಾಸ್ತ್ರಬದ್ಧವಾಗಿ ನಡೆಯುವ ಮದುವೆಗಳಲ್ಲಿ ಹುಡುಗಿಯ ಮನೆಯಲ್ಲೇ ಧಾರಾ ಮುಹೂರ್ತ ನಡೆಯುತ್ತದೆ. ಗಂಡು ಮತ್ತು ಹೆಣ್ಣಿನ ಮನೆಗಳಲ್ಲಿ ಚಪ್ಪರಗಳನ್ನು ಹಾಕಿರುತ್ತಾರೆ. ಹೆಣ್ಣಿನ ಮನೆಯ ಚಪ್ಪರದಲ್ಲಿ ಒಂದು ಧಾರಾಮಂಟಪವನ್ನು ಕಟ್ಟಿರುತ್ತಾರೆ. ಇದರಲ್ಲಿ ಹಸೆಮಣೆಯನ್ನು ಇಟ್ಟು ಅದರ ಮುಂದೆ ಐದು ತಟ್ಟೆಗಳಲ್ಲಿ, ಒಂದರಲ್ಲಿ ನೀರಿರುವ ಚೊಂಬು, ಅದರಲ್ಲಿ ಒಂದು ನಾಣ್ಯ, ಐದು ಎಲೆ ಹಾಗೂ ಅದರ ಮೇಲೆ ಒಂದು ತೆಂಗಿನಕಾಯಿ, ಎರಡನೆಯದರಲ್ಲಿ ಎಲೆ ಅಡಿಕೆ, ಮೂರನೆಯದರಲ್ಲಿ ಐದು ಚಿಪ್ಪು ಬಾಳೆಹಣ್ಣು, ನಾಲ್ಕನೆಯದರಲ್ಲಿ ಅಕ್ಕಿ, ಐದನೆಯದರಲ್ಲಿ ಬೆಲ್ಲ ಇಟ್ಟಿರುತ್ತಾರೆ. ಹೆಣ್ಣಿಗೆ ಕಟ್ಟುವ ತಾಳಿಯನ್ನು ಬೆಲ್ಲದ ತಟ್ಟೆಯಲ್ಲಿಡುವುದು ಇವರು ರೂಢಿಸಿಕೊಂಡಿರುವ ಪದ್ಧತಿ. ಧಾರಾಮುಹೂರ್ತ ಮುಗಿದ ನಂತರ ಆರ್ಥಿಕವಾಗಿ ಬಲವಾಗಿರುವವರು ತಮಗೆ ಸಾಧ್ಯವಾದಷ್ಟು ಉತ್ತಮ ರೀತಿಯಲ್ಲಿ ಔತಣವನ್ನು ಏರ್ಪಡಿಸುತ್ತಾರೆ. ಸಂತೋಷಕ್ಕಾಗಿ ಕೋಲಾಟವನ್ನೂ ಮಾಡುತ್ತಾರೆ.

ಜೇನುಕುರುಬರಲ್ಲಿ ಮದುವೆ ಆದ ನಂತರ ಗಂಡ–ಹೆಂಡತಿ ಪ್ರತ್ಯೇಕವಾಗಿ ವಾಸಿಸುವುದು ಕಡ್ಡಾಯ. ಏಕೆಂದರೆ ಅತ್ತೆಯ ಮುಖ ಅಳಿಯ ಹಾಗೂ ಸೊಸೆಯ ಮುಖ ಮಾವ ಪರಸ್ಪರ ನೋಡಿಕೊಳ್ಳವಂತಿಲ್ಲ ಎಂಬ ನಿಷೇಧಗಳನ್ನು ಮಾಡಿಕೊಂಡಿದ್ದಾರೆ. ಈ ರೀತಿಯ ನಿಯಮಗಳ ಹಿಂದೆ ಮದುವೆಯ ನಂತರ ದಂಪತಿಗಳು ಪ್ರತ್ಯೇಕ ವಾಸಿಸಲು ಅನುವುಮಾಡಿಕೊಟ್ಟು ಅವರ ಸಾಂಸಾರಿಕ ಬದುಕಿಗೆ ಅನುಕೂಲಮಾಡಿಕೊಡುವುದಾಗಿತ್ತು.

**ಇ. ಹಬ್ಬಗಳು**

ಕೊಡಗಿನ ಪ್ರಮುಖ ಜನಾಂಗವೆಂದೇ ಭಾವಿಸಲಾಗಿರುವ ಕೊಡವರ ಸಂಸ್ಕೃತಿಯನ್ನು ಕುರಿತು ಅಧ್ಯಯನದ ಜೊತೆಗೆ ಇಲ್ಲಿನ ಮೂಲನಿವಾಸಿಗಳ ಬಗೆಗೂ ಅಧ್ಯಯನಗಳು ನಡೆದಿವೆ. ಇವರ ಭಾಷೆ, ವೇಷ, ಹಬ್ಬ, ಮದುವೆ, ಜನನ, ಮರಣ ಮುಂತಾದ ಆಚಾರಗಳ ಕುರಿತು ಉಪಸಂಸ್ಕೃತಿಯ ಹಿನ್ನೆಲೆಯಲ್ಲಿ ಸಂಶೋಧನೆಗಳು ನಡೆದಿವೆ. ಆದರೂ ಕೊಡವರ ಹಾಗೂ ಮೇಲ್ವರ್ಗದವರ ಹಬ್ಬಗಳಿಗಿರುವಷ್ಟು ಪ್ರಾಧಾನ್ಯತೆ ಬುಡಕಟ್ಟಿನವರ ಹಬ್ಬಗಳಿಗಿಲ್ಲವೆಂದೇ

ಹೇಳಲಾಗುತ್ತಿದೆ. ಕೊಡಗನ್ನು ಕುರಿತು ಬರೆಯುವವರೆಲ್ಲಾ ಕೊಡವರ ಸಂಸ್ಕೃತಿಯನ್ನು ಕಟ್ಟಿಕೊಡುವ ಭರದಲ್ಲಿ ಉಳಿದವರನ್ನು ನಗಣ್ಯವಾಗಿಸಿರುವುದನ್ನು ಗಮನಿಸಬಹುದು.

**ಕುಂಡೆ ಹಬ್ಬ**

ಕಾಡಿನ ಸಂಸ್ಕೃತಿಯನ್ನು ಅಳವಡಿಸಿಕೊಂಡು ಈ ಜಿಲ್ಲೆಯಲ್ಲಿ ತಲತಲಾಂತರಗಳಿಂದ ಬದುಕಿ ಬರುತ್ತಿರುವ ಜೇನುಕುರುಬರ ಸಂಸ್ಕೃತಿಯೇ ಬೇರೆಯಾದದ್ದು. ಕೊಡಗಿನ ಬುಡಕಟ್ಟು ಜನರು ಕೊಡವರ ಹಬ್ಬಗಳಾದ ಕೈಲ್‌ಮುಹೂರ್ತ, ಕಾವೇರಿ ಸಂಕ್ರಮಣ ಮತ್ತು ಹುತ್ತರಿಗಳನ್ನು ಆಚರಿಸುವ ಮೂಲಕ ಕೊಡಗಿನ ಸಂಸ್ಕೃತಿಯನ್ನು ಪ್ರದರ್ಶಿಸುತ್ತಾರೆ. ಆದರೂ ಇಲ್ಲಿನ ಮೂಲನಿವಾಸಿಗಳೆನಿಸಿದ ಜೇನುಕುರುಬರು ಆಚರಿಸುವ "ಕುಂಡೆ ಹಬ್ಬ" ಬಹಳ ವಿಶಿಷ್ಟ ಹಾಗೂ ವಿಚಿತ್ರವಾದುದು ಎಂದೇ ಹೇಳಬಹುದು. ಆಚರಣೆಯ ಸಂದರ್ಭದಲ್ಲಿ ಕೈಯಲ್ಲೊಂದು ಸೋರೆಬುರುಡೆಯನ್ನು ಹಿಡಿದುಕೊಳ್ಳುವುದರಿಂದ ಇದನ್ನು "ಬುಂಡೆ ಹಬ್ಬ" ಎಂಬ ಹೆಸರಿನಿಂದಲೂ ಹಾಗೂ ಈ ಹಬ್ಬದಲ್ಲಿ ಅಶ್ಲೀಲ ಬೈಗುಳಗಳು ನಿರರ್ಗಳವಾಗಿ ಪ್ರಯೋಗವಾಗುವುದರಿಂದ ಇದನ್ನು 'ಬೈಗುಳ ಹಬ್ಬ'ವೆಂತಲೂ ಕರೆಯುತ್ತಾರೆ. ಶಿಷ್ಟಾಚಾರಗಳನ್ನೆಲ್ಲ ಬದಿಗೊತ್ತಿ ಆಚರಿಸಲ್ಪಡುವ ಈ ಹಬ್ಬದ ಹೆಸರನ್ನು ಕೇಳಲು ಮತ್ತು ಹೇಳಲೂ ಮುಜುಗರವೆನಿಸುತ್ತದೆ. ಆದರೆ ಈ ಸಮುದಾಯ ಮಾತ್ರ ಯಾವ ಮುಲಾಜು ಇಲ್ಲದೆ ಅಶ್ಲೀಲವೆನಿಸುವ ಅನೇಕ ಬೈಗುಳ ಶಬ್ದಗಳನ್ನು ಸರಾಗವಾಗಿ ಬಳಸಿ ಸಂಭ್ರಮಿಸುವುದನ್ನು ಕಾಣುತ್ತೇವೆ. ಬಹುಶಃ ಇಂತಹ ಹಬ್ಬವನ್ನು ಕೊಡಗಿನಲ್ಲಿ ಹೊರತುಪಡಿಸಿದರೆ ಬೇರೆಲ್ಲಿಯೂ ಕಾಣಲು ಸಿಗುವುದಿಲ್ಲ. ಮುಖ್ಯವಾಗಿ ವೀರಾಜಪೇಟೆ ತಾಲೂಕಿನ ಗೋಣಿಕೊಪ್ಪದ ಸಮೀಪವಿರುವ ದೇವರಪುರದಲ್ಲಿ ಮೇ ತಿಂಗಳಿನಲ್ಲಿ ಈ ಹಬ್ಬ ಆಚರಿಸಲ್ಪಡುತ್ತದೆ. ಅಲ್ಲದೆ ತಿತಿಮತಿ, ಪಾಲಿಬೆಟ್ಟ, ಪೊನ್ನಂಪೇಟೆ ಹಾಗೂ ಸುತ್ತಮುತ್ತಲ ಪ್ರದೇಶಗಳಲ್ಲೂ ಆಚರಿಸಲ್ಪಡುತ್ತದೆ. ಬೈಗುಳಗಳೇ ಮುಖ್ಯವಾದ ಈ ಹಬ್ಬವನ್ನು ಎಂದಿನ ಸಂಪ್ರದಾಯದಂತೆ ಆಚರಿಸಿಕೊಂಡು ಬರುತ್ತಿರುವುದನ್ನು ಅವರ ಸಂಸ್ಕೃತಿಯ ಒಂದು ಭಾಗವಾಗಿ ಗುರುತಿಸಬಹುದು.

**ಹಿನ್ನೆಲೆ:** ಜೇನುಕುರುಬರು ಅಯ್ಯಪ್ಪ ದೇವರ ಪರಮಭಕ್ತರಾಗಿದ್ದು, ಪ್ರತಿದಿನ ಅಯ್ಯಪ್ಪನನ್ನು ಕಂಡು ಅವನ ಮಾರ್ಗದರ್ಶನ ಪಡೆಯುತ್ತಾರೆ ಎಂದು ಹೇಳಲಾಗುತ್ತದೆ. ಒಂದು ದಿನ ಅಯ್ಯಪ್ಪ ಬೇಟೆಗಾಗಿ ಇವರನ್ನೆಲ್ಲಾ ಕಾಡಿಗೆ ಹೋಗೋಣವೆಂದು ಕರೆದೊಯ್ಯುತ್ತಿರುವಾಗ ದಾರಿನಡುವೆ ಭಗವತಿಯನ್ನು ಕಂಡು ಆಕೆಯೊಡನೆ ತೆರಳುತ್ತಾನಂತೆ. ಹೀಗೆ ಜೊತೆಯಲ್ಲಿದ್ದವರಿಗೆ ತನ್ನ ಹಿಂಬದಿಯನ್ನು ತೋರಿಸಿ ಮರೆಯಾದ ಅಯ್ಯಪ್ಪನ ಬಗ್ಗೆ ಕೋಪಗೊಂಡು ಅವನ ಕುಂಡೆಯನ್ನು ಅಣಕಿಸಿ ಬಯ್ಯತೊಡಗಿದರಂತೆ. ಈ ಪ್ರಸಂಗವನ್ನೇ ಒಂದು ಆಚರಣೆಯಾಗಿ ಮಾಡಿಕೊಂಡು ಪ್ರತಿವರ್ಷ ನಿರ್ದಿಷ್ಟ ಸಂದರ್ಭದಲ್ಲಿ ಪುನರಾವರ್ತನೆ ಮಾಡುತ್ತಾ ಬಂದರು. ಇದೇ ಕಾಲಕ್ರಮೇಣ "ಕುಂಡೆ ಹಬ್ಬ"ವಾಗಿದೆಯೆಂದು ಹೇಳಲಾಗುತ್ತಿದೆ.[೩೭] ಮೇ ತಿಂಗಳ ಮೂರನೇ ಗುರುವಾರ

ಅಯ್ಯಪ್ಪ ದೇವಾಲಯದಲ್ಲಿ ಸೇರಿ ಮನಸಾರೆ ಬೈಯ್ದು ಹರಕೆ ತೀರಿಸುವ ಈ ಜನ ಅದೇ ದಿನ ದೇವರಲ್ಲಿ ಕ್ಷಮೆಯನ್ನೂ ಕೇಳುತ್ತಾರೆ.

**ಆಚರಣೆಯ ವಿಧಾನ:** ವರ್ಷವಿಡೀ ಕಾಫಿ ತೋಟಗಳಲ್ಲಿ ಮೈಮುರಿಯುವ ಹಾಗೆ ದುಡಿಯುವ ಈ ಜನರು ಹಬ್ಬದ ದಿನ ಕೆಲವರು ಕೈಯಲ್ಲೊಂದು ಸೋರೆಬುರುಡೆಯನ್ನು ಹಿಡಿದುಕೊಂಡು, ಅದಕ್ಕೆ ವಿವಿಧ ರೀತಿಯ ಬಣ್ಣಗಳನ್ನು ಬಳಿದುಕೊಂಡು, ತರತರದ ಶಬ್ದ ಮಾಡಿಕೊಂಡು, ತಲೆಕೂದಲಿಗೆ ಬಲೂನು, ರಿಬ್ಬನ್, ಹೂವಿನ ಅಲಂಕಾರ, ಕೈಗೆ, ಕೆನ್ನೆಗೆ ಬಣ್ಣವನ್ನು ಪೂಸಿಕೊಂಡು ಚಿತ್ರವಿಚಿತ್ರವಾದ ಬಟ್ಟೆಗಳನ್ನು ತೊಟ್ಟಿರುತ್ತಾರೆ. ಗಂಡಸರು ನೈಟಿ, ಸೀರೆ, ಲಂಗ ಮೊದಲಾದ ಸ್ತ್ರೀ ವೇಷ ಧರಿಸಿದರೆ, ಹೆಂಗಸರು ಪ್ಯಾಂಟು ಶರ್ಟ್‌ಗಳನ್ನು ತೊಡುತ್ತಾರೆ. ಅನೇಕರು ಕಣ್ಣಿಗೆ ಕಪ್ಪು ಕನ್ನಡಕವನ್ನು ಧರಿಸುತ್ತಾರೆ. ಬೀದಿ ಬೀದಿ ಸುತ್ತುತ್ತಾ ಹಣವನ್ನು ಸಂಗ್ರಹಿಸುವ ಕಡೆಗೆ ಒಲವು ತೋರುತ್ತಾರೆ.

ವರ್ಷಗಳು ಕಳೆದಂತೆ ಹಬ್ಬದ ಆಚರಣಾ ವಿಧಾನ, ವೇಷ ಭೂಷಣಗಳಲ್ಲೂ ಮಾರ್ಪಾಡುಗಳನ್ನು ಮಾಡಿಕೊಳ್ಳುವುದನ್ನು ರೂಢಿಸಿಕೊಳ್ಳುತ್ತಿದ್ದಾರೆ. ಇವರ ದೇಹಗಳ ಮೇಲೆ ಹಲಸಿನ ಹಣ್ಣಿನ ಭಾಗ, ಕಾಜಾಣದ ಗೂಡುಗಳು, ಹಣ್ಣಿನಿಂದಲೇ ಮಾಡಿದ ಕನ್ನಡಕ, ಮರದ ಬಂದೂಕುಗಳು, ನೀರಿನ ಖಾಲಿ ಬಾಟಲಿಗಳು, ಬಾಟಲಿಯ ಮುಚ್ಚಳಗಳಿಂದ ಮಾಡಿದ ಹಾರ, ವಾಹನಗಳಿಗೆ ಬಳಸುವ ತೈಲವನ್ನು ಮೈಯೆಲ್ಲ ಪೂಸಿಕೊಳ್ಳುವುದು, ಚರ್ಮಕ್ಕೆ ಬಿಳಿ, ನೀಲಿ, ಕೆಂಪು ಬಣ್ಣಗಳನ್ನು ಬಳಿದುಕೊಂಡು, ತಲೆಗೆ ವಿವಿದ ಬಣ್ಣದ ವಿಗ್‌ಗಳು, ಮಿನಿ ಸ್ಕರ್ಟ್‌ಗಳನ್ನು ಧರಿಸುವ ಮೂಲಕ ಆಧುನಿಕತೆಯ ಲೇಪನ ಹಚ್ಚಿ ಹಬ್ಬವನ್ನು ನೂತನಗೊಳಿಸುವ ಪ್ರಯತ್ನ ಮಾಡುತ್ತಿದ್ದಾರೆ.

ಬೀದಿ ಬೀದಿಗಳಲ್ಲಿ 'ಕುಂಡೆ.. ಕುಂಡೆ.. ಕ್ಕು.. ಕ್ಕು.. ಅಂತ ಜೋರಾಗಿ ಕಿರುಚಿಕೊಂಡು ಮಕ್ಕಳು, ಮುದುಕರು, ಹೆಂಗಸರು, ಗಂಡಸರಾದಿಯಾಗಿ ಅಶ್ಲೀಲವಾಗಿ ಹಾಡುತ್ತಾ ಮುಂದೆ ಸಾಗುತ್ತಾರೆ. ಹೀಗೆ ಸಾಗುವಾಗ ಅವರ ಬಾಯಿಂದ ಮುಜುಗರ ಹುಟ್ಟಿಸುವ ಬೈಗುಳಗಳು, ಮಾತುಗಳು ಪುಂಖಾನುಪುಂಖವಾಗಿ ಬರುತ್ತಿರುತ್ತವೆ. ಎಷ್ಟೋ ಜನ ಸುಶಿಕ್ಷಿತರು ಇಲ್ಲಿ ನಿಲ್ಲದೆ ಅವರಿಗೆ ಹಣ ನೀಡಿ ಮುಂದೆ ಸಾಗುವ ಆತುರದಲ್ಲಿರುತ್ತಾರೆ. ಬೆಳಗಿನಿಂದಲೂ ದೇವರಪುರದ ಅಯ್ಯಪ್ಪ ದೇವಾಲಯದ ಹೊರಗಿನ ಬಯಲಿನಲ್ಲಿ ನಡೆಯುವ ಬೈಗುಳದ ಹಬ್ಬ ಇಲ್ಲಿಗೆ ಸಮೀಪದಲ್ಲಿರುವ ಭದ್ರಕಾಳಿ ದೇವಾಲಯದಲ್ಲಿ ಸಂಜೆ ಪೂಜೆ ಸಲ್ಲಿಸುವುದರೊಂದಿಗೆ ಮುಕ್ತಾಯವಾಗುತ್ತದೆ. ಮೇಲ್ನೋಟಕ್ಕೆ ಇದು ಒಂದು ಆಚರಣೆಯಂತೆ ಕಂಡುಬಂದರೂ ಇದನ್ನೇ ನೆಪ ಮಾಡಿಕೊಂಡು ಈ ಜನರು ವರ್ಷಕ್ಕೊಂದು ಸಲ ತಮ್ಮ ಹುಲುಜೀವನದ ವಾಸ್ತವತೆಯಿಂದ ಹೊರ ಬಂದು ಬೇರೆಯದೇ ಪ್ರಪಂಚದಲ್ಲಿ ನಲಿಯುವುದನ್ನು ಕಾಣಬಹುದು.

ಹಬ್ಬದ ದಿನ ಮಾತ್ರ ಯಾವ ಮುಲಾಜೂ ಇಲ್ಲದೆ ನಿರ್ಭೀತರಾಗಿ ಬೈಯ್ಯುವ ಇವರಿಗೆ ತಮ್ಮ ಮೇಲೆ ಯಾಜಮಾನಿಕೆ ಮಾಡಿದವರನ್ನು ಶಪಿಸುವ ಉದ್ದೇಶವಿರಲೂಬಹುದು.

ವರ್ಷವಿಡೀ ತನ್ನ ತೋಟದ ಮಾಲೀಕನಿಂದ ಕೂಲಿಗಿಂತ ಬೈಯ್ಗುಳವನ್ನೆ ಹೆಚ್ಚು ತಿಂದವರಿಗೆ ಇದೊಂದು ದಿನ ಮನಃಪೂರ್ತಿ ಬೈಯ್ಯುವುದಕ್ಕೆ ಅವಕಾಶ ಮಾಡಿಕೊಂಡಿದ್ದಾರೆ ಎಂದೇ ವಿಶ್ಲೇಷಿಸಲಾಗುತ್ತಿದೆ. ಪ್ರತಿಯೊಂದು ಹಬ್ಬ ಆಚರಣೆಗಳ ಹಿಂದೆ ಒಂದು ಉದ್ದೇಶವಿರುವಂತೆ ಜೇನುಕುರುಬರ ಈ ಹಬ್ಬದ ಹಿಂದೆ ತಮ್ಮ ಮೇಲೆ ದೌರ್ಜನ್ಯ ನಡೆಸಿದವರಿಗೆ ಸ್ವಲ್ಪಮಟ್ಟಿಗೆ ಬೈದು ತಮ್ಮ ಕೋಪವನ್ನು ತೀರಿಸಿಕೊಳ್ಳುವ ಇರಾದೆಯೂ ಇರಬಹುದು.

**ಹಬ್ಬ ಕುರಿತ ಟೀಕೆಗಳು:** ಈ ಹಬ್ಬದ ವರದಿ ಮಾಡಲು ಕೊಡಗಿಗೆ ಬಂದಿದ್ದ ಇಂಗ್ಲೀಷ್ ದಿನಪತ್ರಿಕೆಯೊಂದರ ವರದಿಗಾರ್ತಿ ಈ ರೀತಿ ಬೈಯ್ಗುಳಗಳ ಸುರಿಮಳೆಯನ್ನು ಕೇಳಿಸಿಕೊಂಡು, ವಿಚಿತ್ರ ವೇಷಭೂಣಗಳನ್ನು ಕಂಡು, ಹಬ್ಬದ ಹೆಸರಿನಲ್ಲಿ ಈ ರೀತಿಯ ವಿಕೃತ ವರ್ತನೆಯ ಬಗ್ಗೆ ಅಸಮಾಧಾನ ವ್ಯಕ್ತಪಡಿಸಿ "ಬ್ಯಾನ್ ದಿಸ್ ಅಗ್ಲಿ ಫೆಸ್ಟಿವಲ್" ಎಂದು ಉಗ್ರಲೇಖನವೊಂದನ್ನು ಬರೆದಿದ್ದಳು.[೩೮] ಈ ವಿಚಿತ್ರ ರೀತಿಯ ಆಚರಣೆಯನ್ನು ನೋಡಿದ ಸ್ಥಳೀಯರು ಅಥವಾ ಪ್ರವಾಸಿಗರು ತಾತ್ಸಾರದ ಮಾತುಗಳನ್ನಾಡುವುದು ಸಹಜವಾಗಿದೆ. ಅವರ ಭಾಷೆ, ವೇಷ, ಬೈಗುಳ ಮೊದಲಾದವುಗಳು ಇದಕ್ಕೆ ಕಾರಣವೆಂದು ಅರಿಯಬಹುದು. ಈ ಹಬ್ಬದ ಹೆಸರನ್ನಾಗಲಿ, ಆಚರಣಾ ವಿಧಾನವನ್ನಾಗಲಿ, ಇಲ್ಲಿನ ಸಂಭ್ರಮವನ್ನಾಗಲಿ, ನೇರವಾಗಿ ದರ್ಶನ ಮಾಡಲು ಸಾಧ್ಯವಾಗದಂತಹ ಸಂದರ್ಭವೂ ನಿರ್ಮಾಣವಾಗಿರುವ ನಿದರ್ಶನಗಳಿವೆ.

ಈ ಹಬ್ಬವನ್ನು ಯಾವುದೋ ಪೂರ್ವಾಗ್ರಹದಿಂದ ಒಂದೇ ಆಯಾಮದಲ್ಲಿ ನೋಡದೆ ವಿಭಿನ್ನ ನೆಲೆಗಳಲ್ಲಿ ಗಮನಿಸಿ ಮೆಚ್ಚುಗೆ ಸೂಚಿಸಿರುವುದು 'ಲೋಕೋ ಭಿನ್ನ ರುಚಿ' ಎಂಬ ಮಾತನ್ನು ನೆನಪಿಸುತ್ತದೆ. ಇದಕ್ಕೆ ನಿದರ್ಶನ ಈ ಕೆಳಗಿನಂತಿದೆ.

ತಮ್ಮ ಬದುಕಿನ ಬಹುಪಾಲು ಸಮಯವನ್ನು ಬೆಂಗಳೂರಿನಲ್ಲಿಯೆ ಕಳೆದಿರುವ ಇಂಗ್ಲೆಂಡ್ ಮೂಲದ ಕ್ಲಾರೆ ಆರ್ನಿ[೩೯] ಎಂಬ ಹವ್ಯಾಸಿ ಛಾಯಾಗ್ರಾಹಕಿ 'ಕೊಡಗಿನಲ್ಲಿ ಆಚರಿಸಲ್ಪಡುವ 'ಕುಂಡೆ ಹಬ್ಬ'ದ ಆಚರಣಾ ವಿಧಾನ ಓರ್ವ ಛಾಯಾಗ್ರಾಹಕಿಯಾಗಿ ನನ್ನನ್ನು ವಿಶೇಷವಾಗಿ ಆಕರ್ಷಿಸಿದೆ' ಎನ್ನುತ್ತಾರೆ. ಇವರು ಮುಂದುವರೆದು "ಮನುಷ್ಯನ ಸೃಜನಶೀಲ ಅಭಿವ್ಯಕ್ತಿಯ ವೈಯಕ್ತಿಕ ಮತ್ತು ಅನನ್ಯ ರೂಪಗಳನ್ನು ಸೆರೆ ಹಿಡಿಯಲು ಈ ಹಬ್ಬ ನನಗೆ ಅನುವು ಮಾಡಿಕೊಟ್ಟಿದೆ. ಈ ಹಬ್ಬವು ಕಟ್ಟಾ ಸಂಪ್ರದಾಯ, ಶಾಸ್ತ್ರ, ನಿಯಮಗಳಿಂದ ಮುಕ್ತವಾಗಿದೆ. ಮಾತು, ದಿರಿಸುಗಳಲ್ಲಿ ಮುಕ್ತವಾದ ಸ್ವಾತಂತ್ರ್ಯವಿರುತ್ತದೆ. ಈ ಹಬ್ಬದಲ್ಲಿ ಭಾಗವಹಿಸುವವರು ಏನು ಬೇಕಾದರೂ ಆಗಬಹುದು. ಓರ್ವ ಪಾಶ್ಚಿಮಾತ್ಯ ಸೆಕ್ಸಿ ಮಹಿಳೆ, ದೇವರು, ಪ್ರಾಣಿ, ತನ್ನ ಕರುಳನ್ನು ತಾನೇ ಕಿತ್ತುಕೊಳ್ಳುವ ದೈತ್ಯರಾಕ್ಷಸ– ಹೀಗೆ ಏನನ್ನು ಕಲ್ಪಿಸಿಕೊಳ್ಳಬಲ್ಲೆವೋ ಅವು ಇಲ್ಲಿ ಸೃಷ್ಟಿಯಾಗುತ್ತವೆ"[೪೦] ಎಂದು ಹೇಳುತ್ತಾರೆ.

ಶತಶತಮಾನಗಳಿಂದಲೂ ಮೇಲ್ವರ್ಗದವರ ದೌರ್ಜನ್ಯ, ಶೋಷಣೆಗೊಳಗಾಗಿ ಬದುಕನ್ನು ಶೋಚನೀಯ ರೀತಿಯಲ್ಲಿ ಕಂಡಿರುವ ಬುಡಕಟ್ಟು ಜನರಿಗೆ ಸಾಂಕೇತಿಕವಾಗಿ ಪ್ರತಿಭಟನೆ ಮಾಡಲು ಇದೊಂದು ಅವಕಾಶವಿರಬಹುದು. 'ವರ್ಷವಿಡೀ ನೀವ್ ನಮ್ಮನ್ನ ಬೈಯಾಕಿಲ್ವ, ನಾವ್

ಒಂದು ದಿನ ಬೈದ್ರೆ ನಿಮ್ಗೆ ಸಿಟ್ ಬತ್ತದಾ?'[೪೧] ಎಂಬ ಅವರ ಮಾತಿನಲ್ಲಿ ಹಬ್ಬದ ಆಚರಣೆಯ ಹಿಂದೆ ಪ್ರತಿಭಟನೆಯ ಉದ್ದೇಶವೂ ಇದೆ ಎಂಬುದು ಸ್ಪಷ್ಟವಾಗುತ್ತದೆ. ಒಂದು ಕಡೆ "ಇದು ಆಳುವ ವರ್ಗದ ವಿರುದ್ಧ ಸಿಡಿದೆದ್ದು ನಿಂತ ಸಾಮಾನ್ಯ ಜನರ ಧರ್ಮವೂ"[೪೨] ಆಗಿರಬಹುದು.

ಕೊಡಗಿನ ಜೇನುಕುರುಬರು ಆಚರಿಸುವ ಈ ರೀತಿಯ 'ಬೈಗುಳದ ಹಬ್ಬ'ದೊಂದಿಗೆ ಮಂಡ್ಯ ಜಿಲ್ಲೆಯ ಕೆ. ಆರ್. ಪೇಟೆ ತಾಲೂಕಿನ ಕಿಕ್ಕೇರಿ ಗ್ರಾಮದಲ್ಲಿ ನಡೆಯುವ ಕಿಕ್ಕೇರಮ್ಮನ ಜಾತ್ರೋತ್ಸವ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ, ಪುತ್ತೂರು ಮತ್ತು ಬೆಳ್ತಂಗಡಿ ತಾಲೂಕುಗಳಲ್ಲಿ ವಾಸಿಸುತ್ತಿರುವ ಗೌಡ ಸಮುದಾಯದವರು ಸುಗ್ಗಿ ಹುಣ್ಣಿಮೆಯ ಸಂದರ್ಭದಲ್ಲಿ "ಸಿದ್ಧವೇಷ"[೪೩] ಹಾಕಿ ಕುಣಿಯುವುದನ್ನು ಇಲ್ಲಿ ಉಲ್ಲೇಖಿಸಬಹುದು.

ಕಿಕ್ಕೇರಿ ಗ್ರಾಮದೇವತೆಯಾದ ಕಿಕ್ಕೇರಮ್ಮನಿಗೆ ವಿಕೃತವಾಗಿ ಬೈಯ್ಯುವುದೇ ಪ್ರಧಾನವಾಗಿ ರುವುದು ಅಚ್ಚರಿ ಹುಟ್ಟಿಸುತ್ತದೆ. ಮರದಿಂದ ಮಾಡಿದ ಪುರುಷ ಜನನಾಂಗವನ್ನು ವಿಚಿತ್ರವಾಗಿ ಹಿಡಿದು ದೇವತೆಗೆ ಚಿತ್ರವಿಚಿತ್ರವಾಗಿ ಬೈಯ್ಯುತ್ತಾರೆ. ಈ ರೀತಿಯ ಬೈಗುಳಗಳನ್ನು ಕೇಳಿಸಿಕೊಳ್ಳುವುದು ಹಾಗೂ ಆ ಕೃತಕ ಜನನಾಂಗವನ್ನು ಯಾವುದೇ ಅಂಜಿಕೆಯಿಲ್ಲದೆ, ಸಂಕೋಚವಿಲ್ಲದೆ ಹೆಂಗಸರು, ಗಂಡಸರು ಮಕ್ಕಳಾದಿಯಾಗಿ ನೋಡುವುದು ರೂಢಿಯಲ್ಲಿದೆ. ಹೀಗೆ ಆ ಕೃತಕ ಪುರುಷ ಜನನಾಂಗವನ್ನು ನೋಡುವುದರಿಂದ ಮದುವೆಯಾಗದವರಿಗೆ ಕಂಕಣಭಾಗ್ಯ ಕೂಡಿಬರುತ್ತದೆ, ಇಷ್ಟಾರ್ಥ ಸಿದ್ಧಿಸುತ್ತದೆ, ಹೆಣ್ಣುಮಕ್ಕಳ ಬದುಕು ಪಾವನವಾಗುತ್ತದೆ, ಬಂಜೆತನ ನಿವಾರಣೆಯಾಗುತ್ತದೆ, ನವದಂಪತಿಗಳಿಗೆ ಯಶಸ್ಸನ್ನು ತಂದುಕೊಡುತ್ತದೆ ಎಂಬೆಲ್ಲಾ ಹಲವು ರೀತಿಯ ನಂಬಿಕೆಗಳನ್ನು ಈ ಹಬ್ಬದೊಂದಿಗೆ ಬೆಸೆದಿರುವುದನ್ನು ಗಮನಿಸಿದರೆ, ಸಾರ್ವಜನಿಕರು ಯಾವುದೇ ಸಂಕೋಚವಿಲ್ಲದೆ ಭಾಗವಹಿಸಬೇಕೆಂಬ ಉದ್ದೇಶವಿರುವುದು ಸ್ಪಷ್ಟವಾಗುತ್ತದೆ.[೪೪]

ದಕ್ಷಿಣ ಕನ್ನಡದ ಗೌಡರು ಆಚರಿಸುವ "ಸಿದ್ಧವೇಷ"ದಲ್ಲಿ ವೇಷಧಾರಿ ಮರದಿಂದ ಮಾಡಿರುವ ಜನನಾಂಗದಿಂದ ಮೇಲ್ವರ್ಗದವರನ್ನು ಸ್ಪರ್ಷಿಸುವುದರ ಮೂಲಕ ಅಪವಿತ್ರಗೊಳಿಸುವ, ಮೈಲಿಗೆಗೊಳಿಸುವ ಉದ್ದೇಶವನ್ನೂ ಕಾಣಬಹುದು. ಇಲ್ಲಿಯ ಘಟನೆಗಳು ಎಲ್ಲೋ ಒಂದು ಕಡೆ ಮೇಲ್ವರ್ಗದವರಿಂದ ತಾವು ಅನುಭವಿಸಿರುವ ಸಾಮಾಜಿಕ ನೋವುಗಳಿಗೆ ಇಂಥ ಸಾಂಸ್ಕೃತಿಕ ಆಚರಣೆಗಳ ಮೂಲಕ ತಿರುಗೇಟು ನೀಡುವ ಉದ್ದೇಶ ಹೊಂದಿದ್ದಾರೆ ಎಂದು ಭಾಸವಾಗುತ್ತದೆ.

ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದಿದ್ದ ಕಾಲದಲ್ಲಿ ಆಚರಿಸಿಕೊಂಡು ಬರುತ್ತಿದ್ದ ಈ ಸಮುದಾಯಗಳು ಇಂದಿನ ಆಧುನಿಕ ದಿನಗಳಲ್ಲಿಯೂ ಇಂತಹ ಉತ್ಸವಗಳನ್ನು ನಡೆಸಿಕೊಂಡು ಬರುತ್ತಿರುವುದು ಇವರು ಧಾರ್ಮಿಕವಾಗಿ ಹೊಂದಿರುವ ನಂಬಿಕೆಯನ್ನು ಸೂಚಿಸುತ್ತದೆ. ಏನೇ ಆಗಲಿ ಹಬ್ಬಗಳು ತಮ್ಮ ಮೂಲ ಸ್ವರೂಪವನ್ನು ಕಳೆದುಕೊಳ್ಳುತ್ತಿವೆ ಎಂಬ ಮಾತುಗಳು ಅಲ್ಲಲ್ಲಿ ಕೇಳಿಬರುತ್ತಿವೆ. 'ಕುಂಡೆ ಹಬ್ಬದಲ್ಲಿ ವೇಷಧರಿಸಿ ಕುಡಿದು ಸಾರ್ವಜನಿಕರಿಂದ

ಬಲವಂತದಿಂದ ಹಣ ವಸೂಲಿ ಮಾಡುವವರ ವಿರುದ್ಧ ಕಠಿಣ ಕಾನೂನು ಕ್ರಮ ಕೈಗೊಳ್ಳುವಂತೆ ಒತ್ತಾಯಿಸಲಾಗಿದೆ. ಹಬ್ಬದ ಹೆಸರಿನಲ್ಲಿ ಬುಡಕಟ್ಟು ಜನರಲ್ಲದ ಕೆಲವರು ಸಹ ಇದೇ ಸಂದರ್ಭದಲ್ಲಿ ವೇಷ ಹಾಕಿಕೊಂಡು ಸಾರ್ವಜನಿಕರಿಗೆ ಅವಾಚ್ಯ ಶಬ್ದಗಳಿಂದ ಬೈಯುತ್ತ, ವಿಕಾರ ಉಡುಪುಗಳನ್ನು ತೊಟ್ಟು ರಸ್ತೆಗೆ ಅಡ್ಡ ಬಂದು ವಾಹನ ತಡೆಗಟ್ಟಿ ಹಣ ಬೇಡುವ ರೀತಿ ಸರಿಯಿರುವುದಿಲ್ಲ. ಅಲ್ಲದೆ ಕುಂಡೆ ಹಬ್ಬಕ್ಕಾಗಿಯೇ ಕಾಯುವ ಕೆಲವು ಸಮಾಜ ಘಾತುಕರಿಂದ ಈ ಭಾಗದ ಅನೇಕ ಯುವತಿಯರು ಬಲಿಯಾಗಿರುವುದೂ ಇದೆ. ಇದರಿಂದಾಗಿ ಮನೋರಂಜನೆಗಾಗಿ ಹಬ್ಬ ಆಚರಿಸುವ ಬುಡಕಟ್ಟು ಜನಾಂಗದವರಿಗೆ ಕೆಟ್ಟ ಹೆಸರು ಬರುತ್ತಿದೆ. ಇಂತಹವರ ವಿರುದ್ಧ ಕ್ರಮ ಕೈಗೊಳ್ಳುವಂತೆ ಇಲ್ಲಿನ ನಾಗರಿಕರು ಸಂಬಂಧಿಸಿದ ಅಧಿಕಾರಿಗಳಿಗೆ ದೂರು ಸಲ್ಲಿಸಿರುವುದು ಇತ್ತೀಚೆಗೆ ದಿನಪತ್ರಿಕೆಯಲ್ಲಿ ಪ್ರಕಟವಾಗಿದೆ.[೪೫]

**ಕೊಂತ ಪೂಜೆ:** ಜೇನುಕುರುಬರ ಮತ್ತೊಂದು ವಿಶಿಷ್ಟ ಆಚರಣೆಯಾಗಿ ಇದು ಕಾಣಿಸಿಕೊಳ್ಳುತ್ತದೆ. ಸೃಷ್ಟಿಯ ಸಾಂಕೇತಿಕ ರೂಪದ ಭಾಗವಾಗಿ ಕೊಂತ ಪೂಜೆ ಹಬ್ಬವನ್ನು ಅತ್ಯಂತ ಶ್ರದ್ಧೆ, ಭಕ್ತಿಯಿಂದ ಅಚರಿಸಿಕೊಂಡು ಬರುತ್ತಿದ್ದಾರೆ. ಇವರ ಈ ಹಬ್ಬದಲ್ಲಿ ಸೃಷ್ಟಿ ಕ್ರಿಯೆಯ ಬಗೆಗಿರುವ ಅಂಜಿಕೆ ಅಳುಕುಗಳನ್ನು ತ್ಯಜಿಸಿ ನಿಸ್ಸಂಕೋಚವಾಗಿ ಗಂಡಸರು, ಹೆಂಗಸರು ಮಕ್ಕಳಾದಿಯಾಗಿ ಭಾಗವಹಿಸಿ ಆಚರಣೆಯಲ್ಲಿ ತೊಡಗುತ್ತಾರೆ. ಶಿಷ್ಟತೆಯನ್ನೆಲ್ಲಾ ದೂರವಿಟ್ಟು ಈ ಹಬ್ಬದ ಆಚರಣೆಯಲ್ಲಿ ತೊಡಗುವ ಇವರಿಗೆ ಇದರಿಂದ ಮುಜುಗರವುಂಟಾಗುತ್ತದೆಯೆಂದಾಗಲಿ, ಇದರಲ್ಲಿ ಸಮಾಜದ ಎಲ್ಲಾ ವರ್ಗದ ಜನರು ಭಾಗವಹಿಸಿರುತ್ತಾರೆಯೆಂದಾಗಲಿ ಗಮನಕ್ಕೆ ಬಂದಿರುವುದಿಲ್ಲ. ಕೇವಲ ಹಬ್ಬದಲ್ಲಿ ತಮ್ಮನ್ನು ತೊಡಗಿಸಿಕೊಂಡು ಭಕ್ತಿ ಭಾವುಕತೆಯನ್ನು ಪ್ರದರ್ಶಿಸುತ್ತಾರೆ.

ಪುರುಷರ ಜನನಾಂಗವನ್ನು ಪೂಜಿಸುವುದೇ ಈ ಹಬ್ಬದ ಮುಖ್ಯ ಆಚರಣೆಯಾಗಿರುತ್ತದೆ. ಸೃಷ್ಟಿ ಶಕ್ತಿಯ ಚಿಹ್ನೆಯ ಆರಾಧನೆಯನ್ನು ಸಂಕೇತಿಸುವ ಈ ಹಬ್ಬವನ್ನು ಪ್ರತಿವರ್ಷ ಏಪ್ರಿಲ್ ಅಥವಾ ಮೇ ತಿಂಗಳಿನಲ್ಲಿ ನಲವತ್ತು ದಿನಗಳ ಕಾಲ ಅಚರಿಸುತ್ತಾರೆ. ಇತ್ತೀಚೆಗೆ ತಮ್ಮ ಅನುಕೂಲಕ್ಕೆ ತಕ್ಕಂತೆ ದಿನಗಳ ಸಂಖ್ಯೆಯನ್ನು ಕಡಿಮೆ ಮಾಡಿಕೊಂಡಿರುತ್ತಾರೆ.

**ಹಿನ್ನೆಲೆ:** ಈ ಹಬ್ಬದ ಆಚರಣೆಯ ಹಿಂದೆ ಒಂದು ಸೃಷ್ಟಿಯ ರಹಸ್ಯವಿದೆ ಎಂದು ಜೇನುಕುರುಬರು ನಂಬಿದ್ದಾರೆ. ಈ ಜಗತ್ತಿನಲ್ಲಿ ಮನುಷ್ಯನ ಸೃಷ್ಟಿಯ ಬಗೆಗೆ ಸರಿಯಾದ ತಿಳುವಳಿಕೆ ಇಲ್ಲದೆ ಪ್ರತಿಯೊಂದು ಜನಾಂಗವೂ ತನ್ನದೇ ಆದ ಸತ್ಯವಲ್ಲದ ಕೆಲವು ಕತೆಗಳನ್ನು ಸೃಷ್ಟಿಸಿಕೊಂಡಿದ್ದಾರೆ. ಅದರಂತೆ ಇವರಲ್ಲೂ ಈ ಆಚರಣೆಗೆ ಒಂದು ಪುರಾಣ ಕತೆಯಿದೆ. ಪ್ರಪಂಚ ಪ್ರಳಯದಲ್ಲಿ ಮುಳುಗಿ ಬರಿ ನೀರಿನಿಂದ ತುಂಬಿತ್ತು ಅಲ್ಲಿ ಒಂದು ಕ್ರಿಮಿಕೀಟವೂ ಇರಲಿಲ್ಲ. ಹೀಗಿರುವಾಗ ಇಂಥ ಸಂದರ್ಭದಲ್ಲಿ ಆ ನೀರಿನಲ್ಲಿ ಒಂದು ಕಹಿ ಸೋರೆ ಬುರುಡೆ ತೇಲುತ್ತಿತ್ತು. ಅದು ಹಾಗೆ ತೇಲುತ್ತಾ ತೇಲುತ್ತಾ ಬಂದು ಅಂಗೈ ಅಗಲವಿದ್ದ ಭೂಮಿಯ ಮೇಲೆ ಬಂದು ನಿಂತಿತು. ಇದ್ದಕ್ಕಿದ್ದಂತೆ ಸೋರೆ ಬುರುಡೆಯಿಂದ ಒಂದು ಹೆಣ್ಣು ಮತ್ತು ಗಂಡು ಹೊರಗೆ ಬಂದರು. ಅವರಿಬ್ಬರೂ ಅಣ್ಣ ತಂಗಿಯಾಗಿದ್ದರು. ಅವರು ಅಲ್ಲೇ ಇದ್ದ ಮಣ್ಣನ್ನು ತೆಗೆದುಕೊಂಡು ತಮ್ಮ ಕೈ

ಮುಷ್ಠಿಯಿಂದ ಹಿಡಿದು ಹೆಣ್ಣು ಮತ್ತು ಗಂಡನ್ನು ಸೃಷ್ಟಿಸಿದರಂತೆ. ಇವರ ಮೂಲಕ ಹುಟ್ಟಿ ಬಂದವರೇ ಈ ಜೇನು ಕುರುಬರು ಎಂದು ಸ್ವತ: ಇವರೇ ಹೇಳಿಕೊಂಡು ಬರುತ್ತಿದ್ದಾರೆ.[೬೬] ಹೀಗೆ ಗಂಡು ಕೊಂತ್ ಮತ್ತು ಹೆಣ್ಣು ಕೊಂತ್ ಹುಟ್ಟಿದುದರ ಸಂಕೇತವಾಗಿ ಈ ಹಬ್ಬವನ್ನು ಆಚರಿಸಿಕೊಂಡು ಬಂದು ಇದನ್ನು ಕೊಂತ ಪೂಜೆ ಹಬ್ಬವೆಂದೇ ಕರೆದುಕೊಂಡಿದ್ದಾರೆ.

**ಹಬ್ಬದ ಸಿದ್ಧತೆ:** ಹಾಡಿಯ ಯಜಮಾನ, ಗುಡ್ಡ(ನ್ಯಾಯ ತೀರ್ಮಾನ ಮಾಡುವವನು), ಹೆಂಗಸರು, ಗಂಡಸರು ಮತ್ತು ಮಕ್ಕಳಾದಿಯಾಗಿ ಸೇರಿ ಮರಗಿಡಗಳು ಚಿಗುರೊಡೆಯುವ ಸಂದರ್ಭವನ್ನು ನೋಡಿಕೊಂಡು ಕೊಂತ ಪೂಜೆಯ ದಿನವನ್ನು ನಿರ್ಧರಿಸುತ್ತಾರೆ. ಗೊತ್ತುಪಡಿಸಿದ ದಿನದ ರಾತ್ರಿ ತಮ್ಮ ಹಾಡಿಯ ಸಮೀಪದ ಕೆರೆ, ಹಳ್ಳ, ನದಿಗಳಿಗೆ ಹೋಗಿ ಯಾರೂ ತುಳಿಯದೇ ಇರುವ ಸ್ಥಳದ ಆಳದಲ್ಲಿರುವ ಮಣ್ಣನ್ನು ದೇವರ ಗುಡ್ಡ ಬೊಗಸೆಯಲ್ಲಿ ಎತ್ತಿಕೊಳ್ಳುತ್ತಾನೆ. ಯಜಮಾನನ ಸಮ್ಮುಖದಲ್ಲಿ ದೇವರ ಗುಡ್ಡನೆ ತಂದ ಮಣ್ಣನ್ನು ಎರಡು ಭಾಗ ಮಾಡಿ ಒಂದು ಭಾಗದಿಂದ ಗಂಡು ಮತ್ತೊಂದು ಭಾಗದಿಂದ ಹೆಣ್ಣು ಬೊಂಬೆಯನ್ನು ತಯಾರು ಮಾಡುತ್ತಾರೆ. ಇವೆರಡೂ ಗೊಂಬೆಗಳಿಗೂ ಶೃಂಗರಿಸುತ್ತಿರುವಾಗ ಇವುಗಳನ್ನು ಇಟ್ಟು ಪೂಜಿಸಲು ಚಪ್ಪರ ಹಾಕಿ ಸುತ್ತಲೂ ಸಗಣಿಯಿಂದ ಸಾರಿಸುತ್ತಾರೆ. ಚಪ್ಪರದಡಿಯಲ್ಲಿ ಒಂದು ಸ್ಥಳವನ್ನು ಪವಿತ್ರಗೊಳಿಸಿ ಬಲಗಡೆಗೆ ಗಂಡು ಕೊಂತವನ್ನು ಮತ್ತು ಎಡಗಡೆಗೆ ಹೆಣ್ಣು ಕೊಂತವನ್ನೂ ಕೂರಿಸುತ್ತಾರೆ. ಈ ಸಮಯದಲ್ಲಿ ಹಾಡಿಯ ಎಲ್ಲರೂ ಸೇರಬೇಕೆಂಬುದು ನಿಯಮ. ಹಾಡು ಕುಣಿತಗಳು ಹಾಗೂ ಹೆಂಗಸರು ಹೇಳುವ ಸೊಲ್ಲುಗಳ ಮೂಲಕ ಮೂವತ್ತೊಂಬತ್ತು ದಿನಗಳು ಕಳೆಯುತ್ತವೆ.

ಈ ಆಚರಣೆಯ ನಲವತ್ತನೆಯ ದಿವಸ ಸೃಷ್ಟಿ ಕ್ರಿಯೆಯ ಅಭಿನಯ ನಡೆಯುವುದರಿಂದ ಇದು ತುಂಬಾ ಮುಖ್ಯವಾದುದು ಎಂದು ಭಾವಿಸುತ್ತಾರೆ. ಈ ದಿನ ಹಾಡಿಯ ಎಲ್ಲರೂ ಸೇರುತ್ತಾರೆ. ಗಂಡುಕೊಂತದ ಕಡೆಯಲ್ಲಿ ಎಲ್ಲಾ ವಯೋಮಾನದ ಮಹಿಳೆಯರು ಹಾಗೂ ಹೆಣ್ಣುಕೊಂತದ ಕಡೆ ಎಲ್ಲಾ ವಯೋಮಾನದ ಗಂಡಸರು ವೃತ್ತಾಕಾರದಲ್ಲಿ ಕುಳಿತುಕೊಳ್ಳುವುದು ಇಲ್ಲಿನ ಮತ್ತೊಂದು ವಿಶಿಷ್ಟತೆಯಾಗಿದೆ.

**ಆಚರಣೆಯ ವಿಧಾನ:** ಕೊಂತ ಪೂಜೆಯ ಆಚರಣೆ ಒಟ್ಟು ಐದು ಹಂತಗಳಲ್ಲಿ ನಡೆಯಲ್ಪಡುತ್ತದೆ. ಮೊದಲನೇ ಹಂತದಲ್ಲಿ ಕೊಂತಗಳನ್ನು ಕೂರಿಸುವ ಚಪ್ಪರದ ಹಿಂದೆ 'ಸೊಲ್ಲು' ಹೇಳುವ ಹೆಂಗಸರು ಕುಳಿತು ವಿವಿಧ ರೀತಿಯ ಏರಿಳಿತಗಳಿಂದ ಸುಶ್ರಾವ್ಯವಾಗಿ ಹಾಡಲು ಪ್ರಾರಂಭಿಸುತ್ತಾರೆ. ಇಲ್ಲಿ ಯಾವುದೇ ಹಾಡಿಗೂ ಭಾಷೆಯಿರುವುದಿಲ್ಲ ಕೇವಲ ಸೊಲ್ಲು ಮಾತ್ರ ಇರುತ್ತದೆ. ಅರ್ಧ ಗಂಟೆ ಕಳೆದ ಮೇಲೆ ಆ ಜಾಗಕ್ಕೆ ಅರೆಬೆತ್ತಲೆಯಾಗಿ, ಕೆಲವೊಮ್ಮೆ ಸಂಪೂರ್ಣ ಬೆತ್ತಲೆಯಾಗಿ ಗುಡ್ಡನ ಪ್ರವೇಶವಾಗುತ್ತದೆ. ತನ್ನ ತೊಡೆಯ ನಡುವೆ ಮರದ ಚಿಕ್ಕ ತುಂಡೊಂದನ್ನು ನೇತಾಡಿಸಿಕೊಂಡು ಕೈಯಲ್ಲಿ ಸ್ವಲ್ಪ ಬೇವಿನ ಸೊಪ್ಪನ್ನು ಹಿಡಿದುಕೊಂಡು ವೃತ್ತಾಕಾರವಾಗಿ ಕುಳಿತಿರುವ ಜನರ ನಡುವೆ ಪ್ರವೇಶಿಸುತ್ತಾನೆ.

ಜನರ ನಡುವೆ ಪ್ರವೇಶಿಸಿದ ಗುಡ್ಡನು ಎರಡೂ ಕೊಂತಗಳಿಗೂ ಸೇರಿಕೊಂಡಂತೆ ತಾನು ನೇತು ಹಾಕಿಕೊಂಡಿರುವ ಮರದ ತುಂಡಿಗೆ ಬೇವಿನ ಸೊಪ್ಪಿನಿಂದ ಸ್ಪರ್ಶಿಸತ್ತಾನೆ. ನೋಡ ನೋಡುತ್ತಿದ್ದಂತೆ ಕ್ರಮೇಣ ತನ್ನ ತೊಡೆಯ ಸಂದಿನಲ್ಲಿರುವ ಮರದ ತುಂಡನ್ನು ಹಿಂದೆ ಮುಂದೆ ಅಲ್ಲಾಡಿಸುತ್ತಾ ಲೈಂಗಿಕ ಕ್ರಿಯೆಯಲ್ಲಿ ತೊಡಗಿರುವಂತೆ ವರ್ತಿಸುತ್ತಾನೆ. ಈ ಸಮಯದಲ್ಲಿ ಅಲ್ಲಿ ನೆರೆದವರು ಯಾರೂ ವಿಚಲಿತರಾಗುವುದಿಲ್ಲ. ದೇವರ ಕಾರ್ಯವಿದು ಎಂದು ಭಾವಿಸಿರುವ ಈ ಜನಕ್ಕೆ ಇಲ್ಲಿ ಆಗುತ್ತಿರುವುದರ ಕುರಿತು ಯಾವುದೇ ಮುಜುಗರಗಳಿರುವುದಿಲ್ಲ. ಇದಾದ ನಂತರ ಗುಡ್ಡ ಅಲ್ಲಿಂದ ತೆರಳುತ್ತಾನೆ.

ಎರಡನೇ ಹಂತದಲ್ಲಿ ದೃಶ್ಯ ಬದಲಾವಣೆಯಾಗುವಂತೆ ಹುಲಿವೇಷ ಹಾಕಿದ ಪಾತ್ರದಾರಿ ಚಂಗನೆ ಹಾರಿ ವೃತ್ತದೊಳಗೆ ಬರುತ್ತಾನೆ. ಈ ಹುಲಿವೇಷದ ಹಿಂದೆ ಸ್ತ್ರೀವೇಷ ಹಾಕಿದ ಮತ್ತೊಬ್ಬ ಬರುತ್ತಾನೆ ಎರಡೂ ಪಾತ್ರಗಳೂ ತಮಗೆ ಮಕ್ಕಳಿಲ್ಲದಿರುವುದಕ್ಕೆ ಪರಸ್ಪರ ದೋಷಾರೋಪ ಮಾಡಿಕೊಳ್ಳುತ್ತಾರೆ. ದೇಹದ ಮಾಂಸಖಂಡಗಳನ್ನು ಕುಣಿಸುತ್ತಾ ತಾನೆಷ್ಟು ಸಮರ್ಥವೆಂದು ತೋರಿಸುತ್ತಲೇ ತಾನು ನಿಶಕ್ತ ಎಂಬುದನ್ನೂ ಮಾತಿನ ಮೂಲಕ ಹೇಳುತ್ತಾನೆ. ಮೂರನೇ ದೃಶ್ಯದಲ್ಲಿ ಪ್ರೇಕ್ಷಕನಂತೆ ಕುಳಿತಿದ್ದ ವ್ಯಕ್ತಿಯೊಬ್ಬ ವೃತ್ತದ ಒಳಗೆ ಬರುತ್ತಾನೆ. ಹೆಂಗಸೊಬ್ಬಳು ಆತನ ಹೆಂಡತಿಯಂತೆ ನಟಿಸುತ್ತಾ ಕೆಲವು ಮಕ್ಕಳನ್ನು ಕರೆದುಕೊಂಡು ಹಿಂಬಾಲಿಸುತ್ತಾಳೆ. ಆ ಮಕ್ಕಳು ಎಷ್ಟೇ ಗೋಳು ಹೊಯ್ದುಕೊಂಡರೂ ಅವನು ಮಾತ್ರ ಲೈಂಗಿಕ ಪ್ರಚೋದಕ ಮಾತುಗಳನ್ನು ಮುಂದುವರೆಸುತ್ತಾನೆ. ನಾಲ್ಕನೇ ದೃಶ್ಯದಲ್ಲಿ ಮುದುಕನೊಬ್ಬ ಮುನಿಯಂತೆ ಜುಟ್ಟು ಕಟ್ಟಿಕೊಂಡು ವಿಭೂತಿ ಬಳಿದುಕೊಂಡು ಆಗಮಿಸುತ್ತಾನೆ. ಇಲ್ಲಿಯೂ ಸಹ ಪ್ರಣಯದ ವಿವಿಧ ಹಾವ ಭಾವಗಳ ಮೂಲಕ ಆಗ ತಾನೇ ಮೈನೆರೆದಿರುವ ಹುಡುಗಿಯನ್ನು ಕರೆಯುತ್ತಿರುತ್ತಾನೆ.

ಈ ಆಚರಣೆಯ ಅಂತಿಮ ದೃಶ್ಯದಲ್ಲಿ ಅವಿವಾಹಿತ ಹುಡುಗ ಹುಡುಗಿಯರು ಹಾಡುತ್ತಾ ಕುಣಿಯುತ್ತಾ ಬರುತ್ತಾರೆ. ಹುಡುಗರಲ್ಲಿ ಕೆಲವರು ಪ್ಯಾಂಟನ್ನು ಧರಿಸಿದರೆ, ಹೆಣ್ಣು ಮಕ್ಕಳು ಕೊಡವತಿಯರಂತೆ ಸೀರೆ ಉಟ್ಟಿರುತ್ತಾರೆ. ಇಂಗ್ಲಿಷ್ ಅಥವಾ ಬೇರೆ ಯಾವುದೋ ಕೇಳಿದ ಭಾಷೆಯ ಶಬ್ದಗಳನ್ನು ಬಳಸುತ್ತಾ ಜಾತ್ರೆಗೆ ಹೋಗುವಂತೆ, ಕೆಲವೊಮ್ಮೆ ಸಂತೆಗೆ ಹೋಗುವಂತೆ ನಟಿಸುತ್ತಾರೆ. ಈ ಸಮಯದಲ್ಲಿ ಹುಡುಗ ಹುಡುಗಿಯರು ಹಾಡುವ ಹಾಡು ಈ ರೀತಿಯಿರುತ್ತದೆ.

ಹುಡುಗ:– ಯಾವ ಯಾವ ಪ್ಯಾಂಟು ಲೆತ್ತಿ ಕೊಡಲೇ ಹೆಣ್ಣೆ
ಯಾವ ಯಾವ ಸ್ಯಾಲೆ ಲೆತ್ತಿ ಕೊಡಲೇ ಹೆಣ್ಣೆ

ಹುಡುಗಿ:– ನೀ ಕೇಳಿದಾ ಪ್ಯಾಂಟುನೇ ಲೆತ್ತಿ ಕೊಡುವೇ ಹೆಣ್ಣೆ
ನೀ ಕೇಳಿದಾ ಸ್ಯಾಲೆನೇ ಲೆತ್ತಿ ಕೊಡುವೇ ಹೆಣ್ಣೆ

ಎಂದು ರಾಗವಾಗಿ ಹಾಡುತ್ತಾ ಕುಣಿಯುತ್ತಾರೆ. ಈ ರೀತಿಯಲ್ಲಿ ಸೃಷ್ಟಿಯ ನಾನಾ ಮುಖಗಳನ್ನು ಚಿತ್ರಿಸುವಂತೆ ಸೂರ್ಯೋದಯವಾಗುವವರೆಗೆ ಕೊಂತ ಪೂಜೆಯನ್ನು ಮಾಡುತ್ತಾರೆ. ನಂತರ

ಗುಡ್ಡನೊಂದಿಗೆ ಕೊಂತಗಳನ್ನು ಚಪ್ಪರದ ಹಿಂಭಾಗದಿಂದ ಎತ್ತಿಕೊಂಡು ಹೋಗಿ ಎಲ್ಲಿಂದ ತಂದಿರುತ್ತಾರೋ ಅಲ್ಲಿಗೇ ಬಿಡುವ ಮೂಲಕ ಕೊಂತ ಪೂಜೆಯನ್ನು ಅಂತ್ಯಗೊಳಿಸುತ್ತಾರೆ.

ಹೀಗೆ ಜೇನುಕುರುಬರು ಕೊಂತ ಪೂಜೆಯ ಆಚರಣೆಯಲ್ಲಿ ಮಡಿವಂತಿಕೆಯನ್ನು ದೂರವಿಟ್ಟು ಮಕ್ಕಳಾದಿಯಾಗಿ ಭಾಗವಹಿಸಿ ಸೃಷ್ಟಿ ಕ್ರಿಯೆಯ ಬಗೆಗಿರುವ ಅಂಜಿಕೆಯನ್ನು ಕಡಿಮೆ ಮಾಡಿಕೊಳ್ಳುವುದು ಮತ್ತು ಇದರ ಕುರಿತು ಅರಿವು ಪಡೆಯುವ ವಿಧಾನವನ್ನು ಕಂಡುಕೊಳ್ಳುತ್ತಾರೆ ಎಂದು ವಿಶ್ಲೇಷಿಸಬಹುದು.

**ಈ. ಪ್ರದರ್ಶನ ಕಲೆಗಳು**

ಜೇನುಕುರುಬರು ಇಂದಿಗೂ ವಾರದಲ್ಲೊಂದು ದಿನವನ್ನು ನಿಗದಿ ಮಾಡಿಕೊಂಡು ಜನಪದ ಕಲೆಗಳನ್ನು ಪ್ರದರ್ಶಿಸುತ್ತಾ ಬಂದಿದ್ದಾರೆ. ಕಾಡಿನಲ್ಲೇ ಬದುಕನ್ನು ಕಟ್ಟಿಕೊಂಡಿರುವ ಇವರು ಮನೋರಂಜನೆಗೆಂದೇ ಅನೇಕ ವಿಧದ ಕಲೆಗಳನ್ನು ಕಂಡುಕೊಂಡು ಅವುಗಳಿಂದಲೇ ಸಂತೋಷವನ್ನು ಹೊಂದುತ್ತಿದ್ದಾರೆ. ಕಾರಣ ಇವರ ಹಾಡಿಗಳಿಗೆ ವಿದ್ಯುತ್ ಸಂಪರ್ಕವನ್ನು ನೀಡಿಲ್ಲದಿರುವುದು. ಇಲ್ಲವಾದಲ್ಲಿ ನಗರದವರಂತೆಯೇ ಇವರೂ ಕೂಡ ಟಿ.ವಿ.ಗಳನ್ನು ಅವಲಂಬಿಸಿ ರೂಢಿಗತವಾದ ತಮ್ಮ ಕಲೆಗಳನ್ನು ಮರೆತುಬಿಡುತ್ತಿದ್ದರೇನೋ. ಇವರು ವಾಸಿಸುವ ತಮ್ಮ ಹಾಡಿಗಳ ಸುತ್ತಮುತ್ತ ಇರುವ ಅನೇಕ ಗಿಡ, ಮರ, ಪ್ರಾಣಿ, ಪಕ್ಷಿಗಳೇ ಇವರ ಗೆಳೆಯರು. ಹೀಗಿರುವಾಗ ಇವುಗಳ ಜೊತೆಯಲ್ಲೇ ಬೆಳೆದ ಜೇನುಕರುಬರಿಗೆ ಇವುಗಳ ಚಲನವಲನಗಳು ಆಕರ್ಷಕವಾಗಿ ಕಂಡಿವೆ. ಅದನ್ನು ಅನುಕರಿಸುವ ಪ್ರಯತ್ನವೂ ನಡೆದಿದೆ. ಇವರು ಗೀಜಗನ ನೃತ್ಯ, ಕೋಲಾಟ ಮೊದಲಾದ ಜನಪದ ಕಲೆಗಳನ್ನು ಅಳವಡಿಸಿಕೊಂಡಿದ್ದಾರೆ.

**ಗೀಜಗನ ನೃತ್ಯ:** ಹೆಸರೇ ಸೂಚಿಸುವಂತೆ ಇದು 'ಗೀಜಗ' ಎಂಬ ಪಕ್ಷಿಯ ಹೆಸರಿನಲ್ಲಿರುವ ನೃತ್ಯ. ಮಕ್ಕಳು ಮತ್ತು ದೊಡ್ಡವರೆಲ್ಲಾ ಸೇರಿ ಮಾಡುವಂತಹ ವಿಶಿಷ್ಟ ನೃತ್ಯ. ಇದಕ್ಕೆ ಇಂಥದ್ದೇ ಉಡುಪು ಎಂಬುದೇನಿಲ್ಲ. ಕಾಡಿನಲ್ಲಿ ಸಿಗುವಂತಹ ಸೊಪ್ಪುಗಳನ್ನೇ ಕಟ್ಟಿಕೊಂಡು ವಾರದಲ್ಲಿ ಒಂದು ದಿನ ಈ ನೃತ್ಯ ಮಾಡುತ್ತಾರೆ. ಗೀಜಗ ಬಹಳ ಸುಲಭವಾಗಿ ಬೇಟೆಯಾಡಬಹುದಾದ ಪಕ್ಷಿ. ಹಾಗಾಗಿ ಇದರಲ್ಲಿ ಗೀಜಗ ಹಕ್ಕಿಯನ್ನು ಬೇಟೆಯಾಡುವಂತಹ ನೃತ್ಯವನ್ನು ಮಾಡುತ್ತಾರೆ.

ಈ ನೃತ್ಯದಲ್ಲಿ ಹತ್ತರಿಂದ ಹನ್ನೆರಡು ಮಂದಿ ನೃತ್ಯ ಮಾಡುವವರಿರುತ್ತಾರೆ. ಇಬ್ಬರು ಗೀಜಗನ ಹಾಡು ಹಾಡುತ್ತಾರೆ. ಉಳಿದವರು ಹಾಡಿಗೆ ತಕ್ಕಂತೆ ನರ್ತಿಸುತ್ತಾರೆ. ತಲೆಗೆ ಪೇಟ, ಸೊಂಟಕ್ಕೆ ಗೋಣಿ ಚೀಲವನ್ನು ಸುತ್ತಿಕೊಂಡು ಅದರ ಮೇಲೆ ಸೊಪ್ಪುಗಳನ್ನು ಕಟ್ಟಿಕೊಂಡು, ಸಾಧ್ಯವಾದರೆ ಯಾವುದಾದರೂ ಬಣ್ಣವನ್ನು ಮುಖಕ್ಕೆ ಹಚ್ಚಿಕೊಳ್ಳುತ್ತಾರೆ. ಗೀಜಗನ ಹಕ್ಕಿ ವೇಷಧಾರಿ ಕುಣಿದು ಕುಣಿದು ಹೋಗುತ್ತಿರುವಾಗ ಅದರ ಹಿಂದೆ ಬೇಟೆಗಾರ ವೇಷಧಾರಿಗಳು ಹೋಗುವಂತೆ ಕಾಣುವ ರೀತಿಯಲ್ಲಿ ನರ್ತಿಸುತ್ತಾ ಹೋಗುತ್ತಾರೆ. 'ಈ ನೃತ್ಯದ ಹಾಡಿಗೆ ನಾಗಸ್ವರ, ವೀಣೆ, ಕೊಳಲು, ತಬಲ ಮೊದಲಾದ ವಾದ್ಯ ಪರಿಕರಗಳನ್ನು ಬಳಸುತ್ತಾರೆ' ಎಂಬ ಅಂಶ

ಜೇನುಕುರುಬರು ತಮ್ಮ ಜನಪದ ಕಲೆಗಳಿಗೆ ತಾವೇ ತಯಾರಿಸಿಕೊಂಡ ವಾದ್ಯ ಪರಿಕರಗಳನ್ನು ಬಳಸುವುದು ತಿಳಿಯುತ್ತದೆ.[೪೭] ಇವರು ಈ ನೃತ್ಯದಲ್ಲಿ ಬಳಸುವ ಹಾಡು ಈ ರೀತಿಯಿರುತ್ತದೆ.

ಗೀಜಗಲಕ್ಕಿನ ನತುಮರಕ್ಕ ಬಾರೇ ಗೀಜಗಲೇ!!
ಮೊತ್ತಿ ಪತ್ತಿ ಹಿಡಿನವ್ವ ಬಾರೇ ಗೀಜಗಲೇ!!
ನಿನೆ ಅಡ್ಡ ಹಾಕಿ ಹಿಡಿನವ್ವ ಬಾರೇ ಗೀಜಗಲೇ!!
ನಿನೆ ಓಡಿ ಓಡಿ ಹಿಡಿನವ್ವ ಬಾರೇ ಗೀಜಗಲೇ!!

### ೫.೨.೨. ಎರವರು

ಕೊಡಗಿನ ಮೂಲನಿವಾಸಿಗಳಲ್ಲಿ ಎರವರೂ ಮುಖ್ಯರು. ವೈನಾಡಿನ ಭಾಗದಲ್ಲಿ ಅಲೆಮಾರಿಗಳಾಗಿದ್ದು, ೧೭ನೇ ಶತಮಾನದಲ್ಲಿ ಕೊಡವರು ರಾಜನ ಸೈನ್ಯದ ಉನ್ನತಾಧಿಕಾರಿಗಳಾಗಿ ಮಾನ್ಯತೆ ಪಡೆದಾಗ ಎರವರನ್ನು ಗುಲಾಮರನ್ನಾಗಿ ಹಿಡಿದು ತಂದು, ಇವರನ್ನು ಜಮೀನ್ದಾರರ ಮನೆಗಳಿಗೆ ಮಾರಲ್ಪಟ್ಟವರೆಂದು ಅಭಿಪ್ರಾಯಪಡಲಾಗಿದೆ.[೪೮] ಕೊಡಗಿನಲ್ಲಿ ನೆಲೆನಿಂತಿರುವ ಇವರೂ ಕೊಡವರ ಜೀವನ ವಿಧಾನಗಳನ್ನು ಅಳವಡಿಸಿ ಕೊಂಡಿರುತ್ತಾರೆ. ಕೊಡವರಂತೆಯೆ ಎರವರೂ ಗೋಮಾಂಸ ತಿನ್ನುವುದಿಲ್ಲ ಎಂಬ ಕಾರಣದಿಂದಲೇ ಇಲ್ಲೇ ವಾಸಿಸುತ್ತಿರುವ ಮೇದರು ಮತ್ತು ಹರಿಜನರಿಗಿಂತ ಮೇಲ್ವರ್ಗದವರು ಎಂದು ಗುರುತಿಸಲಾಗಿದೆ.[೪೯]

ಎರವರಲ್ಲಿ ಪಂಜಿರಿ ಎರವ ಮತ್ತು ಪಣಿಯ ಎರವರೆಂಬ ಉಪಬೇಧಗಳುಂಟು. ಆದರೂ ಕೊಡವರು ಇವರನ್ನು 'ಎರವರು' ಎಂದು ಕರೆದಿದ್ದಾರೆ.[೫೦] ಇವರಲ್ಲಿ ಪಣಿಯ ಎರವರು 'ಮಾತೃ ವಂಶೀಯ' ಕುಟುಂಬದವರಾಗಿದ್ದು ಮಕ್ಕಳು ತಾಯಿಯ ಕುಲಕ್ಕೆ ಸೇರುತ್ತಾರೆ. ಪಣಿಯರ ಸಮಾಜ 'ಪಿತೃ ವಂಶೀಯ'ವಾದುದು. ಇವರಲ್ಲಿ ಹುಟ್ಟುವ ಮಕ್ಕಳು ತಂದೆಯ ಸಂತತಿಗೆ ಸೇರುತ್ತಾರೆ. ಕೊಡವ ಭಾಷೆಯಲ್ಲಿ 'ಎರ' ಎಂದರೆ 'ಭಿಕ್ಷೆ' ಎಂದೂ, 'ಎರವ' ಎಂದರೆ 'ಭಿಕ್ಷುಕ' ಎಂದರ್ಥ. ಕೊಡವರು ಪಂಜಿರಿ ಮತ್ತು ಪಣಿಯ ಎರಡೂ ಗುಂಪನ್ನು 'ಎರವರು' ಎಂದು ಕರೆದುಕೊಂಡಿದ್ದಾರೆ. ಅಲ್ಲದೆ ೧೯೭೧ರ ಜನಗಣತಿಯಿಂದಲೂ ಎರವರು ಎಂಬ ಒಂದೇ ಗುಂಪಿನಲ್ಲಿ ಇವರನ್ನು ಸೇರಿಸಲಾಗಿದೆ.[೫೧] ಹಾಗಾಗಿ ಇವರ ನಡುವಿನ ಸಾಮಾಜಿಕ ಸಂಬಂಧಗಳ ಭಿನ್ನತೆಯನ್ನು ಪ್ರತ್ಯೇಕವಾಗಿ ಪರಿಗಣಿಸದಿರುವುದು ಕಂಡು ಬಂದಿದ್ದು, ಈ ಹಿನ್ನೆಲೆಯಲ್ಲಿ ಇವರನ್ನು ಎರವರು ಎಂಬ ಒಂದೇ ಜನಾಂಗವಾಗಿ ಪರಿಗಣಿಸಿ ಅಧ್ಯಯನ ನಡೆಸಲಾಗಿದೆ.

**ಶಾರೀರಿಕ ಲಕ್ಷಣ:** ಎರವರು ದೈಹಿಕ ಲಕ್ಷಣ ಮತ್ತು ಮೈಬಣ್ಣಗಳಲ್ಲಿ ಕುರುಬರನ್ನು ಹೋಲುತ್ತಾರೆ. ಇವರು ಆಕೃತಿಯಲ್ಲಿ ಗಿಡ್ಡರಾಗಿದ್ದು, ದೇಹದ ಬಣ್ಣ ಕಪ್ಪು. ಗುಂಗುರು ತಲೆಗೂದಲು. ಚಪ್ಪಟೆ ಮೂಗು ಮತ್ತು ದಪ್ಪ ತುಟಿಯುಳ್ಳವರು. ಗಂಡಸರು ಸೊಂಟದಿಂದ ಮೊಣಕಾಲುಗಳವರೆಗೆ

ಲುಂಗಿಯಂತಹ ಬಟ್ಟೆಯನ್ನೂ, ಸೊಂಟದ ಮೇಲೆ ಶರ್ಟನಂತಿರುವ ಅಂಗಿಯನ್ನೂ ಧರಿಸುತ್ತಾರೆ. ಹೆಂಗಸರು ಕೊಡವ ಮಹಿಳೆಯರಂತೆ ಸೆರಗು ಬಲಗಡೆಗೆ ಇರುವಂತೆ ಸೀರೆಯುಡುತ್ತಾರೆ.

**ಹಿನ್ನೆಲೆ:** ಕೊಡಗಿನ ಇತಿಹಾಸ ಕೃತಿಯಲ್ಲಿ ಇಲ್ಲಿನ ಎರವರನ್ನು ಕುರಿತು ಈ ರೀತಿ ಬರೆಯಲಾಗಿದೆ. "ಕೊಡಗಿನ ನಿವಾಸಿಗಳಲ್ಲಿ ಮೂಲ ನಿವಾಸಿಗಳು ಮತ್ತು ಆನಂತರ ಬಂದು ನೆಲೆಸಿದವರು ಎಂದು ಎರಡು ವರ್ಗಗಳನ್ನು ಮಾಡಬಹುದು. ಮೂಲ ನಿವಾಸಿಗಳಲ್ಲಿ ಎರವರು, ಜೇನುಕುರುಬರು, ಬೆಟ್ಟಕುರುಬರು, ಮಲೆಕುಡಿಯರು ಮತ್ತು ಹರಿಜನರು ಮುಖ್ಯರಾದವರು. ಇವರಲ್ಲಿ ಎರವರಿಗೂ ಕುರುಬರಿಗೂ ಕೊಡಗೊಂದೇ ಮೂಲ ಸ್ಥಾನವಾಗಿರಲಿಲ್ಲ. ಈಗಲೂ ಇಲ್ಲ ಎರವರು ದಕ್ಷಿಣ ಕೇರಳ ಪ್ರಾಂತ್ಯದ ವೈನಾಡಿನಲ್ಲಿ ಬಹಳ ಪೂರ್ವದಲ್ಲಿ ಇದ್ದು ಅಲ್ಲಿಂದ ಕ್ರಿಸ್ತಶಕಕ್ಕೆ ಮೊದಲೇ ದಕ್ಷಿಣ ಕೊಡಗಿನ ಶ್ರೀಮಂಗಲನಾಡು ಮತ್ತು ಪೊನ್ನಂಪೇಟೆ ನಾಡುಗಳಿಗೆ ವಲಸೆ ಬಂದವರು. ಈಗ ಇವರಲ್ಲಿ ಪಂಜಿರಿ, ಪಣಿಯ, ಬಡವ ಮತ್ತು ಕಾಗಿ ಎರವರು ಎಂಬ ನಾಲ್ಕು ಜಾತಿಗಳಿವೆ. ಕೊಡಗಿನ ಎರವರಿಗೆ ಮುಖ್ಯದೇವತೆ ಕುಟ್ಟದ 'ಕುಟ್ಟದಮ್ಮ' ಮಹಾಶಿವರಾತ್ರಿಯ ನಂತರ ಎರಡನೆಯ ದಿನ ಇವರು ದಕ್ಷಿಣ ಕೊಡಗಿನ ಲಕ್ಷ್ಮಣತೀರ್ಥ ನದಿಯ ಬದಿಯಲ್ಲಿರುವ ಇರ್ಪು ಎಂಬ ಸ್ಥಳದಲ್ಲಿರುವ ರಾಮೇಶ್ವರ ದೇವಸ್ಥಾನದಲ್ಲಿ ತಮ್ಮ ಹರಕೆ ಸಲ್ಲಿಸುತ್ತಾರೆ. ಎರವರು ಬಹಳ ಹಿಂದೆ ಬೆಟ್ಟಕುರುಬರ ಅಧೀನದಲ್ಲಿದ್ದರು ಎಂದು ಚರಿತ್ರೆಯಲ್ಲಿ ಹೇಳಲ್ಪಟ್ಟಿದೆ"[೫೧] ಕಾಲದ ಒತ್ತಡಗಳಿಂದಾಗಿ ಎರವರು ಬೆಟ್ಟಕುರುಬರ ನಿಯಂತ್ರಣದಲ್ಲಿದ್ದಿರಬಹುದು. ಆದರೆ ಇತ್ತೀಚೆಗಿನ ಬೆಳವಣಿಗೆಗಳನ್ನು ಗಮನಿಸಿದರೆ ಎರವರು ಯಾರ ಹಂಗಲ್ಲೂ ಸಿಲುಕದೆ ಸ್ವತಂತ್ರವಾದ ಬದುಕನ್ನು ಕಟ್ಟಿಕೊಂಡಿದ್ದಾರೆಂಬುದು ತಿಳಿದುಬರುತ್ತದೆ.

ಬುಡಕಟ್ಟು ಜನಾಂಗದವರು ಸಾಮಾನ್ಯವಾಗಿ ಒಂದು ಕಡೆ ನೆಲೆನಿಂತು ಬದುಕುವುದು ಬಹಳ ಕಡಿಮೆ. ಸೌಲಭ್ಯಗಳನ್ನು ಅರಸುತ್ತಾ ಅಲೆದಾಡುವುದೇ ಅವರಿಗೇ ಸಾಮಾನ್ಯವಾಗಿರುತ್ತದೆ. ಎರವರು ವೈನಾಡಿನಿಂದ ವಲಸೆ ಬಂದವರು ಎಂಬ ವಾದವನ್ನು ಒಪ್ಪದಿರುವ ಸನ್ನಿವೇಶಗಳು ಇವೆ. ವೈನಾಡು ಮತ್ತು ಕೊಡಗು ಪ್ರದೇಶಗಳ ನಡುವೆ ದೇವಾಸಿ ಬೆಟ್ಟವಿದೆ. ಕೊಡಗಿನ ಕಡೆಯಿಂದ ಈ ಬೆಟ್ಟವನ್ನು ಹತ್ತಿ ಇಳಿದರೆ ವೈನಾಡು ಸಿಗುತ್ತದೆ. ಹಲವು ರಾಜಕೀಯ ಕಾರಣಗಳಿಂದ ಅನೇಕ ಪ್ರದೇಶಗಳ ಗಡಿಯ ಸರಹದ್ದುಗಳು ವ್ಯತ್ಯಾಸವಾಗಿರುವುದು ಚಾರಿತ್ರಿಕವಾಗಿ ತಿಳಿದಿದೆ.[೫೨]

**ಭಾಷೆ:** ಕೊಡಗಿನ ಮತ್ತೊಂದು ವಿಶಿಷ್ಟ ಭಾಷೆ 'ಎರವ ಭಾಷೆ'. ಇದನ್ನು ಕಾಡು ಭಾಷೆಯೆಂತಲೂ, ಮಲೆಯಾಳಂನ ಉಪಭಾಷೆಯೆಂತಲೂ ಕರೆಯಲಾಗುತ್ತದೆ. ಆದರೂ ಇದು ತನ್ನದೇ ಆದ ಭಾಷಾ ರಚನೆಯನ್ನು ಹೊಂದಿದೆ. ಇದು ನೇರವಾಗಿ ಕನ್ನಡ, ಕೊಡವ, ಮಲೆಯಾಳಂ ಭಾಷಿಗರಿಗೆ ಅರ್ಥವಾಗುವುದಿಲ್ಲ. ಇದು ದಕ್ಷಿಣ ದ್ರಾವಿಡ ಗುಂಪಿಗೆ ಸೇರುವ ಒಂದು ಪ್ರತ್ಯೇಕವಾದ ಭಾಷೆಯಾಗಿದೆ. ವ್ಯಾಕರಣದ ದೃಷ್ಟಿಯಿಂದ ನೋಡಿದರೆ ಎರವ ಭಾಷೆಯ ಕೆಲವು ಪದಗಳು ಕನ್ನಡ, ಕೊಡವ ಭಾಷೆಗಳಂತೆಯೇ 'ಉ' ಕಾರಾಂತಗಳಾಗಿವೆ.

**ಸಾಮಾಜಿಕ ಬದುಕು:** ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂದುಳಿದಿರುವ ಎರವರು ಪ್ರಕೃತಿಯೊಂದಿಗೆ ಸೆಣಸಾಡುತ್ತಲೇ ಬೆಳೆದಿರುತ್ತಾರೆ. ಯಾವುದೇ ಮೂಲಸೌಕರ್ಯಗಳನ್ನು ಹೊಂದದೆ, ನಿರೀಕ್ಷಿಸದೆ ಪರರಿಗೆ ಉಪಕಾರಿಯಾದ ಜೀವನ ಕಟ್ಟಿಕೊಂಡಿದ್ದಾರೆ. ಕೊಡವರು ಇವರನ್ನು ಜೀತದಾಳುಗಳಾಗಿಯೇ ನಡೆಸಿಕೊಂಡಿದ್ದಾರೆ. ಕಾಡುಗಳಲ್ಲಿ ದೊರೆಯುವ ಆಹಾರ ಪದಾರ್ಥಗಳೊಂದಿಗೆ, ಮೀನು, ಮೊಲ, ಅಳಿಲು, ಪಕ್ಷಿಗಳನ್ನು ಬೇಟೆಯಾಡಿಕೊಂಡು ತಿನ್ನುತ್ತಾರೆ. ಎರವರು ಮದ್ಯಪಾನಪ್ರಿಯರು. ದುಡಿದು ಸಂಪಾದನೆ ಮಾಡುವುದನ್ನೆಲ್ಲಾ ಕುಡಿತಕ್ಕೆ ವಿನಿಯೋಗಿಸುತ್ತಾರೆ. ವಾರಕ್ಕೊಮ್ಮೆ ಸಂತೆಗಳಲ್ಲಿ ಮಿತಿಮೀರಿ ಕುಡಿದು ಅಲ್ಲಲ್ಲೆ ರಸ್ತೆಯಂಚಿನಲ್ಲಿ ಬಿದ್ದಿರುವುದು ಸಾಮಾನ್ಯವಾಗಿರುತ್ತದೆ. ಎರವರಿಗೆ ಸ್ವಂತ ಭೂಮಿಯೆಂಬುದಿಲ್ಲ. ಗಟ್ಟಿ ದೇಹವನ್ನು ಹೊಂದಿದ್ದು ದುಡಿಯಲು ಯೋಗ್ಯರಾಗಿರುವ ಇವರ ದೌರ್ಬಲ್ಯಗಳನ್ನು ಕಂಡುಕೊಂಡಿರುವ ಇಲ್ಲಿನ ಕೆಲವು ಕಾಫಿ ಎಸ್ಟೇಟ್ ಮಾಲೀಕರು ಇವರಿಗೆ ಹಣದ ಆಮಿಷವೊಡ್ಡಿ ತಮ್ಮ ಜಮೀನುಗಳಲ್ಲಿ ದುಡಿಸಿಕೊಳ್ಳುತ್ತಿದ್ದಾರೆ.

ಕೊಡಗು ಜಮ್ಮಾಮಲೆ ಕಾಡುಗಳು ಮತ್ತು ಸರ್ಕಾರಿ ಅರಣ್ಯಗಳು ಎಂಬ ಎರಡು ರೀತಿಯ ಕಾಡುಗಳನ್ನು ಹೊಂದಿದೆ. ಇದರಲ್ಲಿ ಜಮ್ಮಾಮಲೆ ಕಾಡುಗಳು ಕೊಡವರು, ಒಕ್ಕಲಿಗರು ಹಾಗೂ ಕೃಷಿಕರ ಪಾಲಿನದ್ದಾಗಿದ್ದು, ಇವರೇ ಈ ಅರಣ್ಯಗಳ ಹಕ್ಕುದಾರರು. ಆದರೆ ಕಾಡಿನಲ್ಲೇ ಬೆಳೆದು ಬದುಕುತ್ತಿರುವ ಎರವರಂತಹ ಅನೇಕ ಬುಡಕಟ್ಟುಗಳಿಗೆ ಈ ರೀತಿಯ ಹಕ್ಕುದಾರಿಕೆಗಳಿಲ್ಲದಿರುವುದು ದುರಂತವೆನಿಸುತ್ತದೆ. ಇತ್ತೀಚೆಗೆ ವಿರಾಜಪೇಟೆ ತಾಲೂಕಿನ ದಿಡ್ಡಳ್ಳಿ ಎಂಬಲ್ಲಿ ಸೂರು ಕಟ್ಟಿಕೊಂಡಿರುವ ಅನೇಕ ಕುಟುಂಬಗಳನ್ನು ಒಕ್ಕಲೆಬ್ಬಿಸುವ ಕಾರ್ಯವನ್ನು ಸರ್ಕಾರ ಮಾಡುತ್ತಿದೆ. ಇದರ ವಿರುದ್ಧ ಅನೇಕ ಸಂಘಟನೆಗಳು ಹೋರಾಟಗಳನ್ನು ಮಾಡುತ್ತಿರುವುದು ಕಾಣುತ್ತಿದೆ. ಎರವರು ಕೃಷಿಭೂಮಿ ಹೊಂದುವುದಿರಲಿ, ವಾಸಕ್ಕೆ ಯೋಗ್ಯವಾದಷ್ಟು ಜಾಗವನ್ನು ಹೊಂದಲು ಕಷ್ಟವಾಗಿರುವುದು ಅವರ ಸಾಮಾಜಿಕ ಸ್ಥಿತಿಗತಿಗಳನ್ನು ಅನಾವರಣಗೊಳಿಸುತ್ತದೆ.

**ಅ. ಆಚರಣೆಗಳು**

**ಜನನ:** ಎರವರಲ್ಲಿ ಹೆರಿಗೆ ಪ್ರಕ್ರಿಯೆ ಅವರವರ ಮನೆಯಲ್ಲಿಯೆ ಅನುಭವಸ್ಥಳಾದ 'ಬೇತಿಗಾರ್ತಿ' (ಸೂಲಗಿತ್ತಿ)ಯ ಮೂಲಕ ನಡೆಯುತ್ತದೆ. ಯಾವುದೇ ತೊಂದರೆಯಾಗದಂತೆ ನಿಗಾ ವಹಿಸಿ ಹೆರಿಗೆ ಮಾಡಿಸುವ ಜವಾಬ್ದಾರಿಯನ್ನು ಸೂಲಗಿತ್ತಿ ಹೊಂದಿರುತ್ತಾಳೆ. ಈ ಸಮಯದಲ್ಲಿ ಅವಶ್ಯಕ ಕ್ರಮಗಳನ್ನು ಅನುಸರಿಸಿ ಜೀವಕ್ಕೆ ಯಾವುದೇ ಅಪಾಯವಾಗದಂತೆ ಹೆರಿಗೆಯನ್ನು ಮಾಡಿಸುತ್ತಾಳೆ ಎಂಬ ನಂಬಿಕೆಯಿದೆ.

ಮಗು ಜನಿಸಿದ ತಕ್ಷಣ ಸೂಲಗಿತ್ತಿ ಅದನ್ನು ಎತ್ತಿಕೊಂಡು ಪ್ರಾಥಮಿಕವಾಗಿ ಮಾಡಬಹುದಾದ ಎಲ್ಲಾ ರೀತಿಯ ಶುಶ್ರೂಷೆಗಳನ್ನು ಮಾಡಿ ಮಗುವನ್ನು ಶುಚಿಗೊಳಿಸಿ ಅದು

ಉಸಿರಾಡುವಂತೆ ನೋಡಿಕೊಳ್ಳುತ್ತಾಳೆ. ಎರಡು ಇಂಚುಗಳಷ್ಟು ಉದ್ದಬಿಟ್ಟು ಹೊಕ್ಕುಳಬಳ್ಳಿ ಕತ್ತರಿಸಿ ದಾರ ಕಟ್ಟಲಾಗುವುದು. ಈ ಸಮಯದಲ್ಲಿ ಬರುವ ರಕ್ತವನ್ನು ಮಗುವಿನ ತುಟಿ, ಕೆನ್ನೆ, ಅಂಗಾಲು ಮತ್ತು ಮುಂಗೈಗಳಿಗೆ ಹಚ್ಚಲಾಗುವುದು. ಕಾರಣ ಮಗುವಿನ ಈ ಅಂಗಗಳು ಬಿರಿಯದಿರಲಿ ಎಂಬ ನಂಬಿಕೆ. ತಾಯಿಯ ಎದೆಯ ಮೊದಲ ಹಾಲು ಗಟ್ಟಿಯಾಗಿರುವುದರಿಂದ ಮಗುವಿಗೆ ಜೀರ್ಣಿಸಿಕೊಳ್ಳಲು ಕಷ್ಟವಾಗುತ್ತದೆ ಎಂದು ಭಾವಿಸಿ ಆ ಹಾಲನ್ನು ಹಿಂಡಿ ತೆಗೆಯುತ್ತಾರೆ. ಈ ವಿಚಾರದಲ್ಲಿ ಎರವರಿಗೆ ಮಾಹಿತಿ ಕೊರತೆಯಿರುವುದು ಕಂಡುಬರುತ್ತದೆ. ತಾಯಿಯ ಮೊದಲ ಹಾಲು ಮಗುವಿಗೆ ರೋಗ ನಿರೋಧಕ ಶಕ್ತಿಯನ್ನು ಹೆಚ್ಚಿಸುತ್ತದೆ ಎಂಬುದು ಎರವರಿಗೆ ತಿಳಿದಂತಿಲ್ಲ. ಗಂಡು ಮಗುವಾದರೆ ಬಿಲ್ಲು, ಬಾಣವನ್ನು ಮಾಡಿ ಬಾಗಿಲಿಗೆ ನೇತುಹಾಕುತ್ತಾರೆ. ಮುಂದೆ ಬೇಟೆಯಲ್ಲಿ ನಿಪುಣನಾಗಲಿ ಎಂಬುದು ಇದರ ಉದ್ದೇಶವಾಗಿರುತ್ತದೆ.

ಅರಣ್ಯದಂಚಿನಲ್ಲಿ ವಾಸಿಸುತ್ತಿದ್ದರೂ ಮಗು ಮತ್ತು ಬಾಣಂತಿಯನ್ನು ಅತ್ಯಂತ ವ್ಯವಸ್ಥಿತ ಮತ್ತು ಆರೋಗ್ಯಕರವಾಗಿ ಆರೈಕೆ ಮಾಡಿಕೊಳ್ಳುತ್ತಾರೆ. ಬಾಣಂತಿಗೆ ಶೀತ, ಕೆಮ್ಮುಗಳಾಗದಿರಲೆಂದು ನಾಗದಾಲಿ ಎಲೆ, ಮೆಣಸು, ಜೀರಿಗೆ, ಬೆಳ್ಳುಳ್ಳಿ ಕಷಾಯಮಾಡಿ ಕುಡಿಸುತ್ತಾರೆ. ಬಾಣಂತಿಯ ಗರ್ಭ ಮತ್ತು ಮಗುವಿನ ಹೊಕ್ಕುಳುವಿನಲ್ಲಿ ಗಾಯಗಳಾಗಿದ್ದರೆ ಬೇಗ ಗುಣಮುಖವಾಗಲಿ ಎಂದು ನೀರಿಗೆ ಬೇವಿನ ಸೊಪ್ಪು ಹಾಕಿ ಕಾಯಿಸಿ ತಾಯಿ ಮತ್ತು ಮಗುವಿಗೆ ಸ್ನಾನ ಮಾಡಿಸುತ್ತಾರೆ.

**ನಾಮಕರಣ:** ಮಗುವಿನ ನಾಮಕರಣದ ಸಮಯಕ್ಕೆ ತಮ್ಮ ತಮ್ಮ ಗುಡಿಸಲಿನಂತಹ ಮನೆಯನ್ನು ಸಾಂಪ್ರದಾಯಿಕವಾಗಿ ಶುಚಿಗೊಳಿಸಿ, ಕುಲಪುರೋಹಿತನಾದ 'ಕನ್ನೆಲಾಡಿ'ಯನ್ನು ಕರೆಸುತ್ತಾರೆ. ಇದೇ ಸಮಯದಲ್ಲಿ ಬೇತಿಗಾರ್ತಿ ಮಗುವಿಗಾಗಿ ತೊಟ್ಟಿಲನ್ನು ಸಿದ್ಧಮಾಡಿ ಅದರೊಳಗೆ ಮಗುವನ್ನು ಮಲಗಿಸುತ್ತಾಳೆ. ಎರವರಲ್ಲಿ ಅವರ ವಂಶದ ಹಿರಿಯರ ಅಥವಾ ಮರಣ ಹೊಂದಿದವರ ಹೆಸರನ್ನು ಮಗುವಿಗೆ ಇಡುವುದು ವಾಡಿಕೆ. ಈ ಪರಂಪರೆ ಎಲ್ಲಾ ವರ್ಗಗಳಲ್ಲಿಯೂ ಇತ್ತು. ನಮ್ಮ ಹಿರಿಯರು ಮುಂದಿನ ಪೀಳಿಗೆಯವರ ಮೂಲಕ ನೆನಪಿನಲ್ಲುಳಿಯಬೇಕು ಎಂಬ ಪ್ರೀತಿಯಿತ್ತು. ಇದು ಕ್ರಮೇಣ ಮರೆಯಾಗಿ ನಿತ್ಯನೂತನ ಹೆಸರುಗಳನ್ನು ಇಡುವುದು ರೂಢಿಯಾಗಿದೆ. ಇದಕ್ಕೆ ಎರವ ಸಮಾಜವೂ ಹೊರತಾಗಿಲ್ಲ. ಇವರಲ್ಲಿ ಗಂಡು ಮಗುವಾದರೆ ಸಾಮಾನ್ಯವಾಗಿ ಮಾರ, ಬೆಳ್ಳಿ, ಚೋಮ, ಬೋಜ, ಸಿದ್ದ ಮೊದಲಾದ ಹೆಸರುಗಳನ್ನಿಡುತ್ತಿದ್ದರು. ಬದಲಾದ ಕಾಲಘಟ್ಟದಲ್ಲಿ ನಾಗರಿಕ ಜೀವನದ ಸಂಪರ್ಕದಿಂದಾಗಿ ರಮೇಶ, ಚಂದ್ರ, ಕುಮಾರ, ಕೃಷ್ಣ ಮೊದಲಾದ ಹೆಸರುಗಳನ್ನು ಇಡುತ್ತಿದ್ದಾರೆ.

**ಶವ ಸಂಸ್ಕಾರ:** ಮನುಷ್ಯ ಸಾವು ಮತ್ತು ಅನಂತರದ ಕ್ರಿಯೆ, ವಿಧಾನಗಳ ಆಚರಣೆಯಲ್ಲಿ ಬಹಳ ಶ್ರದ್ಧೆ ಮತ್ತು ಭಕ್ತಿಯನ್ನು ತೋರ್ಪಡಿಸುತ್ತಾನೆ. ಕಾರಣ ಸಂಸ್ಕಾರದಲ್ಲಿ ಯಾವುದೇ ಲೋಪವಾದರೂ ಮುಂದೆ ತನಗೆ ತೊಂದರೆಯಾಗಬಹುದೆಂಬ ಭಯ. ಹಾಗಾಗಿ ಸಂಸ್ಕಾರದ ಸಮಯದಲ್ಲಿ ಯಾವ ವಿಧಿಗಳನ್ನು ಉಳಿಸದೆ ನೆರವೇರಿಸುವುದು ಸಾಮಾನ್ಯವಾಗಿದೆ. ಸಾವಿನ ಬಗ್ಗೆ

ನಾಗರೀಕ ಸಮಾಜಗಳಿಗಿಂತ ಆದಿವಾಸಿ ಸಮಾಜಗಳು ತಮ್ಮದೆ ಆದ ಭಯ ಮತ್ತು ನಂಬಿಕೆಗಳನ್ನು ರೂಢಿಸಿಕೊಂಡಿರುವುದು ಕಂಡುಬರುತ್ತದೆ.[೫೪] ವ್ಯಕ್ತಿಯೊಬ್ಬನ ಸಾವಿನ ಸೂಚನೆಗಳು ಕಂಡು ಬಂದ ಕೂಡಲೆ ಆತನನ್ನು ಮನೆಯ ಹೊರಗೆ ತಂದು ಜಗಲಿ ಅಥವಾ ಮನೆಯ ಮುಂದಿನ ಅಂಗಳದಲ್ಲಿ ಮಲಗಿಸುತ್ತಾರೆ. ಜೀವ ಹೋದದ್ದು ಖಚಿತವಾದ ಮೇಲೆ ಅದರ ಸಂಸ್ಕಾರದ ಜವಾಬ್ದಾರಿಯನ್ನು ಕುಂಜುಕಾರ ವಹಿಸಿಕೊಳ್ಳುತ್ತಾನೆ. ಆದರೆ ಖರ್ಚು ವೆಚ್ಚಗಳನ್ನು ಆ ಕುಲದ ಚೆಮ್ಮಕಾರ(ಮುಖಂಡ) ಭರಿಸಬೇಕು. ಒಂದು ವೇಳೆ ಈತನಿಗೆ ಹಣಕಾಸಿನ ಸಮಸ್ಯೆ ಎದುರಾದರೆ ಕುಂಜುಕಾರನೇ ಸಾಲ ಕೊಡಿಸಿ ಸಂಸ್ಕಾರವನ್ನು ವಿಧಿವತ್ತಾಗಿ ನೆರವೇರಿಸಿಕೊಡಬೇಕು.

ಶವವನ್ನು ಸಂಸ್ಕಾರ ಮಾಡುವ ಮೊದಲು ಮನೆಯ ಅಂಗಳದಲ್ಲಿಟ್ಟು ಬಂಧು ಬಾಂಧವರಿಗೆಲ್ಲ ಅಂತಿಮ ದರ್ಶನ ಮಾಡಲು ಅನುವು ಮಾಡಿಕೊಡಲಾಗುತ್ತದೆ. ಒಬ್ಬ ವ್ಯಕ್ತಿಯನ್ನು ಕೊನೆಯ ಬಾರಿ ನೋಡಿಬಿಡೋಣವೆಂದು ಸಾಕಷ್ಟು ಸಂಖ್ಯೆಯಲ್ಲಿ ಜನ ಸೇರಿರುತ್ತಾರೆ. ಸತ್ತವರು ವ್ಯಕ್ತಿತ್ವದಿಂದ ಉತ್ತಮ ಹೆಸರನ್ನು ಗಳಿಸಿದ್ದರೆ ಸೇರುವ ಜನಸಂಖ್ಯೆಯೂ ಹೆಚ್ಚಿರುತ್ತದೆ. ಮುಖದರ್ಶನದ ನಂತರ ಶವದ ಮೇಲೆ ಒಂದು ಕಂಬಳಿ ಅಥವಾ ಬಟ್ಟೆ ಮುಚ್ಚಿ ತಲೆಯ ಹತ್ತಿರ ಒಂದು ಕಂಚಿನ ತಟ್ಟೆಯಲ್ಲಿ ಅಕ್ಕಿ, ಎಲೆ, ಅಡಿಕೆ, ತೆಂಗಿನಕಾಯಿ, ಎರಡು ಹಿತ್ತಾಳೆ ಬಳೆಗಳನ್ನು ಇಟ್ಟು ಇನ್ನೊಂದು ಬದಿಯಲ್ಲಿ ಗಂಧದ ಕಡ್ಡಿಗಳನ್ನೂ, ಹರಳೆಣ್ಣೆಯ ದೀಪವನ್ನು ಹಚ್ಚಿಡುತ್ತಾರೆ. ಎಲ್ಲಾ ಸಮಾಜಗಳಲ್ಲಿರುವಂತೆ ಎರವರೂ ಸಹ ಸಾವಿನ ಸೂಚಕವಾಗಿ ಸತ್ತ ವ್ಯಕ್ತಿಯ ಮನೆಯ ಮುಂದೆ ಬೆಂಕಿ ಹಾಕುತ್ತಾರೆ.

ಶವವನ್ನು ಹೂಳಲು ಅಥವಾ ಸುಡಲು ಎರವರಲ್ಲಿ ಅವಕಾಶವುಂಟು. ಸ್ವಾಭಾವಿಕವಾಗಿ, ಪ್ರಾಯವಾಗಿ ಸತ್ತರೆ ಹೂಳುವುದು ಮತ್ತು ಯಾವುದಾದರು ಸಾಂಕ್ರಾಮಿಕ ರೋಗಗಳಿಂದ ಬಳಲಿ ಸತ್ತರೆ ಸುಡುವುದು ರೂಢಿಯಲ್ಲಿದೆ. ಶವವನ್ನು ಸಂಸ್ಕಾರದ ಸ್ಥಳಕ್ಕೆ ಕೊಂಡೊಯ್ಯುಲು ಚಟ್ಟಗಳನ್ನು ಸಿದ್ಧಗೊಳಿಸುತ್ತಾರೆ. ಶವವನ್ನು ಕುಳ್ಳಿರಿಸುವ ಚಟ್ಟವಾದರೆ ಅದನ್ನು 'ಕಟ್ಟಿಲು'(ಮಂಚ) ಮತ್ತು ಮಲಗಿಸುವ ಚಟ್ಟವಾದರೆ 'ಪರೆಂಜಲು'(ಕುರ್ಚಿ) ಎಂದು ಕರೆಯುತ್ತಾರೆ.[೫೫] ಗಂಡಾಗಲಿ ಹೆಣ್ಣಾಗಲಿ ಆ ಶವಕ್ಕೆ ಒಪ್ಪುವ ರೀತಿಯಲ್ಲಿ ಅಲಂಕಾರ ಮಾಡುತ್ತಾರೆ. ಶವಕ್ಕೆ ಮಾಡುವ ಶೃಂಗಾರ ವ್ಯರ್ಥವೆಂದು ಗೊತ್ತಿದ್ದರೂ ಆ ಸಂಪ್ರದಾಯವನ್ನು ಮೀರಿ ನಡೆಯುವ ಧೈರ್ಯ ಯಾವುದೇ ಸಮಾಜಕ್ಕೂ ಇಲ್ಲದಿರುವುದು ಈ ಪದ್ಧತಿಯ ಬಗ್ಗೆ ಇರುವ ಭಯವೇ ಕಾರಣವೆಂದು ಹೇಳಬಹುದು.

ಎರವರಲ್ಲಿಯೂ ಕೆಂಬಟ್ಟಿಯರಂತೆ ಗರ್ಭಿಣಿ ಸತ್ತರೆ ಭ್ರೂಣವನ್ನು ಕತ್ತರಿಸಿ ತೆಗೆದು ತಾಯಿ ಮತ್ತು ಭ್ರೂಣವನ್ನು ಒಂದೇ ಗುಂಡಿಯಲ್ಲಿ ಹೂಳುವುದು ಈ ಸಮಾಜದಲ್ಲಿ ನಡೆದು ಕೊಂಡು ಬಂದಿರುವ ಪದ್ಧತಿ. ಸತ್ತ ವ್ಯಕ್ತಿಯ ದೇಹದ ಮೇಲೆ ಯಾವುದೇ ಗಾಯವಾಗದಂತೆ ಎಚ್ಚರಿಕೆಯಿಂದ ಸ್ನಾನ, ಪೂಜೆ ಮತ್ತಿತರ ಸಂಸ್ಕಾರಗಳನ್ನು ನಿರ್ವಹಿಸಲಾಗುತ್ತದೆ. ಶವದ ದೇಹಕ್ಕೆ ನೋವಾಗುತ್ತದೆ ಎಂಬ ನಂಬಿಕೆ ಜನಪದರಲ್ಲಿದೆ. ಇಂತಿರುವಾಗ ಯಾವುದೇ ವೈದ್ಯಕೀಯ

ವಿಚಾರಗಳೂ ತಿಳಿದಿಲ್ಲದವರು ಗರ್ಭಿಣಿಯ ಹೊಟ್ಟೆಯಲ್ಲಿರುವ ಭ್ರೂಣವನ್ನು ಕತ್ತರಿಸಿ ತೆಗೆಯುವುದು ಅನಾಗರಿಕವೆನಿಸುತ್ತದೆ. ಅಕ್ಷರ ಜ್ಞಾನವಿಲ್ಲದೆ ಎರವರು ಇಂದಿನ ಆಧುನಿಕ ಸಮಯದಲ್ಲಿಯೂ ಇದನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆಂಬುದು ಸಂದರ್ಶನದ ಮೂಲಕ ತಿಳಿಯಲಾಯಿತು. ಆದರೂ ಇದರ ಹಿಂದೆ ಒಂದು ಕಾರಣ ಅಡಗಿರುವುದು ತಿಳಿಯುತ್ತದೆ. ಅದೇಂದರೆ ತುಂಬು ಗರ್ಭಿಣಿ ತೀರಿಕೊಂಡರೆ ಅವಳೊಂದಿಗೆ ಹೊಟ್ಟೆಯಲ್ಲಿರುವ ಮಗುವೂ ಸಾಯುತ್ತದೆ ಎಂದು ಭಾವಿಸಿ ಆ ಮಗುವನ್ನಾದರೂ ಉಳಿಸಿಕೊಳ್ಳೋಣವೆಂದು ಭ್ರೂಣವನ್ನು ತೆಗೆಯುವ ಪದ್ಧತಿಯನ್ನು ಅಳವಡಿಸಿಕೊಂಡಿದ್ದರು ಎಂದು ತಿಳಿಯುತ್ತದೆ. ಹೀಗೆ ಮಾಡಿ ಉಳಿದುಕೊಂಡಿರುವ ಮಕ್ಕಳು ಇಂದು ಆರೋಗ್ಯಕರವಾಗಿ ವಾಸಿಸುತ್ತಿರುವುದು ತಿಳಿದು ಬಂದಿದೆ. ಕೆಲವೊಮ್ಮೆ ಮಗು ಹೊಟ್ಟೆಯಲ್ಲಿಯೇ ಮರಣವಾಗಿದ್ದರೆ ಅದನ್ನೂ ತಾಯಿಯ ಜೊತೆಯಲ್ಲಿ ಮಣ್ಣು ಮಾಡುತ್ತಿದ್ದರು.

ಶವ ಸಂಸ್ಕಾರದ ಸಮಯದಲ್ಲಿ ಎರವ ಸಮಾಜದ ಒಂದು ವಿಶಿಷ್ಟತೆಯನ್ನು ಪಿ. ಎನ್. ಹರೀಶ್ ಅವರು ಹೀಗೆ ವಿವರಿಸುತ್ತಾರೆ. "ಸತ್ತಿರುವ ವ್ಯಕ್ತಿಗೆ ಮೂವರು ಹಿರಿಯರ ಹೆಸರಿನಿಂದ ನಾಮಕರಣ ಮಾಡುತ್ತಾರೆ. ಸತ್ತವರ ತಂದೆಯ ಹೆಸರು, ತಂದೆಯ ಸೋದರ ಸಂಬಂಧಿಗಳ ಹೆಸರು ಮತ್ತು ಸೋದರ ಮಾವನ ಹೆಸರು– ಇವುಗಳಲ್ಲಿ ಒಂದೊಂದು ಹೆಸರು ಆಯ್ಕೆಯಾಗುತ್ತದೆ. ಒಂದೊಂದು ಹೆಸರನ್ನು ಹೇಳುವಾಗಲೂ ಒಬ್ಬ ಕನ್ನೆಲಾಡಿ ಹಿರಿಯರನ್ನು ಕುರಿತು ಇವನು ನಿಮ್ಮ ಕುಟುಂಬದವನು, ನಿಮ್ಮ ಕುಲದವನು, ನಿಮ್ಮ ಸಾಲಿಗೆ ಬರುತ್ತಿದ್ದಾನೆ. ಬೇರೊಬ್ಬ ಕನ್ನೆಲಾಡಿಯು ಮೇಲೆ ಹೆಸರಿಸಿದ ಹಿರಿಯನ ಪಾತ್ರ ವಹಿಸಿ 'ನಾನು ಬದುಕಿದ್ದಾಗ ನಾನು ಬಯಸಿದ್ದನ್ನು ತಂದುಕೊಡಲಿಲ್ಲ, ಸಾರಾಯಿ ಕೊಡಲಿಲ್ಲ, ಊಟ ಇಕ್ಕಲಿಲ್ಲ' ಎಂದೆಲ್ಲ ಆಕ್ಷೇಪಣೆ ಎತ್ತಿ ಸತ್ತವರನ್ನು ತಿರಸ್ಕರಿಸುತ್ತಾನೆ. ಆಗ ಮೊದಲನೆಯ ಕನ್ನೆಲಾಡಿಯು 'ಅವನು ನಿಮ್ಮ ಮಗ, ಅವನ ತಪ್ಪುಗಳನ್ನು ಕ್ಷಮಿಸಿ ನಿಮ್ಮೊಂದಿಗೆ ಸೇರಿಸಿಕೊಳ್ಳಿ. ಅವನಿಗೆ ಸದ್ಗತಿ ದೊರೆಯದಿದ್ದರೆ ನಿಮ್ಮ ಕುಲಕ್ಕೆ ಕೇಡು' ಎಂದು ಎಚ್ಚರಿಸಿ ಅವರ ಒಪ್ಪಿಗೆಯನ್ನು ಪಡೆಯುತ್ತಾನೆ.[೫೭] ನಂತರ ಶವಪೂಜೆಯನ್ನು ಮುಗಿಸಿ ಹೂಳುವ ಸ್ಥಳಕ್ಕೆ ಹೊತ್ತೊಯ್ಯುತ್ತಾರೆ.

ಎರವರಲ್ಲಿ ಕಾಣುವಂತ ಸಂಸ್ಕಾರದ ಮತ್ತೊಂದು ವಿಶೇಷತೆಯೆಂದರೆ ಶವವನ್ನು ಹೂಳುವಾಗಿನ ಕ್ರಮ. ಸಾಮಾನ್ಯವಾಗಿ ಹೂಳುವವರು ಗುಂಡಿಯಲ್ಲಿ ಅಂಗಾತ ಮಲಗಿಸುವುದು ರೂಢಿಯಲ್ಲಿದ್ದರೆ ಎರವರಲ್ಲಿ ಶವವನ್ನು ಬಲ ಮಗ್ಗುಲಿಗೆ ಮಲಗಿಸಿ ಎರಡೂ ಕೈಗಳನ್ನು ತಲೆಯ ಹತ್ತಿರ ಜೋಡಿಸುತ್ತಾರೆ. ನಂತರ ಕನ್ನೆಲಾಡಿಯು ಶವದ ಮುಂದೆ ನಿಂತು ಸ್ಮಶಾನದ ದೇವತೆಯರ 'ಚುಡಲಿ ಪಿರಾಮುಳೆ ಪತ್ರಗಾಳೆ'ಯನ್ನು ಕುರಿತು ಹಾಡಿನ ಮೂಲಕ ಶವದ ರಕ್ಷಣೆಗೆ ಎರವ ಭಾಷೆಯಲ್ಲಿ ಪ್ರಾರ್ಥಿಸುತ್ತಾನೆ. ಅದು ಹೀಗಿದೆ. "ಚುಡಲಿ ಪಿರಾಮುಳೆ ಪತ್ರಗಾಳೆಯೆ ನಾವು ಇಂದು ನಮ್ಮ ಒಬ್ಬ ಆಳನ್ನು ಇಲ್ಲಿ ಹೂಳಲು ತಂದಿದ್ದೇವೆ. ಅವನನ್ನು ಯಾರೂ ಸಂಕೋಲೆಯಲ್ಲಿ ಕಟ್ಟಿ ಕೋಲಿನಿಂದ ಹೊಡೆದುಕೊಂಡು ಹೋಗದಂತೆ ನೋಡಿಕೋ, ಯಾವ ಕಳ್ಳ(ನರಿ)ನಿಗೂ

ಕೊಡಬೇಡ, ಯಾವ ಕಾಗೆಗೂ ಕೊಡಬೇಡ, ರಣಹದ್ದುಗಳಿಗೂ ಕೊಡಬೇಡ. ನಾವು ಪುನಃ ಇಲ್ಲಿಗೆ ಬರುವವರೆಗೂ ಅವನನ್ನು ನಿನ್ನ ಮಡಿಲಿನ ಆಸರೆಯಲ್ಲಿ ಮರೆಮಾಡಿಕೊಂಡು ರಕ್ಷಿಸು. ನಿನಗೆ ನಾವು ಕೂಲಿಯನ್ನೋ ಸಂಬಳವನ್ನೋ ಕೊಡುತ್ತೇವೆ. ನಿನಗೆ ಕೊಡಬೇಕಾದ ಕಾಣಿಕೆಯನ್ನು ಕೊಟ್ಟು ಅವನನ್ನು ಕರೆದುಕೊಂಡು ಹೋಗುತ್ತೇವೆ".[೫೭] ಎಂದು ಹಾಡಿ ಮೊದಲಿಗೆ ಕುಲಪುರೋಹಿತ ಅಥವಾ ಕನ್ನೆಲಾಡಿ ಮೂರು ಬೊಗಸೆ ಮಣ್ಣನ್ನು ಶವದ ಮೇಲೆ ಹಾಕುತ್ತಾನೆ. ಉಳಿದವರೂ ಈ ಪ್ರಕ್ರಿಯೆಯನ್ನು ಪೂರ್ಣಗೊಳಿಸಿ ಮನೆಗೆ ಹಿಂದಿರುಗುತ್ತಾರೆ.

**ಆ. ವಿವಾಹ ಪದ್ಧತಿ**

ಎರವರು ಕೊಡಗಿನ ಇತರೆ ಜನಾಂಗಗಳಂತೆ ವೈವಾಹಿಕ ಸಂಬಂಧಗಳಿಗೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡಿದ್ದಾರೆ. ಕಾಡುಮೇಡುಗಳಲ್ಲಿ ಜೀವನ ನಡೆಸುತ್ತಿದ್ದರು ಸಂಪ್ರದಾಯಗಳನ್ನು ನಿರಂತರವಾಗಿ ಕಾಪಾಡಿಕೊಂಡು ಬಂದಿದ್ದಾರೆ. ಅತ್ಯಂತ ವ್ಯವಸ್ಥಿತ ರೀತಿಯಲ್ಲಿ ವೈವಾಹಿಕ ಜೀವನಕ್ಕೆ ಪ್ರವೇಶಿಸುವ ಪದ್ಧತಿಯನ್ನು ಎರವರು ಅಳವಡಿಸಿಕೊಂಡಿದ್ದಾರೆ. ಇವರಿಗೆ ಹಣದ ಕೊರತೆಯಿರಬಹುದು. ಆದರೆ ಸಂಪ್ರದಾಯದ ಕೊರತೆಯಿರುವಂತೆ ಕಾಣುವುದಿಲ್ಲ. ಸಮಾಜದಲ್ಲಿ ವ್ಯಕ್ತಿಯೊಬ್ಬ ಮದುವೆಯಾಗುವುದು ತನ್ನ ಅನುಕೂಲಕ್ಕಾಗಿ ಅಲ್ಲವೆಂಬ ವಿಚಾರಗಳನ್ನು ಎರವರು ಕೂಡ ಅನುಸರಿಸುತ್ತಿದ್ದಾರೆ. ಕುಟುಂಬವನ್ನು ಬೆಳೆಸುವ ಉದ್ದೇಶದಿಂದ ಗಂಡು ಅಥವಾ ಹೆಣ್ಣನ್ನು ಆರಿಸುವುದು ತಂದೆ ತಾಯಿ ಅಥವಾ ಹಿರಿಯರ ಕರ್ತವ್ಯವೆಂದು ಎರವರು ಭಾವಿಸಿದ್ದಾರೆ.

ಎರವರಲ್ಲಿ ಹುಡುಗಿ ಮೈನೆರೆಯುವುದಕ್ಕೆ ಮೊದಲು ವಿವಾಹ ಮಾಡುವ ಪದ್ಧತಿಯಿಲ್ಲ. ಆದರೆ ಮೈನೆರೆದ ಕೂಡಲೇ ಮದುವೆ ಮಾಡಿಕೊಡಲು ಉತ್ಸುಕರಾಗಿರುತ್ತಾರೆ. ಕೊಡವರ ಅನೇಕ ಸಂಸ್ಕೃತಿಗಳಿಗೆ ಒಗ್ಗಿಹೋಗಿರುವ ಎರವರು ಕೊಡವರಂತೆ ಹೆಣ್ಣುಮಕ್ಕಳ ವಿವಾಹವನ್ನು ನಿಧಾನಿಸುವುದಿಲ್ಲ. ಇವರಲ್ಲಿ ನಾಲ್ಕು ವಿಧದ ವಿವಾಹ ಕ್ರಮಗಳಿದ್ದು ಈಗಲೂ ಅನುಸರಿಸಿಕೊಂಡು ಬರುತ್ತಿದ್ದಾರೆ.

**ಹೊಂದಾಣಿಕೆ ವಿವಾಹ:** ಎರವರಲ್ಲಿ ಯಾರದಾದರು ಒಂದು ಮನೆಯಲ್ಲಿ ಋತುಮತಿಯಾದ ಹೆಣ್ಣು ಇದ್ದಾಳೆ ಎಂದು ತಿಳಿದರೆ. ಹುಡುಗನ ಮನೆಯವರು ಹುಡುಗನ ಜೊತೆ ಹೋಗಿ ಹುಡುಗಿಯನ್ನು ನೋಡುತ್ತಾರೆ. ಹುಡುಗ ಒಪ್ಪಿದರೆ ಎರಡೂ ಕುಟುಂಬದವರೂ ಮದುವೆಯ ದಿನವನ್ನು ಗೊತ್ತುಮಾಡುತ್ತಾರೆ. ಮದುವೆಯ ದಿನ ಇನ್ನೂ ಒಂದು ತಿಂಗಳಿರುವಂತೆ ವರನ ಮನೆಯವರು ವಧುವಿನ ಮನೆಗೆ ಹೋಗಿ ಮದುವೆ ಹುಡುಗನ ಸಹೋದರಿ ಅಥವಾ ಅತ್ತಿಗೆ ಹುಡುಗಿಯ ಸೆರಗಿಗೆ ಒಂದು ನಾಣ್ಯವನ್ನು ಕಟ್ಟಬೇಕು. ಕೆಲವೊಮ್ಮೆ ಕಾಲುಂಗುರ ತೊಡಿಸುತ್ತಾರೆ. ಇದರ ಮೂಲಕ ನಿಶ್ಚಿತಾರ್ಥವೂ ನೆರವೇರಿದಂತಾಗುತ್ತದೆ. ನಿಶ್ಚಿತಾರ್ಥ ನಡೆದ ಮೇಲೆ ಮದುವೆ

ಮುರಿದು ಹೋಗುವ ಹಾಗಿಲ್ಲವೆಂಬ ಕಟ್ಟುನಿಟ್ಟಿನ ಕ್ರಮವಿದೆ. ಇವರಲ್ಲಿ ವರದಕ್ಷಿಣೆಯ ಜೊತೆಗೆ ವಧುದಕ್ಷಿಣೆಯೂ ಇರುವುದು ವಿಶೇಷ.

ನಿಶ್ಚಿತಾರ್ಥವಾದ ನಂತರ ಹುಡುಗ ಹತ್ತು ಸೇರು ಭತ್ತ, ಒಂದು ಪಟ್ಟಿ ವೀಳ್ಯದೆಲೆ ಮತ್ತು ಅಡಿಕೆ, ಹಾಗೂ ಒಂದು ದೊಡ್ಡ ಸೌದೆಯ ಹೊರೆಯನ್ನು ತೆಗೆದುಕೊಂಡು ಹೋಗಬೇಕು. ಇಷ್ಟು ವಸ್ತುಗಳನ್ನು ತೆಗೆದುಕೊಂಡು ಹೋಗುವುದು ವರನ ಆರ್ಥಿಕ ಸ್ಥಿತಿಗತಿ ಹಾಗೂ ದೈಹಿಕ ಸಾಮರ್ಥ್ಯವನ್ನು ಅಳೆಯುವ ನಿಟ್ಟಿನಲ್ಲಿ ಎಂದು ಹೇಳಲಾಗುತ್ತದೆ.

ಮದುವೆಗೆ ಸಂಬಂಧಿಸಿದ ಹಲವು ಶಾಸ್ತ್ರಗಳು ಆರಂಭವಾಗುವುದು ಮದುವೆಯ ಹಿಂದಿನ ದಿನ. ಆ ದಿನ ಹೆಣ್ಣು ಮತ್ತು ಗಂಡಿನ ಮನೆಯ ಅಂಗಳದಲ್ಲಿ ಶಾಸ್ತ್ರಯುಕ್ತವಾಗಿ ಹನ್ನೆರಡು ಕಂಬಗಳಿರುವ ಚಪ್ಪರವನ್ನು ಹಾಕುತ್ತಾರೆ. ಇವುಗಳಲ್ಲಿ ಒಂದು ಕಂಬ ಹಲಸು, ಗೋಣಿ, ಬಸುರಿ ಅಥವಾ ಅತ್ತಿಯಂತಹ ಹಾಲು ಬರುವ ಕಂಬವಾಗಿರಬೇಕು. ಇದನ್ನು 'ಪಾಲುಗಂಬ' ಎಂದು ಕರೆಯಲಾಗುತ್ತದೆ. ಕೃಷಿಕ ಸಮಾಜಗಳು ಈ ಮೇಲಿನ ಮರಗಳ ಬಗ್ಗೆ ಒಂದು ವಿಧದ ಗೌರವವನ್ನು ಹೊಂದಿರುವುದು ಇಂಥ ಸಂದರ್ಭದಲ್ಲೂ ತಿಳಿದುಬರುತ್ತದೆ.

ಮದುವೆಯ ದಿನ ಗಂಡು ಮತ್ತು ಹೆಣ್ಣಿನ ಮನೆಗಳಲ್ಲಿ ವಿಧಿವತ್ತಾದ ಶಾಸ್ತ್ರೋಕ್ತಗಳು ನಡೆಯುತ್ತವೆ. ಗಂಡಿನ ಮನೆಯಿಂದ ಹೊರಡುವುದಕ್ಕೆ ಮೊದಲು ಹಸೆ ಬರೆದು ಅದರ ಮೇಲೆ ವರನನ್ನು ಕೂರಿಸಿ ಆರತಿ ಬೆಳಗಿ ಮತ್ತೈದೆಯರು ಕಂಕಣ ಕಟ್ಟಿ ಅಕ್ಷತೆ ಹಾಕುತ್ತಾರೆ. ನಂತರ ಅಲ್ಲಿನ ಹಿರಿಯರೊಬ್ಬರಿಂದ ಗಂಡಿನ ಅಲಂಕಾರ ನಡೆಯುತ್ತದೆ. ಬಿಳಿಯ ಪಂಚೆಯಿಂದ ಕಚ್ಚೆ, ಬಿಳಿಯ ನಿಲುವಂಗಿ, ಹಣೆಗೆ ವಿಭೂತಿ ಹಚ್ಚಿ ತಲೆಗೆ ಬಿಳಿಯ ಮಲ್ಲಿನ ಪೇಟವನ್ನು ಕಟ್ಟುತ್ತಾರೆ. ಅದೇ ದಿನ ಹುಡುಗಿಯ ಮನೆಯಲ್ಲಿಯೂ ಮಂಗಳ ಸ್ನಾನ ಕಂಕಣಶಾಸ್ತ್ರ, ಬಳೆಶಾಸ್ತ್ರ ಮುಂತಾದ ಸಂಸ್ಕಾರಗಳನ್ನು ಮಾಡಿಸಲಾಗುತ್ತದೆ.

ದಿಬ್ಬಣದೊಂದಿಗೆ ವಧುವಿನ ಮನೆಗೆ ಆಗಮಿಸಿದ ವರನ ಕಡೆಯವರನ್ನು ವಿಶ್ರಾಂತಿಗಾಗಿ ಒಂದು ಖಾಲಿ ಮನೆಯಲ್ಲಿ ಬಿಡುತ್ತಾರೆ. ಧಾರಾ ಸಮಯ ಹತ್ತಿರ ಬಂದಾಗ ಹುಡುಗಿಯ ಮನೆಯ ಎದುರು ಹಾಕಿರುವ ಚಪ್ಪರದ ಕೆಳಗಿನ ಮಂಟಪಕ್ಕೆ ಹುಡುಗನ್ನು ಕರೆದು ಕೂರಿಸುತ್ತಾರೆ. ಈ ಸಮಯದಲ್ಲಿ ಎರಡು ಹಸೆಮಣೆಗಳು ಮತ್ತು ಹರಿವಾಣಗಳಲ್ಲಿ ಪ್ರತ್ಯೇಕವಾಗಿ ಜುಟ್ಟುಸಹಿತ ಐದು ತೆಂಗಿನಕಾಯಿಗಳು, ಐದು ಚಿಪ್ಪು ಬಾಳೆಹಣ್ಣು, ಅಕ್ಷತೆಕಾಳು ಎಲೆ ಅಡಿಕೆಗಳನ್ನು ಇಡುತ್ತಾರೆ. ಹುಡುಗಿಯನ್ನು ಮಂಟಪಕ್ಕೆ ಕರೆತರುವಾಗ ವರನನ್ನು ನಿಲ್ಲಿಸಿ ಅವನಿಗೆ ಅಡ್ಡಲಾಗಿ ಒಂದು ಬಿಳಿ ಬಟ್ಟೆಯನ್ನು ಹಿಡಿಯುತ್ತಾರೆ. ಹುಡುಗಿಯ ಸೋದರ ಮಾವ ಅವಳ ಕೈಹಿಡಿದುಕೊಂಡು ಮಂಟಪವನ್ನು ಮೂರು ಸುತ್ತು ಪ್ರದಕ್ಷಿಣೆ ಮಾಡಿಸಿ ಹುಡುಗನಿಗೆ ಎದುರಿಗೆ ನಿಲ್ಲಿಸುತ್ತಾನೆ. ಹುಡುಗಿ ಒಂದು ಹಸೆಮಣೆ ಮೇಲೆ ನಿಂತಾಗ ಅಡ್ಡಲಾಗಿ ಹಿಡಿದಿರುವ ಅಂತರಪಟವನ್ನು ಸರಿಸಲಾಗುವುದು. ನಂತರ ವರ ವಧುವಿಗೂ, ವಧು ವರನಿಗೂ ಹೂಮಾಲೆಯನ್ನು ಹಾಕುತ್ತಾರೆ.

ಈ ಎಲ್ಲವೂ ಮುಗಿದ ಬಳಿಕ ವಧು-ವರರನ್ನು ಹಸೆಮಣೆಯ ಮೇಲೆ ಕೂರಿಸುತ್ತಾರೆ. ಇಲ್ಲಿಯೂ ಕೆಲವು ಶಾಸ್ತ್ರಗಳು ನಡೆಯುತ್ತವೆ. ಮದುವೆಯ ನಿಶ್ಚಿತಾರ್ಥದಲ್ಲಿಯೇ ಹುಡುಗನ ಸೋದರಿ ಹುಡುಗಿಗೆ ತಾಳಿ ಕಟ್ಟಿರುತ್ತಾಳೆ. ಇಲ್ಲಿ ಇವರ ಮೇಲೆ ಕೊಡವರ ಪ್ರಭಾವವಿರುವುದನ್ನು ನೆನೆಯಬಹುದು. ಇಲ್ಲಿ ಮಂಟಪ ಮುಹೂರ್ತ ಮಾತ್ರ ನಡೆಯುತ್ತದೆ. ಇದಾದ ನಂತರ ಹುಡುಗ ಹುಡುಗಿಯನ್ನು ಅದಲು-ಬದಲು ಮಾಡಿ ಕೂರಿಸಿ ಇಬ್ಬರ ಬಟ್ಟೆಯ ಒಂದು ತುದಿಯನ್ನು ಗಂಟು ಹಾಕುತ್ತಾರೆ. ಹೀಗೆ ಬಟ್ಟೆಗೆ ಗಂಟು ಹಾಕುವುದು ಇಬ್ಬರ ವೈವಾಹಿಕ ಜೀವನ ಗಟ್ಟಿಯಾಗಿರಲಿ ಎಂಬ ನಂಬಿಕೆ ಇವರದು. ಇಲ್ಲಿಗೆ ವಿವಾಹದ ಪ್ರಮುಖ ಹಂತ ಮುಗಿದಂತಾಗುತ್ತದೆ.

ಮದುವೆಗೆ ಆಗಮಿಸಿರುವ ಬಂಧುಬಾಂಧವರಿಗೆ ಔತಣವನ್ನು ಏರ್ಪಡಿಸಲಾಗಿರುತ್ತದೆ. ಸಾಮಾನ್ಯವಾಗಿ ಎರವರು ಸಹ ಕೊಡವರಂತೆಯೇ ಹಂದಿಮಾಂಸದ ಬಳಕೆಯನ್ನು ಮಾಡುತ್ತಾರೆ. ಬಂಧು-ಬಳಗದವರು ಸುಖ ಭೋಜನ ಸವಿದು ದಾಂಪತ್ಯಕ್ಕೆ ಕಾಲಿಟ್ಟ ಜೋಡಿಯನ್ನು ಹರಸುತ್ತಾರೆ. ನಂತರ ವರನ ಮನೆಯವರು ವಧುವನ್ನು ಕರೆದುಕೊಂಡು ತಮ್ಮ ಮನೆಗೆ ಬರುತ್ತಾರೆ. ವರನ ಮನೆಯಲ್ಲಿ ಗಂಗಾ ಪೂಜೆ ನಡೆಯುತ್ತದೆ. ಈ ಸಮಯದಲ್ಲಿ ಹುಡುಗಿ ಒಂದು ಬಿಂದಿಗೆಯಲ್ಲಿ ನೀರನ್ನು ತಲೆಯ ಮೇಲೆ ಹೊತ್ತು ಬಾಳೆಗಿಡಕ್ಕೆ ಸುರಿಯುತ್ತಾಳೆ. (ಮೈಸೂರು ಭಾಗದ ಕೆಲವು ಸಂಪ್ರದಾಯಗಳಲ್ಲಿ ನೀರನ್ನು ತೆಂಗಿನ ಮರದ ಬುಡಕ್ಕೆ ಸುರಿಯಲಾಗುತ್ತದೆ.) ಇದಾದ ನಂತರ ವಧು ಗಂಡನ ಮನೆಯನ್ನು ಸಾಂಪ್ರದಾಯಿಕವಾಗಿ ಪ್ರವೇಶಿಸಿದಂತಾಗುತ್ತದೆ. ಇಲ್ಲಿಂದ ಇವರ ವೈವಾಹಿಕ ಜೀವನ ಆರಂಭವಾಗುತ್ತದೆ.

**ಆಯ್ಕೆಯ ಮದುವೆ:** ಇದು ಹುಡುಗನೇ ತನಗೆ ಅನುರೂಪಳಾದ ಹುಡುಗಿಯನ್ನು ಆಯ್ಕೆ ಮಾಡಿಕೊಳ್ಳಬಹುದಾದ ವಿಧಾನ. ಹುಡುಗನ ಅಪ್ಪ ಅಮ್ಮಂದಿರ ಅನುಮತಿಯ ಮೇರೆಗೆ ಹುಡುಗ ಹುಡುಗಿಯನ್ನು ವರಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಇಂಥ ಸಮಯದಲ್ಲಿ ಹುಡುಗ ತನಗಿಷ್ಟವಾದ ಹುಡುಗಿಯ ಮನೆಗೆ ಹೋಗಿ ಅಲ್ಲಿ ದಿನಾ ಕಾಡಿನಿಂದ ಸೌದೆಯನ್ನು ತಂದು ಕೊಡುವ ಮೂಲಕ ಅವಳನ್ನು ತನ್ನವಳನ್ನಾಗಿಸಿಕೊಳ್ಳುವ ಪ್ರಯತ್ನ ಮಾಡುತ್ತಾನೆ. ಹುಡುಗ ಮತ್ತು ಹುಡುಗಿ ಪರಸ್ಪರ ಒಪ್ಪಿದ ಮೇಲೆ ಹುಡುಗ ತನ್ನ ಪೋಷಕರಿಗೆ ವಿಷಯ ತಿಳಿಸುತ್ತಾನೆ. ನಂತರ ವಿವಾಹ ಕ್ರಮಗಳು ನಡೆಯುತ್ತವೆ.

**ಪಲಾಯನ ಮದುವೆ:** ಹುಡುಗ ಮತ್ತು ಹುಡುಗಿ ಪರಸ್ಪರ ಒಪ್ಪಿದ್ದೂ, ಪೋಷಕರ ವಿರೋಧ ವ್ಯಕ್ತವಾದಾಗ ಅವರು ತಮ್ಮ ವಾಸಸ್ಥಳದಿಂದ ದೂರ ಹೋಗಿ ಒಂದೆರಡು ವಾರ ಕಾಡಿನಲ್ಲೇ ವಾಸಿಸುತ್ತಾರೆ. ಹಿಂತಿರುಗಿದ ನಂತರ ಪೋಷಕರು ವಿಧಿಯಿಲ್ಲದೆ ಬಹಳ ಸರಳವಾಗಿ ಮದುವೆ ನೆರವೇರಿಸಿಕೊಟ್ಟು ಅವರ ದಾಂಪತ್ಯ ಜೀವನಕ್ಕೆ ಶುಭ ಹಾರೈಸುತ್ತಾರೆ. ಒಂದು ವೇಳೆ ಓಡಿ ಹೋದ ಕೆಲವು ತಿಂಗಳಲ್ಲಿ ಅವರು ಬರದೇ ಹೋಗಿ, ಒಂದು ಮಗುವಾದ ನಂತರ ಬಂದರೂ ಅವರಿಗೆ ಸಾಂಪ್ರದಾಯಿಕವಾಗಿ ನಿಶ್ಚಿತಾರ್ಥವನ್ನು ನೆರವೇರಿಸಿ ವಿವಾಹ ಮಾಡುವುದು ಎರವರು ರೂಢಿಸಿಕೊಂಡಿರುವ ವಿಶೇಷ ಪದ್ಧತಿಯಾಗಿದೆ.

ಕೆಲವೊಮ್ಮೆ ವಿಧಿವತ್ತಾಗಿ ಮದುವೆ ಮಾಡಿಸಬೇಕಾದರೆ ಹಣಕಾಸಿನ ವಿಚಾರದಲ್ಲಿ ಕಷ್ಟವಾಗಬಹುದು. ನಿಶ್ಚಿತಾರ್ಥ, ಹೊರೆಹೊರುವುದು, ತೆರಕಟ್ಟುವುದು, ನೆಂಟರಿಷ್ಟರಿಗೆಲ್ಲ ಊಟೋಪಚಾರದ ವ್ಯವಸ್ಥೆ ಮೊದಲಾದವುಗಳಿಗೆ ತಗಲುವ ವೆಚ್ಚ ದುಬಾರಿಯಾಗುವುದರಿಂದ ಮೆಚ್ಚಿಕೊಂಡವರೇ ಓಡಿ ಹೋಗುವ ಸಾಧ್ಯತೆಯಿರುತ್ತದೆ. ಅಥವಾ ಹುಡುಗನ ಕಡೆಯವರೇ ಓಡಿ ಹೋಗಲು ಪ್ರೇರೇಪಿಸುವ ಸಾಧ್ಯತೆಯಿರಬಹುದು ಎನ್ನಲಾಗಿದೆ.[೫೮]

**ಬಲತ್ಕಾರದ ಮದುವೆ:** ಒಬ್ಬ ಹುಡುಗ, ಹುಡುಗಿಯನ್ನು ಮದುವೆಯಾಗಲು ಬಯಸಿದ್ದು, ಇದಕ್ಕೆ ಹುಡುಗಿ ನಿರಾಕರಿಸಿದರೆ ಆಕೆಯನ್ನು ಅಪಹರಿಸಿಕೊಂಡು ಕಾಡಿನೊಳಕ್ಕೊ ಅಥವಾ ಬೇರೆ ಊರಿಗೋ ಹೋಗುತ್ತಾನೆ. ಅಲ್ಲಿ ಅನಿವಾರ್ಯವಾಗಿ ಪರಸ್ಪರ ಹೊಂದಿಕೊಂಡು ಒಪ್ಪಿಗೆಯಾಗುತ್ತದೆ. ನಂತರ ತಮ್ಮ ಹಾಡಿಗಳಿಗೆ ಹಿಂತಿರುಗಿ ಎಲ್ಲರೊಂದಿಗೆ ಬೆರೆತು ಜೀವನ ನಡೆಸುತ್ತಾರೆ.

**ಅಂತರ್ಜಾತೀಯ ವಿವಾಹ:** ಜಾತಿಯೆಂಬುದು ಈ ದೇಶದ ದೊಡ್ಡ ಪೆಡಂಭೂತ. ಸಮಾಜ ಇದನ್ನು ಮೀರಿ ನಡೆಯಲು ಸಾಧ್ಯವೇ ಇಲ್ಲದಂತಹ ಸ್ಥಿತಿ ನಿರ್ಮಾಣವಾಗಿದೆ. ಒಂದು ವೇಳೆ ಮೀರಿದರೆ ಸಮಾಜದ ಅವಗಣನೆಗೆ ಗುರಿಯಾಗಬೇಕಾಗುತ್ತದೆ. ಹೀಗಿದ್ದರೂ ಪ್ರೀತಿ ಪ್ರೇಮಗಳ ಕಾರಣದಿಂದಾಗಿ ಸಮಾಜ ಒಪ್ಪಲಿ ಅಥವಾ ಬಿಡಲಿ ಅಂತರ್ಜಾತೀಯ ವಿವಾಹಗಳು ಅಲ್ಲಲ್ಲಿ ಆಗಾಗ ನಡೆಯುತ್ತಿವೆ. ಎರವರಲ್ಲಿಯೂ ಅಂತರ್ಜಾತೀಯ ವಿವಾಹಗಳು ನಡೆದಿವೆ.

ಎರವರು ಅಂತರ್ಜಾತೀಯ ವಿವಾಹವನ್ನು ವಿರೋಧಿಸುತ್ತಾರೆ. ಆದರೆ ತಮಗಿಂತ ಉತ್ತಮ ಕುಲದವರೊಡನೆ ವಿವಾಹವಾಗಲು ಕೆಲವು ವಿನಾಯಿತಿಗಳನ್ನು ರೂಢಿಸಿಕೊಂಡಿದ್ದಾರೆ. ಸಾಮಾನ್ಯವಾಗಿ ಬೇರೆ ಜಾತಿಯ ಗಂಡಸರು ಎರವ ಸಮಾಜದ ಮಹಿಳೆಯರನ್ನು ಮದುವೆಯಾಗಿರುವ ನಿದರ್ಶನಗಳನ್ನು ಕಂಡುಕೊಳ್ಳಲಾಗಿದೆ.[೫೯] ಪ್ರತಿಯೊಂದು ಜಾತಿಯ ಜನರಂತೆ ತಮ್ಮ ಸಮಾಜಕ್ಕೆ ಸೇರ್ಪಡೆಯಾಗಲಿರುವ ಹೆಣ್ಣು ಅಥವಾ ಗಂಡು ತಮಗಿಂತ ಅಥವಾ ತಮಗೆ ಸಮಾನವಾದ ಸಾಮಾಜಿಕ ಸ್ಥಾನಮಾನಗಳನ್ನು ಪಡೆದವರಾಗಿರಬೇಕು ಎಂದು ಅಪೇಕ್ಷಿಸುತ್ತಾರೆ.

**ಕೂಡಾವಳಿ ವಿವಾಹ:** ಕೂಡಾವಳಿ ಎಂದರೆ ಗಂಡನಿಂದ ಬೇರ್ಪಟ್ಟ ಅಥವಾ ಗಂಡ ಸತ್ತ ಹೆಣ್ಣು ತಾನು ಇಚ್ಛಿಸಿದ ಮತ್ತೊಬ್ಬರೊಡನೆ ಸಾಂಸಾರಿಕ ಜೀವನ ನಡೆಸಲು ಅನುವುಮಾಡಿಕೊಡುವ ಒಂದು ಪದ್ಧತಿ. ಇದನ್ನು ಮರುಮದುವೆಯಾಗುವುದು ಎಂದೂ ಕರೆಯುತ್ತಾರೆ. ಕೂಡಾವಳಿ ಮದುವೆಯಾಗಬೇಕೆಂದುಕೊಂಡವನು ತಾನು ಬಯಸಿದ ವಿಧವೆ ಅಥವಾ ವಿಚ್ಛೇದಿತಳ ಕುಟುಂಬದ ಹಿರಿಯರನ್ನು ಕಂಡು ವಿಷಯ ತಿಳಿಸುತ್ತಾನೆ. ಇಂಥ ಹೆಣ್ಣು ಮನೆಯಲ್ಲಿರುವುದಕ್ಕಿಂತ ಜೀವನಪೂರ್ತಿ ಬಾಳಸಂಗಾತಿಗಳಾಗಿರಲಿ ಎಂದು ಸಾಮಾನ್ಯವಾಗಿ ಹಿರಿಯರು ಇದಕ್ಕೆ ಒಪ್ಪಿಗೆ ಸೂಚಿಸುತ್ತಾರೆ. ಈ ರೀತಿಯ ವಿವಾಹದಲ್ಲಿ ಯಾವುದೇ ರೀತಿಯ ಶಾಸ್ತ್ರೋಕ್ತಗಳಿರುವುದಿಲ್ಲ.

ತಮಗೆ ಅನುಕೂಲವಾಗುವ ಸಮಯವನ್ನು ನಿರ್ಧರಿಸಿಕೊಂಡು ಹುಡುಗಿಯ ಮನೆಯವರು ಹುಡುಗನ ಕಡೆಯವರನ್ನು ಬರಮಾಡಿಕೊಳ್ಳುತ್ತಾರೆ. ಮದುವೆಯಾಗಲಿರುವ ಹುಡುಗ ಮತ್ತು ಹುಡುಗಿ ಕಡೆಯ 'ಕುಂಜುಕಾರ'(ಮುಖ್ಯಸ್ಥ), 'ಕನ್ನೆಲಾಡಿ'(ಪುರೋಹಿತ) ಮತ್ತು 'ಕರ್ಮಿ' (ಕರ್ಮಾಂತರ ಕ್ರಿಯೆಗಳನ್ನು ಮಾಡುವವನು) ಮತ್ತು ಬಂಧುಬಳಗದವರು ಈ ಮದುವೆಗೆ ಸಾಕ್ಷಿಯಾಗುತ್ತಾರೆ. ಈ ಸಮಯದಲ್ಲಿಯೂ ಹುಡುಗನ ಸಹೋದರಿಯೇ ಹುಡುಗಿಗೆ ತಾಳಿಕಟ್ಟುವ ಮೂಲಕ ಮದುವೆಯನ್ನು ಪೂರ್ಣಗೊಳಿಸುತ್ತಾಳೆ.

ಹುಡುಗಿಗೆ ತಾನು ಕೌಟುಂಬಿಕ ಸ್ಥಾನಮಾನ ಹೊಂದಿದ್ದೇನೆ. ನಾನು ಸುರಕ್ಷಿತ ಎಂಬ ಸಂತೋಷ ಬರುತ್ತದೆ. ಆದರೆ ಆ ಹೆಣ್ಣಿಗೆ ಸಮಾಜದಲ್ಲಿ ಸಾಮಾಜಿಕ ಸ್ಥಾನಮಾನ ಕಡಿಮೆಯಾಗುತ್ತದೆ. ಅಲ್ಲದೆ ಈ ದಂಪತಿಗಳಿಗೆ ಜನಿಸುವ ಮಕ್ಕಳು ಎರಡನೇ ಸಂಬಂಧದಿಂದ ಹುಟ್ಟಿದವರು ಎಂಬ ಕೀಳರಿಮೆಗೆ ಗುರಿಯಾಗುತ್ತಾರೆ. ಏನೇ ಇರಲಿ ಮರುಮದುವೆಗೆ ಅವಕಾಶವಿರುವುದು ಸಾಮಾಜಿಕವಾಗಿ ಉತ್ತಮ ಬೆಳವಣಿಗೆಯೆನಿಸುತ್ತದೆ.

**ಇ. ಪ್ರದರ್ಶನ ಕಲೆಗಳು**

ಪ್ರತಿಯೊಬ್ಬ ಮನುಷ್ಯನು ಬೆಳಗಿನಿಂದ ಸಂಜೆಯವರೆಗೆ ಅಥವಾ ವಾರಪೂರ್ತಿ ನಿರಂತರವಾಗಿ ದುಡಿಯುತ್ತಾನೆ. ಇವನಿಗೆ ಬಿಡುವು ಬೇಕಾಗುವುದರ ಜೊತೆಗೆ ತನ್ನ ಏಕತಾನತೆಯನ್ನು ದೂರಮಾಡಿಕೊಳ್ಳುವುದಕ್ಕೆ ಕೆಲವೊಂದು ಹಾಡು, ಕುಣಿತಗಳನ್ನು ಅಳವಡಿಸಿಕೊಳ್ಳುತ್ತಾನೆ. ಇಂದು ಬೆರಳ ತುದಿಯಲ್ಲಿಯೇ ತಾನು ಕುಳಿತಲ್ಲಿಂದಲೇ ಯಾವ ರೀತಿಯ ಮನೋರಂಜನೆಯನ್ನೂ ಪಡೆಯಲು ಸಾಧ್ಯವಾಗುತ್ತಿದೆ. ಆದರೆ ಹಿಂದೆ ಇಂಥ ಪರಿಸ್ಥಿತಿಯಿರಲಿಲ್ಲ. ಒಂದು ಊರಿನ, ಹಾಡಿಯ ಜನರೆಲ್ಲ ಒಂದು ಕಡೆ ಸೇರಿ ಸಾಮೂಹಿಕವಾಗಿ ಕುಣಿತ, ಕೋಲಾಟ, ನೃತ್ಯ ಮೊದಲಾದ ಕಲೆಗಳ ಮೂಲಕ ನೆರೆದವರಿಗೆ ಮನರಂಜನೆ ಒದಗಿಸುವುದರೊಂದಿಗೆ ತಾವೂ ಆನಂದ ಪಡುತ್ತಿದ್ದರು. ಇಂತಹ ಕಲೆಗಳಲ್ಲಿ ಎರವರ ಕುಣಿತವೂ ಒಂದಾಗಿದೆ.

**ಎರವರ ಕುಣಿತ:** ಬುಡಕಟ್ಟು ಸಮುದಾಯದ ಅನೇಕ ಕಲೆಗಳಲ್ಲಿ ಇಂತಿಷ್ಟೇ ಜನರಿರಬೇಕೆಂಬ ನಿಯಮವಾಗಲಿ, ವಯಸ್ಸಿನ ಮಾನದಂಡವಾಗಲಿ ಇರುವುದಿಲ್ಲ. ಇದನ್ನು ತಮ್ಮ ಹಾಡಿಗಳ ಮುಂದೆಯೇ ಪ್ರದರ್ಶಿಸುತ್ತಾರೆ. ಎರವರ ಈ ನೃತ್ಯಕ್ಕೆ ಇವರೇ ತಯಾರಿಸಿಕೊಂಡ ವಿಶೇಷವೆನಿಸ ಬಹುದಾದ ದುಡಿ ಮತ್ತು ಚೀನಿ ವಾದ್ಯಗಳನ್ನು ಬಳಸಲಾಗುತ್ತದೆ. ವೃತ್ತಾಕಾರವಾಗಿ ನಿಂತುಕೊಂಡು ಮಹಿಳೆಯರು, ಪುರುಷರು, ಮಕ್ಕಳಾದಿಯಾಗಿ ಸಾಮೂಹಿಕವಾಗಿ ದುಡಿ ಮತ್ತು ಚೀನಿ ವಾದ್ಯದ ಲಯಬದ್ಧ ತಾಳಕ್ಕೆ ಸೂಕ್ತವಾಗಿ ಮುಂದಕ್ಕೆ ಬಾಗಿ ಬಾಗಿ ಜೋಲಿ ಹೊಡೆಯುತ್ತಾ ಕುಣಿಯುತ್ತಾರೆ. ಈ ಕುಣಿತದೊಂದಿಗೆ ಕೊಡವರ ನೃತ್ಯಗಳನ್ನು ಹೋಲುವ 'ಯರವಾಟ್' ಎಂಬ ಎರವ

ಗಂಡಸರು ಮಾತ್ರ ಭಾಗವಹಿಸುವ ನೃತ್ಯವನ್ನು ಇವರು ಪ್ರದರ್ಶಿಸುತ್ತಾರೆ. ಇದರಲ್ಲಿ 'ಪಾಂಬಾಟ್' ಎಂಬ ನೃತ್ಯ ಪ್ರಕಾರವೊಂದಿದ್ದು ಮದುವೆ, ಹಬ್ಬ ಮುಂತಾದ ಸಂದರ್ಭಗಳಲ್ಲಿ ಪ್ರದರ್ಶಿಸುತ್ತಾರೆ.

ಎರವರ ಈ ಕುಣಿತದಲ್ಲಿ ಬಳಸುವ ದುಡಿ ಮತ್ತು ಚೀನಿ ವಾದ್ಯದ ವಿಶೇಷತೆಯನ್ನು ಗಮನಿಸಬೇಕು. "'ದುಡಿ' ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡದ ಅನೇಕ ಗಿರಿಜನರು ಬಳಸುವ ಒಂದು ಜನಪ್ರಿಯ ಚರ್ಮವಾದ್ಯ. ಆದರೆ ಚೀನಿ ವಾದ್ಯ ಎರವರೇ ಸ್ವತಃ ಮರದಿಂದ ತಯಾರು ಮಾಡಿಕೊಳ್ಳುವ ವಿಶೇಷ ವಾದನವಾಗಿದೆ. 'ಚೀನಿ' ತುತ್ತೂರಿಯಂತಹ ಉದ್ದನೆಯ ಊದುವಾದ್ಯವಾಗಿದ್ದು ಒಂದೂವರೆ ಅಡಿಗಳಷ್ಟು ಉದ್ದವಿರುತ್ತದೆ. 'ದುಡಿ' ಚರ್ಮವಾದ್ಯ. ದುಡಿ ಬಾರಿಸುತ್ತ ಹಾಡುವ ಕಾವ್ಯವನ್ನು ಕೆಲವರು ಪಟ್ಟೋರ್' ಎಂದೂ ಕೆಲವರು 'ಬಾಯನ'ವೆಂದೂ ಕರೆಯುತ್ತಾರೆ.[೬೦]

## ಕೊನೆ ಟಿಪ್ಪಣಿಗಳು

೧. **ಗೌಡ ಸಂಸ್ಕೃತಿ**, ೧೯೮೫, ಕೊಡಗು ವಿದ್ಯಾ ಸಂಘ, ಮಡಿಕೇರಿ. ಪುಟ-೧

೨. **ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ ಸಂಸ್ಕೃತಿಗಳು**, ೧೯೭೦, ಕೃಷ್ಣಯ್ಯ ಡಿ. ಎನ್., ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ, ಬೆಂಗಳೂರು ಪುಟ-೨೪

೩. **ಜಗತ್ತಿಗೊಂದೇ ಕೊಡಗು**, ೧೯೬೯, ಮುತ್ತಣ್ಣ ಕೆ. ಪಿ., ಪ್ರೀಮಿಯರ್ ಪ್ರೆಸ್, ಬೆಂಗಳೂರು ಪುಟ-೨೧೦

೩ಎ. **ಕೊಡಗಿನ ಗೌಡಕನ್ನಡ ಭಾಷಿಕ ನೆಲೆಗಳು**, ೨೦೧೬, ಲಾವಣ್ಯ ಸಿ. ಪಿ., ಪಿಎಚ್. ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೧೧

೪. **ಜಾತ್ರೆ ಮತ್ತಿತರ ಸಂಶೋಧನಾತ್ಮಕ ಪ್ರಬಂಧಗಳು**, ೧೯೯೦, ಸಮಾಜಶಾಸ್ತ್ರ ಸಂಘ, ನೆಹರು ಸ್ಮಾರಕ ಕಾಲೇಜು, ಸುಳ್ಯ, ಪುಟ-೮೪

೫. **ಕೊಡಗು ಗೌಡ ಸಮುದಾಯ-ಸಾಂಸ್ಕೃತಿಕ ಅನನ್ಯತೆಗಳು ಮತ್ತು ಚಲನಶೀಲತೆ**, ೨೦೧೦, ಕೋರನ ಸರಸ್ವತಿ ಪ್ರಕಾಶ್, ಮುದ್ದುಶ್ರೀ ಗ್ರಂಥಮಾಲೆ, ಬೆಂಗಳೂರು, ಪುಟ-೨೧

೬. ಅದೇ; ಪುಟ-೨೯

೭. ಅದೇ; ಪುಟ-೭೯

೮. ಅದೇ; ಪುಟ-೪೨

೯. **ಕೊಡವರು ಮತ್ತು ಕೊಡಗಿನ ಅರೆಭಾಷೆಗೌಡರ ಸಂಸ್ಕೃತಿ- ತೌಲನಿಕ ಅಧ್ಯಯನ**, ೨೦೧೪, ಎ. ಸಿ. ಶೈಲಜ, ಪಿಎಚ್. ಡಿ. ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾಲಯ, ಪುಟ-೧೮೩

೧೦. **ತುಳುನಾಡಿನ ಆಚರಣೆಗಳು**, ೨೦೧೩, ದಿವಾಕರ ಕೆ., ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಪುಟ-೧೭೦

೧೧. ಅದೇ; ಪುಟ-೧೭೩

೧೨. **ಕೊಡಗು ಗೌಡ ಸಮುದಾಯ-ಸಾಂಸ್ಕೃತಿಕ ಅನನ್ಯತೆಗಳು ಮತ್ತು ಚಲನಶೀಲತೆ**, ೨೦೧೦, ಕೋರನ ಸರಸ್ವತಿ ಪ್ರಕಾಶ್, ಮುದ್ದುಶ್ರೀ ಗ್ರಂಥಮಾಲೆ, ಬೆಂಗಳೂರು, ಪುಟ-೧೪೮

೧೩. ಅದೇ; ಪುಟ-೧೪೬

೧೪. **ಎರವರ ಸಂಸ್ಕೃತಿ**, ೧೯೯೩, ಹರೀಶ್ ಪಿ. ಎನ್., ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪುಟ-೩

೧೫. **ಪಳಮೆ**, ೨೦೦೪, ತಂಬಂಡ ವಿಜಯ್ ಪೂಣಚ್ಚ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೪೬

೧೬. **ಆಧುನಿಕ ಕೊಡಗು**, ೨೦೧೪, ತಂಬಂಡ ವಿಜಯ್ ಪೂಣಚ್ಚ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ-೪೭

೧೭. **ಕೆಂಬಟ್ಟೆ ಹೊಲೆಯರ ಸಂಸ್ಕೃತಿ**, ೧೯೯೩, ನಾಗರಾಜ್ ಎಂ. ಜಿ., ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪುಟ-೪

೧೮. **ಅದೇ;** ಪುಟ-೫೦

೧೯. **ಆಧುನಿಕ ಕೊಡಗು**, ೨೦೧೪, ತಂಬಂಡ ವಿಜಯ್ ಪೂಣಚ್ಚ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ-೪೪

೨೦. **ಕೊಡಗು-ಚರಿತ್ರೆಯ ಮೇಲೆ ಹೊಸ ಬೆಳಕು**, ೨೦೧೬, ಭೀಮಂಡ ಈ ಕುಶಾಲಪ್ಪ, ಪ್ರಿಂಟ್ ಅವೆನ್ಯೂ, ಮೈಸೂರು, ಪುಟ-೨೪೫

೨೧. **ಕೆಂಬಟ್ಟೆ ಹೊಲೆಯರ ಸಂಸ್ಕೃತಿ**, ೧೯೯೩, ನಾಗರಾಜ್ ಎಂ. ಜಿ., ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪುಟ-೫೯-೬೩

೨೨. **ಅದೇ;** ಪುಟ-೯೪

೨೩. **ಅದೇ;** ಪುಟ-೧೩೬

೨೪. **ಅದೇ;** ಪುಟ-೧೭೦

೨೫. **ಅದೇ;** ಪುಟ-೧೮೧

೨೬. **ಅದೇ;** ಪುಟ-೧೭೮

೨೭. **ಪಳಮೆ**, ೨೦೦೪, ತಂಬಂಡ ವಿಜಯ್ ಪೂಣಚ್ಚ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೪೬

೨೮. **ಕೆಂಬಟ್ಟೆ ಹೊಲೆಯರ ಸಂಸ್ಕೃತಿ**, ೧೯೯೩, ನಾಗರಾಜ್ ಎಂ. ಜಿ., ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪುಟ-೨೮೯

೨೯. **ಅದೇ;** ಪುಟ-೩೬೯

೩೦. **ಎರವರ ಸಂಸ್ಕೃತಿ**, ೧೯೯೩, ಹರೀಶ್ ಪಿ. ಎನ್., ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪುಟ-೩

೩೧. ಅದೇ; ಪುಟ-೪

೩೨. **ಕರ್ನಾಟಕ ಬುಡಕಟ್ಟುಗಳು, ಸಂಪುಟ-೧**, ೧೯೯೮, ಸಂ. ಲಕ್ಕಪ್ಪಗೌಡ ಎಚ್. ಜೆ., ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ಪುಟ-೭೦೯

೩೩. **ಕರ್ನಾಟಕ ರಾಜ್ಯ ಗೆಜೆಟಿಯರ್-ಕೊಡಗು ಜಿಲ್ಲೆ**, ೧೯೯೨, ಸಂ. ಸೂರ್ಯನಾಥ ಯು ಕಾಮತ್, ಲಿಪಿ ಮುದ್ರಣ, ಬೆಂಗಳೂರು, ಪುಟ-೧೭೭

೩೪. **ಕರ್ನಾಟಕ ಬುಡಕಟ್ಟುಗಳು, ಸಂಪುಟ-೧**, ೧೯೯೮, ಸಂ. ಲಕ್ಕಪ್ಪಗೌಡ ಎಚ್. ಜೆ., ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ಪುಟ-೭೧೦

೩೫. **ಅದೇ;**

೩೬. **ಕೊಡಗು ಜನಪದ ಸಂಸ್ಕೃತಿ**, ೨೦೧೧, ಸಂ. ನಲ್ಲೂರು ಪ್ರಸಾದ್ ಆರ್., ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಕೊಡಗು, ಪುಟ-೮೫

೩೭. **ಬೈತಾರೆ ಬೈತಾರೆ,** ವಿಜಯ ಕರ್ನಾಟಕ, (ಮಡಿಕೇರಿ ಆವೃತ್ತಿ) ಎಚ್. ಟಿ. ಅನಿಲ್, ೨೩-೦೩-೨೦೦೪, ಪುಟ-೧

೩೮. **ಅದೇ;**

೩೯. ಆರ್ಕಿಟೆಕ್ಚರ್, ಪ್ರವಾಸ ಛಾಯಾಗ್ರಹಣಗಳಲ್ಲಿ ವಿಶೇಷ ಆಸಕ್ತಿ ಹೊಂದಿರುವ ಇವರ ಚಿತ್ರಗಳು ಇಂಗ್ಲೆಂಡಿನ ಟ್ಯಾಟರ್, ಇಟಲಿಯ ಅಬಿತಾರೆ, ದ ಹಾರ್ವರ್ಡ್ ಡಿಸೈನ್ ಮ್ಯಾಗಜಿನ್, ಭಾರತದ ಔಟ್‌ಲುಕ್, ಟ್ರಾವಲರ್, ನಮಸ್ತೆ, ಹೌಸ್‌ಕಾಲ್ಸ್ ಸೇರಿದಂತೆ ರಾಷ್ಟ್ರೀಯ, ಅಂತರಾಷ್ಟ್ರೀಯ ಪತ್ರಿಕೆಗಳಲ್ಲಿ ಪ್ರಕಟವಾಗಿವೆ.

೪೦. **ಕುಂಡೆ ಹಬ್ಬದ ಅಚ್ಚರಿಯ ಮುಖಗಳು,** ಪ್ರಜಾವಾಣಿಯ ಮುಕ್ತಚಂದ ಸಂಚಿಕೆಯಲ್ಲಿ ಪ್ರಕಟವಾದ ಲೇಖನ, ಕ್ಲಾರೆ ಆರ್ನಿ, ದಿನಾಂಕ ೨೫-೦೯-೨೦೧೬, ಪುಟ-೪

೪೧. **ಬೈತಾರೆ ಬೈತಾರೆ,** ವಿಜಯ ಕರ್ನಾಟಕ, (ಮಡಿಕೇರಿ ಆವೃತ್ತಿ) ಎಚ್. ಟಿ. ಅನಿಲ್, ೨೩-೦೩-೨೦೦೪, ಪುಟ-೧

೪೨. **ಕರಾವಳಿ ಜಾನಪದ,** ೧೯೯೦, ಪುರುಷೋತ್ತಮ ಬಿಳಿಮಲೆ, ಶಾರದಾ ಪ್ರೆಸ್, ಮಂಗಳೂರು, ಪುಟ- ೨೭

೪೩. **ಅದೇ;**

೪೪. ಆಧಾರ: ಪ್ರಜಾ ಟಿ. ವಿ. ಯಲ್ಲಿ ಪ್ರಸಾರವಾದ ವರದಿ, ದಿನಾಂಕ ೧೮-೪-೨೦೧೬

೪೫. **ಕುಂಡೆ ಹಬ್ಬದಲ್ಲಿ ಮದ್ಯ ನಿಷೇದಕ್ಕೆ ಒತ್ತಾಯ,** ಪ್ರಜಾವಾಣಿ ವರದಿ, ದಿನಾಂಕ: ೧೧-೦೫-೨೦೧೬, ಪುಟ-೪

೪೬. **ಕರ್ನಾಟಕ ಬುಡಕಟ್ಟುಗಳು,** ೧೯೯೮, ಸಂಪುಟ-೧, ಸಂ. ಲಕ್ಕಪ್ಪಗೌಡ ಎಚ್. ಜೆ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ಪುಟ-೭೧೯

೪೭. **ಅರುಹು ಕುರುಹು,** ಅಕ್ಟೋಬರ್-ಡಿಸೆಂಬರ್-೨೦೧೬, ಸಂ. ಉಮೇಶ್ ಎಚ್. ಎಸ್., ಸಂಪುಟ-೮, ಸಂಚಿಕೆ-೩೧, ಪುಟ-೯೪

೪೮. **ಕೊಡಗು,** ೧೯೯೮, ರಾಮಚಂದ್ರಾಚಾರ್ ಡಿ. ಬಿ., ಸುನಂದ ಪ್ರಕಾಶನ, ವಿರಾಜಪೇಟೆ, ಪುಟ-೧೪೬

೪೯. **ಎರವರ ಸಂಸ್ಕೃತಿ,** ೧೯೯೩, ಹರೀಶ್ ಪಿ. ಎನ್., ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪುಟ-೩೬

೫೦. **ಕರ್ನಾಟಕ ಬುಡಕಟ್ಟುಗಳು, ಸಂಪುಟ-೧,** ೧೯೯೮, ಸಂ. ಲಕ್ಕಪ್ಪಗೌಡ ಎಚ್. ಜೆ., ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ಪುಟ-೬೨೬

೫೧. **ಎರವರ ಸಂಸ್ಕೃತಿ,** ೧೯೯೩, ಹರೀಶ್ ಪಿ. ಎನ್., ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪುಟ-೩೧೯

೫೨. **ಕೊಡಗಿನ ಇತಿಹಾಸ,** ೧೯೭೪, ಕೃಷ್ಣಯ್ಯ ಡಿ. ಎನ್., ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪುಟ-೬೧೦

೫೩. **ಎರವರ ಸಂಸ್ಕೃತಿ**, ೧೯೯೩, ಹರೀಶ್ ಪಿ. ಎನ್., ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪುಟ-೬೨

೫೪. **ಅದೇ**; ಪುಟ-೧೯೩

೫೫. **ಅದೇ**; ಪುಟ-೧೯೬

೫೬. **ಅದೇ**; ಪುಟ-೧೯೮

೫೭. **ಅದೇ**; ಪುಟ-೨೦೨

೫೮. **ಅದೇ**; ಪುಟ-೧೭೦

೫೯. **ಅದೇ**; ಪುಟ-೧೭೨

೬೦. **ಕರ್ನಾಟಕ ಜನಪದ ಕಲೆಗಳ ಕೋಶ**, ೧೯೯೬, ಬೋರಲಿಂಗಯ್ಯ ಹಿ. ಚಿ., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೨೦೦

# ಅಧ್ಯಾಯ – ಆರು

# ಕೊಡಗರ ಸಮಕಾಲೀನ ಸ್ಥಿತ್ಯಂತರಗಳು

೬.೧. ಪ್ರಾಕೃತಿಕ

೬.೨. ಶೈಕ್ಷಣಿಕ ಮತ್ತು ಮಾಧ್ಯಮ ಕ್ಷೇತ್ರ

೬.೩. ಸಾಮಾಜಿಕ ಮತ್ತು ಸಾಂಸ್ಕೃತಿಕ

೬.೪. ಕೃಷಿ ಕ್ಷೇತ್ರ

# ಅಧ್ಯಾಯ – ಆರು

# ಕೊಡಗರ ಸಮಕಾಲೀನ ಸ್ಥಿತ್ಯಂತರಗಳು

ಪ್ರಪಂಚದಲ್ಲಿ ಎಲ್ಲದ್ದಕ್ಕೂ ಒಂದಲ್ಲೊಂದು ರೀತಿಯ ಪರಿವರ್ತನಾಶೀಲ ಗುಣಗಳಿರುತ್ತವೆ. ಸಮಾಜ ಬದಲಾದಂತೆ ಸಾಂಸ್ಕೃತಿಕ ಸನ್ನಿವೇಶಗಳೂ ಕೆಲವು ನಿಯಮ ಮತ್ತು ಒತ್ತಡಗಳಿಗೊಳಪಟ್ಟು ಕಾಲಕ್ಕನುಗುಣವಾಗಿ ಬದಲಾಗುತ್ತಲೇ ಇವೆ. ಆದಿಮಾನವನಿಂದ ಹಿಡಿದು ಇಂದಿನವರೆಗೂ ಅವಲೋಕನ ಮಾಡಿ ನೋಡಿದರೆ ಆಗಿರುವ ಮತ್ತು ಆಗುತ್ತಿರುವ ದಟ್ಟ ಬದಲಾವಣೆಗಳು ಗೋಚರವಾಗುತ್ತವೆ. ಮನುಷ್ಯನ ನಂಬಿಕೆ, ಆಚರಣೆ, ಆರಾಧನೆ, ಕಲೆ, ಆಹಾರ, ಉಡುಗೆ–ತೊಡುಗೆ, ಮನೆಗಳ ನಿರ್ಮಾಣ ಮತ್ತು ಜೀವನಾವಶ್ಯಕಗಳು ಮೊದಲಾದವುಗಳಲ್ಲಿ ನಿರಂತರವಾದ ಸ್ಥಿಂತ್ಯರಗಳುಂಟಾಗುತ್ತಾ ಬಂದಿರುವುದು ಎದ್ದು ಕಾಣುತ್ತದೆ. ಮಾನವ ಸಮಾಜ ಜೀವಿ ಅಂತೆಯೇ ಬುದ್ಧಿವಂತ ಜೀವಿಯೂ ಹೌದು. ಹೀಗಿರುವಾಗ ಬದಲಾವಣೆಗೊಳಪಡದೇ ಇರುತ್ತಾನೆಯೇ?. ಅವನು ಇಂದು ವಿಜ್ಞಾನದ ಆವಿಷ್ಕಾರಗಳಿಗೆ ಒಲಿದು ತನ್ನ ಮೊದಲಿನ ಸ್ಥಿತಿಗಿಂತ ಭಿನ್ನವಾದ ದಾರಿಯಲ್ಲಿ ನಡೆಯುತ್ತಿದ್ದಾನೆ.

ಜಾಗತೀಕರಣ, ಆಧುನೀಕರಣ, ಔದ್ಯೋಗೀಕರಣ, ನಗರೀಕರಣ ಮೊದಲಾದ ಜಾಗತಿಕ ವಿದ್ಯಮಾನಗಳು ಈ ದೇಶದಲ್ಲಿ ಕಾಣಿಸಿಕೊಳ್ಳದಿದ್ದ ಕಾಲದಿಂದಲೂ ಪಲ್ಲಟಗಳು ನಿರಂತರವಾಗಿ ನಡೆದಿರುವುದು ಅಧ್ಯಯನಗಳ ಮೂಲಕ ತಿಳಿಯುತ್ತದೆ. ಗ್ರಾಮ ಸಮಾಜವೆಂಬ ಪರಿಕಲ್ಪನೆಯೇ ನಮ್ಮಿಂದ ದೂರವಾಗಿ 'ನಗರೀಕರಣ'ಗೊಂಡು ತೀವ್ರವಾಗಿ ಪರಿವರ್ತನೆಯಾಗಿರುವುದನ್ನು ಅರಿಯಬಹುದು. 'ನಗರೀಕರಣದ ಪ್ರಭಾವ ಸಮಾಜದಲ್ಲಿ ಯಥೇಚ್ಚವಾಗಿ ಕಂಡುಬರುತ್ತಿದೆ. ಕುಟುಂಬ ವ್ಯವಸ್ಥೆಯಲ್ಲಿ ಏರುಪೇರುಗಳುಂಟಾಗಿವೆ. ಸಂಬಂಧಗಳು ಹಳಸಿವೆ. ಮೊದಲಿದ್ದ ಅವಿಭಕ್ತ ಕುಟುಂಬ ಪದ್ಧತಿ ಅವನತಿಯ ಹಾದಿ ಹಿಡಿದಿದೆ. ಕೂಡುಕುಟುಂಬಗಳಲ್ಲಿ ಸಂಬಂಧಗಳು ಬಿರುಕು ಬಿಟ್ಟಿವೆ. ಒಡಹುಟ್ಟಿದ ಅಣ್ಣ ತಮ್ಮಂದಿರೆಲ್ಲಾ ದಾಯಾದಿ ಕಲಹಕ್ಕೆ ಮುಂದಾಗಿದ್ದಾರೆ'[1] ಎಂಬ ಮಾತುಗಳು ಸಮಾಜವು ತೀವ್ರತರವಾಗಿ ಬದಲಾವಣೆಗೆ ತುತ್ತಾಗಿ ಅಸಹನೀಯ ಸ್ಥಿತಿಗೆ ತಲುಪಿರುವುದನ್ನು ತೆರೆದಿಡುತ್ತವೆ.

ಆಧುನಿಕತೆಯ ಹೆಸರಿನಲ್ಲಿ ಮನುಷ್ಯನ ಬದುಕು ಸಂಪೂರ್ಣವಾಗಿ ಪಲ್ಲಟಗೊಂಡಿರುವುದನ್ನು ಕಂಡಾಗ ಅಚ್ಚರಿಯೆನಿಸುತ್ತದೆ. ತಂತ್ರಜ್ಞಾನದ ಫಲವಾಗಿ ರೂಪುಗೊಳ್ಳುತ್ತಿರುವ ಇಂದಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಸನ್ನಿವೇಶಗಳನ್ನು ಸಮಕಾಲೀನ ಸ್ಥಿತಿಯೊಂದಿಗೆ ಮುಖಾಮುಖಿಯಾಗಿಸುವ ಕಾರ್ಯ ತುರ್ತಾಗಿ ನಡೆಯಬೇಕಿದೆ. ಮಹಿಳೆಯರು, ಹಿಂದುಳಿದವರು, ಕೂಲಿಕಾರ್ಮಿಕರು, ಕಾಡುಮೇಡುಗಳಲ್ಲಿ ವಾಸಿಸುವವರು, ಬುಡಕಟ್ಟು

ಜನಾಂಗಗಳು ಮುಂತಾದವರ ಸಾಮಾಜಿಕ ಬದುಕು, ಶಿಕ್ಷಣ, ಕಟ್ಟುಪಾಡುಗಳಲ್ಲಿ ಸುಧಾರಣೆ ಕಾಣುತ್ತಿದೆ.

ಇವುಗಳಿಗೆಲ್ಲ ಜಾಗತೀಕರಣವೇ ಮೂಲವೆಂದು ಹೇಳುವುದು ಇಂದು ರೂಢಿಯಾಗಿ ಬಿಟ್ಟಿದೆ. ಹಾಗೆ ನೋಡಿದರೆ ಜಾಗತೀಕರಣದ ಹೆಸರೇ ಕೇಳದಿದ್ದ ಕಾಲದಿಂದಲೂ ನಿತ್ಯ ಪರಿವರ್ತನೆಗಳು ನಡೆದಿರುವುದು ಪರಂಪರೆಯನ್ನು ಗಮನಿಸಿದರೆ ತಿಳಿಯುತ್ತದೆ. ಏಕೆಂದರೆ ಪ್ರಾಚೀನ ಕಾಲದಲ್ಲಿ ಹೊರಗಿನ ಶಕ್ತಿಗಳ ಆಕ್ರಮಣ ಮತ್ತು ದಾಳಿಗಳ ಕಾರಣದಿಂದ ಬದುಕು, ಭಾಷೆ ಎಲ್ಲವನ್ನೂ ಒಲ್ಲದ ಮನಸ್ಸಿನಿಂದ ಒಪ್ಪಿಕೊಂಡು ಅನುಸರಿಸಬೇಕಾದ ಅನಿವಾರ್ಯತೆಯಿತ್ತು. ಈ ದೇಶದ ಮೇಲೆ ಫ್ರೆಂಚರು, ಡಚ್ಚರು, ಮುಸ್ಲಿಮರು ಇನ್ನೂ ಮೊದಲಾದವರಿಂದ ಆಗಾಗ ದಾಳಿಗಳು ನಡೆದಿವೆ. ಇವುಗಳೂ ಒಂದು ರೀತಿಯಲ್ಲಿ ಸಾಂಸ್ಕೃತಿಕ ಪಲ್ಲಟಗಳಿಗೆ ಕಾರಣವಾಗಿರುವುದು ಸ್ಪಷ್ಟವಾಗುತ್ತದೆ.

'ಗ್ರಾಮ ಸಮಾಜ'ವೆಂಬ ಪರಿಕಲ್ಪನೆ ಇಂದು ಮರೆಯಾಗಿ 'ನಗರೀಕರಣ' ಆವರಿಸಿರುವ ಹೊತ್ತಿನಲ್ಲಿ ನಾವಿದ್ದೇವೆ. ಸೈಕಲ್, ರಿಕ್ಷಾ, ಕಾರು, ಬಸ್ಸುಗಳ ಸಂಚಾರವನ್ನೇ ಕಂಡರಿಯದ ಎಷ್ಟೋ ಹಳ್ಳಿಗಳು ಇಂದು ನಗರೀಕರಣ ಮತ್ತು ಆಧುನೀಕರಣದ ಹೆಸರಿನಲ್ಲಿ ಇದೆಲ್ಲವನ್ನು ದಕ್ಕಿಸಿಕೊಳ್ಳುವಂತಾಗಿದೆ. ವೇಗದ ಇಂಟರ್ನೆಟ್ ಸೌಲಭ್ಯ ಪ್ರತಿ ಗ್ರಾಮಗಳನ್ನು ವ್ಯಾಪಿಸಿದೆ. ಪ್ರತಿಯೊಂದಕ್ಕೂ ತಂತ್ರಜ್ಞಾನದ ಮೊರೆಹೋಗಬೇಕಾದ ಅನಿವಾರ್ಯ ಸಂದರ್ಭವನ್ನು ಎದುರಿಸುವಂತಾಗಿದೆ.

ಈ ಎಲ್ಲಾ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಕೊಡಗಿನಲ್ಲಿ ಆಗಿರಬಹುದಾದ ಸಾಂಸ್ಕೃತಿಕ ಬದಲಾವಣೆಗಳನ್ನು ಕಂಡುಕೊಳ್ಳುವುದು ಈ ಅಧ್ಯಾಯದ ಉದ್ದೇಶವಾಗಿದೆ. ಕ್ಷೇತ್ರ ಕಾರ್ಯ, ವಕ್ತೃಗಳನ್ನು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಭೇಟಿ ಮತ್ತು ಸಂದರ್ಶನ ಮಾಡುವುದರ ಜೊತೆಗೆ ಸ್ವತ: ಕೊಡಗಿನಲ್ಲಿ ಸುತ್ತಾಡುವುದರ ಮೂಲಕ ಕೊಡಗಿನಲ್ಲಿ ನಿರಂತರವಾಗಿ ಆಗುತ್ತಿರುವ ಬದಲಾವಣೆಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಅಲ್ಲದೆ ಪ್ರಸ್ತುತ ಕೊಡಗಿನಲ್ಲಿ ಉಂಟಾಗುತ್ತಿರುವ ಸಾಂಸ್ಕೃತಿಕ ಪಲ್ಲಟಗಳ ವಿವರ ಅನೇಕ ದಿನ ಪತ್ರಿಕೆಗಳು, ಮಾಸಿಕ, ಹಾಗೂ ವಾರಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವುದನ್ನು ಅವಲೋಕಿಸಲಾಗಿದೆ. ಒಟ್ಟಾರೆಯಾಗಿ ಕೊಡಗಿನಲ್ಲಿ ಪ್ರಾಕೃತಿಕವಾಗಿ, ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ ಮತ್ತು ಶೈಕ್ಷಣಿಕವಾಗಿ ಹಲವಾರು ಮಹತ್ವದ ಬದಲಾವಣೆಗಳಾಗಿದ್ದರೆ ಕೆಲವು ಸಂಪೂರ್ಣವಾಗಿ ಮರೆಯಾಗಿರುವುದನ್ನು ಕಂಡುಕೊಳ್ಳಬಹುದು. ಕಾಲದ ನಿಯಮಗಳಿಗೆ ಸಿಲುಕಿ ಇಂತಹ ಪಲ್ಲಟಗಳು ನಿರಂತರವಾಗಿ ನಡೆಯುವುದು ಸಹಜವಾಗಿದೆ. ಆದರೂ ಇಲ್ಲಿನ ಜನಸಮುದಾಯ ಕೆಲವೊಂದು ಪದ್ಧತಿಗಳನ್ನು ಬಿಟ್ಟುಕೊಡದೆ ಹಾಗೇ ಮೂಲ ಸ್ಥಿತಿಯಲ್ಲಿಯೇ ಉಳಿಸಿಕೊಂಡಿರುವುನ್ನೂ ಗಮನಿಸಬಹುದು.

## ೬.೧. ಪ್ರಾಕೃತಿಕ

ಕೊಡಗು ಪ್ರಾಕೃತಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಕಾಲ ಕಳೆದಂತೆ ವರ್ತಮಾನದ ಕಾಲಘಟ್ಟದಲ್ಲಿ ಹಲವಾರು ಪರಿವರ್ತನೆಗಳಿಗೆ ಒಳಗಾಗಿರುವುದು ಕೊಡಗಿನ ಒಡನಾಟ ಮತ್ತು ಓಡಾಟಗಳಿಂದ ಸ್ಪಷ್ಟವಾಗುತ್ತದೆ. ಪ್ರಕೃತಿಯ ರಮಣೀಯತೆಗೆ ಹೆಸರುವಾಸಿಯಾದದ್ದು ಕೊಡಗು. ಹವಾಮಾನದ ವೈಶಿಷ್ಟ್ಯತೆಯಿಂದ ಇದನ್ನು ದಕ್ಷಿಣದ ಕಾಶ್ಮೀರ, ಭಾರತದ ಸ್ಕಾಟ್‌ಲೆಂಡ್ ಎಂದೆಲ್ಲಾ ಕರೆಯಲಾಗಿದೆ. ಕಾಫಿ, ಕಿತ್ತಳೆ, ಏಲಕ್ಕಿ ಮೊದಲಾದ ಬೆಳೆಗಳಿಂದಾಗಿಯೂ ಕೊಡಗಿನ ಸೌಂದರ್ಯ ವೃದ್ಧಿಸಿದೆ. ವರ್ಷಪೂರ್ತಿ ಸುರಿಯುತ್ತಿದ್ದ ಧಾರಾಕಾರ ಮಳೆಯಿಂದ ಇಡೀ ಜಿಲ್ಲೆಯ ನದಿ, ತೊರೆಗಳು ತುಂಬಿ ಹರಿಯುತ್ತಿದ್ದವು. ಇದರಿಂದಾಗಿ ಕೊಡಗಿನಾದ್ಯಂತ ಅನೇಕ ಜಲಪಾತಗಳು ನಿರ್ಮಾಣಗೊಂಡವು. ಇದರಿಂದ ಹಾರಂಗಿ ಅಣೆಕಟ್ಟೆಯೊಂದನ್ನು ನಿರ್ಮಾಣ ಮಾಡಲು ಸಾಧ್ಯವಾಯಿತು. ಮಡಿಕೇರಿಯ ಸಮೀಪವಿರುವ ಅಬ್ಬಿಫಾಲ್ಸ್ ಮತ್ತು ಶ್ರೀಮಂಗಲದ ಹತ್ತಿರವಿರುವ ಇರ್ಪು ಜಲಪಾತಗಳು ಇಂದಿಗೂ ಪ್ರಸಿದ್ಧಿಯಾಗಿದ್ದು ಜನಾಕರ್ಷಣೆ ಮಾಡುತ್ತಿವೆ. ಆದರೆ ಇತ್ತೀಚೆಗೆ ಕೊಡಗಿನಲ್ಲಿ ಮಳೆಯ ಪ್ರಮಾಣ ಇಳಿಮುಖವಾಗಿದೆ. ಇದರಿಂದಾಗಿ ಸದಾ ತುಂಬಿ ಹರಿಯುತ್ತಿದ್ದ ಅನೇಕ ಜಲಧಾರೆಗಳು ಮತ್ತು ನದಿಗಳು ನೀರಿಲ್ಲದೆ ಒಣಗುವಂತಹ ಸ್ಥಿತಿ ನಿರ್ಮಾಣವಾಗಿದೆ.

ಹಾರಂಗಿ ಅಣೆಕಟ್ಟೆ ಸೋಮವಾರಪೇಟೆ ತಾಲೂಕಿನ ಅನೇಕ ಹಳ್ಳಿಗಳ ಕೃಷಿ ಭೂಮಿಗೆ ವರದಾಯಕವಾಗಿತ್ತು. ಇದರಿಂದ ಅನೇಕ ರೈತರು ವರ್ಷಕ್ಕೆ ಎರಡು ಮೂರು ಬೆಳೆಯನ್ನು ಬೆಳೆಯುತ್ತಿದ್ದರು. ಆದರೆ ಕಾಲ ಇಂದು ಬದಲಾಗಿದೆ. ಕಾಲಕ್ಕೆ ಸರಿಯಾಗಿ ಮಳೆಯಾಗದೇ ಇರುವುದು, ಕೆಲವೊಮ್ಮೆ ಮಳೆಯ ಪ್ರಮಾಣ ಇಳಿಮುಖವಾಗಿ ಕುಡಿಯುವ ನೀರಿಗೂ ಪರಿತಪಿಸುವಂತಹ ಸಂದರ್ಭಗಳು ಬಂದೊದಗಿರುವುದು ಈ ಭಾಗದ ಕೃಷಿಗೆ ದೊಡ್ಡ ಹೊಡೆತ ಉಂಟಾಗಲು ಕಾರಣವಾಗಿದೆ.

'ಎಲ್ಲಿ ಭೂರಮೆ ದೇವ ಸನ್ನಿಧಿ ಬಯಸಿ ಬಿಮ್ಮನೇ ಬಂದಳೋ', 'ಭೂಮಿನ್ ತಬ್ಬಿದ್ ಮೋಡ್ ಇದ್ದಂಗೆ, ಬೆಳ್ಳಿ ಬಳದಿದ್ ರೋಡ್ ಇದ್ದಂಗೆ, ಸಾಫಾಗ್ ಅಳ್ಳ ತಿಟ್ಟಿಲ್ದಂಗೆ, ಮಡಿಕೇರೀಲಿ ಮಂಜು' ಎಂಬ ಕವನದ ಸಾಲುಗಳು ಬಹಳ ಹಿಂದೆ ಕವಿಗಳು ಕೊಡಗಿನ ಪ್ರಾಕೃತಿಕ ರಮಣೀಯತೆಯನ್ನು ಹಾಡಿ ಹೊಗಳಿರುವಂತಹವುಗಳು. ಹೌದು ಕೊಡಗು ಇಲ್ಲಿ ವಾಸಿಸುವವರಿಗೆ ಮಾತ್ರವಲ್ಲ ಬಂದು ನೋಡುವವರಿಗೂ ಆಹ್ಲಾದಕಾರಿಯಾಗಿತ್ತು. ಇಂದು ಕೊಡಗು ಸಂಪೂರ್ಣವಾಗಿ ಮೂಲ ಸೌಂದರ್ಯವನ್ನು ಕಳೆದುಕೊಂಡಿದೆ ಎಂದು ಹೇಳಲು ಸಾಧ್ಯವಿಲ್ಲವಾದರೂ ಕೆಲವೊಂದು ಪ್ರಾಕೃತಿಕ ಲಕ್ಷಣಗಳು ಮರೆಯಾಗಿವೆ ಎಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ.

'ಮೂರು ದಶಕಗಳೇ ಉರುಳಿದವು ಕೊಡವತಿ
ನಿನ್ನ ತಾಣಕೆ ನಾನು ಬಂದು
ಆಗ ಹಚ್ಚ ಹಸಿರುಡುಗೆ ಉಟ್ಟಿದ್ದೆ ನೀನು
ಮೇಲೆ ಹೊದ್ದಿದ್ದೆ ಧವಳ ಬಾನಂತೆ ಮಂಜು ಮುಸುಕು
ಮಡಿಕೇರಿ ಕೇರಿಯ ತುಂಬ ಹೆಜ್ಜೆಯೂರಿದೆನವ್ವ
ಗುಡಿ ಗುಡ್ಡವೇರಿ ನೋಡಿದೆ
ಅಬ್ಬಿಜಲಪಾತದಲು ಹಣಕಿ ಹಾಕಿದೆ ಕಾಣೆ
ಅಲ್ಲೆಲ್ಲಿಯೂ ಕಾಣದಾಯಿತು
ಮುತ್ತು ಮಣಿಗಳ ಚಂದನೆಯ ಮುಸುಕು
ಎಲ್ಲಿ ಜಾರಿತು ಜಾಣೆ
ಎತ್ತ ಹಾರಿತು ಕಾಣೆ
ಮಾತಾಡೆ ನನ್ನಂತರಂಗದ ಮುದ್ದು ಗೆಳತಿ'[೨]

ಎಂಬ ಸಾಲುಗಳು ಕೊಡಗಿನ ಪ್ರಾಕೃತಿಕ ಲಕ್ಷಣಗಳು ಮೊದಲಿಗಿಂತ ಇಂದು ಬದಲಾಗಿರುವ ಭಾವವನ್ನು ಸ್ಫುರಿಸುತ್ತವೆ. ಜೊತೆಗೆ ಹಿಂದಿನ ವೈಭವ, ಮಂಜಿನ ಹನಿ, ತುಂಬಿ ಹರಿಯುವ ನದಿ, ಜಲಪಾತಗಳು ಕಾಣೆಯಾಗಿರುವ ಬಗ್ಗೆ ಆತಂಕ ವ್ಯಕ್ತವಾಗಿದೆ. ಇಂದು ಕೊಡಗಿಗೆ ಆಗಮಿಸುವ ಅನೇಕ ಪ್ರವಾಸಿಗರಿಗೆ ಸಹಜವಾಗಿ ದರ್ಶನವಾಗುವ ರೀತಿಯಿದು. ಇದರರ್ಥ ಕೊಡಗಿನ ಪ್ರವಾಸೋದ್ಯಮ ಕ್ಷೀಣಿಸಿದೆ ಎಂದಲ್ಲ.

ಜಿಲ್ಲೆಯಲ್ಲಿ ಪ್ರವಾಸೋದ್ಯಮ ಚಟುವಟಿಕೆಗಳು ಅತ್ಯಂತ ವ್ಯಾಪಕವಾಗಿ ಬೆಳವಣಿಗೆಯಾಗುತ್ತಿವೆ. ಕಾಫಿ, ಕಾಳುಮೆಣಸು ಬೆಳೆಗಳ ಧಾರಣೆ ಏರಿಳಿತದಿಂದ ಬೇಸತ್ತ ಬಹುತೇಕ ಕೃಷಿಕರು ತಮ್ಮ ತೋಟಗಳಲ್ಲಿರುವ ಮರಗಳನ್ನು ತೆರವುಗೊಳಿಸಿ ಹೋಂ ಸ್ಟೇ ನಿರ್ಮಾಣ ಮಾಡುತ್ತಿದ್ದಾರೆ. ಕೊಡಗಿನಲ್ಲಿ ಅದರಲ್ಲೂ ಮಡಿಕೇರಿ ಮತ್ತು ವಿರಾಜಪೇಟೆ ತಾಲೂಕಿನ ಬಹುಪಾಲು ಪ್ರದೇಶಗಳಲ್ಲಿ ಈಗಾಗಲೇ ನಾಲ್ಕು ಸಾವಿರ ಹೋಂ ಸ್ಟೇಗಳು ಇದ್ದು ಇವುಗಳಲ್ಲಿ ಕೇವಲ ೫೦೦ ಮಾತ್ರ ಅನುಮತಿ ಪಡೆದು ನಿರ್ಮಾಣವಾದವುಗಳಾಗಿವೆ[೩] ಎಂಬ ವಿಚಾರ ಅಚ್ಚರಿ ಮೂಡಿಸುತ್ತದೆ.

ಜಗತ್ತಿನ ಬೇರೆ ಬೇರೆ ಕಡೆಯಿಂದ ಕೊಡಗಿಗೆ ಆಗಮಿಸುತ್ತಿರುವ ಪ್ರವಾಸಿಗರಿಗೆ ಉಳಿದುಕೊಳ್ಳಲು ಈ ಹೋಂ ಸ್ಟೇಗಳು ಅನಿವಾರ್ಯವಾಗಿವೆ. ಬರುವ ಪ್ರವಾಸಿಗರೂ ಕೂಡ ತಾವು ಇಲ್ಲಿಗೆ ಬಂದು ತಮ್ಮ ಮನೆಯಲ್ಲಿಯೇ ಇರುವಂತೆ ಎಲ್ಲಾ ವ್ಯವಸ್ಥೆಗಳನ್ನು ಮಾಡಿಕೊಂಡು ವಾರಗಟ್ಟಲೇ ಇವುಗಳಲ್ಲಿ ಉಳಿದುಕೊಳ್ಳುತ್ತಾರೆ. ಇದು ಇಲ್ಲಿನ ಹೋಂ ಸ್ಟೇ ಮಾಲಕರಿಗೆ ವರದಾನವಾಗಿ ಪರಿಣಮಿಸಿದೆ.

ಈ ಕಾರಣದಿಂದಲೂ ಕೊಡಗಿನಲ್ಲಿ ವರ್ಷದಿಂದ ವರ್ಷಕ್ಕೆ ಅರಣ್ಯ ಪ್ರದೇಶ ಕುಗ್ಗುತ್ತಿದೆಯೆಂಬ ಆತಂಕ ಇಲ್ಲಿನವರಿಗೆ ಮನದಟ್ಟಾಗುತ್ತಿದೆ. ಇದಕ್ಕೆ ಇನ್ನೂ ಅನೇಕ ಕಾರಣಗಳಿವೆ.

ಜಿಲ್ಲೆಯಲ್ಲಿ ಪ್ರವಾಸೋದ್ಯಮ ಚಟುವಟಿಕೆಗಳನ್ನು ವಿಸ್ತರಿಸಲು, ಬೆಳೆಗಾರರು ತಮ್ಮ ಎಸ್ಟೇಟ್‌ಗಳಲ್ಲಿರುವ ಮರಗಳನ್ನೆಲ್ಲ ಕಡಿದು ಆ ಜಾಗದಲ್ಲಿ ಶುಂಠಿ, ಅರಿಷಿಣ ಮೊದಲಾದ ವಾಣಿಜ್ಯ ಬೆಳೆಗಳ ಮೊರೆ ಹೋಗುತ್ತಿರುವುದು, ಸಾವಿರಾರು ಮರಗಳನ್ನು ನಾಶ ಮಾಡಿ ಕೇರಳಕ್ಕೆ ವಿದ್ಯುತ್ ಮಾರ್ಗ ಎಳೆದಿರುವುದು ಪ್ರಮುಖ ಕಾರಣಗಳಾಗಿವೆ. ಎರಡು ವರ್ಷಗಳ(೨೦೧೬ರಲ್ಲಿ) ಹಿಂದೆ ಕೇರಳಕ್ಕೆ ಮೈಸೂರು-ಕೊಡಗು ಮೂಲಕ ಹೈಟೆನ್ಷನ್ ವಿದ್ಯುತ್ ಮಾರ್ಗಕ್ಕಾಗಿ ಅಂದಾಜು ೫೬ ಸಾವಿರ ಮರಗಳನ್ನು ಕಡಿಯಲಾಗಿದೆಯೆಂದು ವರದಿಯಾಗಿದೆ. ಕೇಂದ್ರ ಪರಿಸರ ಸಚಿವಾಲಯವು ಪ್ರಕಟಿಸಿರುವ 'ಅರಣ್ಯಗಳ ಸ್ಥಿತಿಗತಿ' ದ್ವೈವಾರ್ಷಿಕ ವರದಿಯಲ್ಲಿ ಕೊಡಗಿನ ಒಟ್ಟು ವಿಸ್ತೀರ್ಣದಲ್ಲಿ ೧೦೨ ಚದರ ಕಿ. ಮೀ. ಅರಣ್ಯ ಪ್ರದೇಶ ಕಡಿಮೆಯಾಗಿದೆ ಎಂಬ ಅಂಶವಿದೆ.[೪]

ಹೀಗೆ ಆಧುನಿಕತೆಯ ಹೆಸರಿನಲ್ಲಿ ಕೊಡಗಿನಾದ್ಯಂತ ಇದೇ ರೀತಿ ಅರಣ್ಯ ಮತ್ತು ಪ್ರಾಕೃತಿಕ ಸಂಪತ್ತನ್ನು ಮನಬಂದಂತೆ ನಾಶ ಮಾಡಿ ತಮ್ಮ ಸ್ವಾರ್ಥವನ್ನು ಈಡೇರಿಸಿಕೊಳ್ಳಲು ಬಯಸಿದರೆ ಮುಂದೊಂದು ದಿನ ಅಪಾಯಕಾರಿಯಾದ ನೈಸರ್ಗಿಕ ವಿಕೋಪಗಳಿಗೆ ದಾರಿ ಮಾಡಿಕೊಟ್ಟಂತಾಗುತ್ತದೆ. ಇದನ್ನು ಮನಗಂಡು ಇರುವ ಅರಣ್ಯ ಭೂಮಿಯನ್ನಾದರೂ ಜೋಪಾನವಾಗಿ ಕಾಪಾಡಿಕೊಳ್ಳುವ ಪ್ರಯತ್ನವನ್ನು ಸರ್ಕಾರ, ಇಲ್ಲಿನ ಜಿಲ್ಲಾಡಳಿತ ಮತ್ತು ಮುಖ್ಯವಾಗಿ ಸ್ಥಳೀಯ ನಿವಾಸಿಗಳು ಮಾಡಬೇಕಾಗಿದೆ.

### ೬.೨. ಶೈಕ್ಷಣಿಕ ಮತ್ತು ಮಾಧ್ಯಮ ಕ್ಷೇತ್ರ

**ಶೈಕ್ಷಣಿಕ:** ಕೊಡಗು ಶೈಕ್ಷಣಿಕವಾಗಿ ಇತ್ತೀಚಿನ ವರ್ಷಗಳಲ್ಲಿ ಗಣನೀಯವಾಗಿ ಪ್ರಗತಿ ಸಾಧಿಸಿದೆ. ಕಳೆದ ೨೦ ವರ್ಷಗಳ ಅವಧಿಯ ಕೊಡಗಿನಲ್ಲಿ ಹೇಳಿಕೊಳ್ಳುವಂತಹ ಶಿಕ್ಷಣ ಸಂಸ್ಥೆಗಳಿರಲಿಲ್ಲ. ಉನ್ನತ ಅಧ್ಯಯನ ಮಾಡಬೇಕಾದರೆ ಮೈಸೂರು, ಬೆಂಗಳೂರು, ಮಂಗಳೂರು ಮೊದಲಾದ ಜಿಲ್ಲೆಗಳಿಗೆ ಹೋಗಬೇಕಾಗಿತ್ತು. ಕೆಲವು ವರ್ಷಗಳ ಹಿಂದೆ ಪ್ರೌಢಶಾಲೆ ಮತ್ತು ಪದವಿ ಪೂರ್ವ ತರಗತಿವರೆಗೆ ಮಾತ್ರ ಇಲ್ಲಿ ಶಿಕ್ಷಣ ಸಂಸ್ಥೆಗಳಿದ್ದವು. ಪದವಿ ವ್ಯಾಸಂಗ ಮಾಡಬೇಕಾದರೆ ಜಿಲ್ಲಾ ಕೇಂದ್ರ ಮಡಿಕೇರಿಗೆ ತೆರಳಬೇಕಾಗಿತ್ತು. ಹೀಗಾಗಿ ಇಲ್ಲಿನ ಬಹುಪಾಲು ವಿದ್ಯಾರ್ಥಿಗಳು ಪ್ರೌಢಶಾಲಾ ಹಂತಕ್ಕೆ ವಿದ್ಯಾಭ್ಯಾಸವನ್ನು ಮೊಟಕುಗೊಳಿಸುತ್ತಿದ್ದರು.

ಕೊಡಗು ಒಂದು ಕಾಲದಲ್ಲಿ ಶಿಕ್ಷಣದಿಂದ ವಂಚಿತವಾದ ಜಿಲ್ಲೆ ಎಂಬ ಅಪಖ್ಯಾತಿಗೆ ಗುರಿಯಾಗಿತ್ತು. ಆದರೆ ಈಗ ಕಾಲ ಬದಲಾಗಿದೆ. ಶೈಕ್ಷಣಿಕವಾಗಿ ಕೊಡಗು ಬಹಳಷ್ಟು ಬದಲಾವಣೆ ಕಂಡಿದೆ. ಎಂಜಿನಿಯರಿಂಗ್, ವೈದ್ಯಕೀಯ ಮೊದಲಾದ ಶಿಕ್ಷಣ ಸಂಸ್ಥೆಗಳು ಸ್ಥಾಪನೆಯಾಗಿವೆ. ಕುಶಾಲನಗರದಲ್ಲಿ ಸರ್ಕಾರಿ ಎಂಜಿನಿಯರಿಂಗ್ ಕಾಲೇಜು, ಮಡಿಕೇರಿಯಲ್ಲಿ ವೈದ್ಯಕೀಯ ಶಿಕ್ಷಣ ಸಂಸ್ಥೆ, ವಿರಾಜಪೇಟೆಯಲ್ಲಿ ದಂತವೈದ್ಯಕೀಯ ಮಹಾವಿದ್ಯಾಲಯ, ಕುಶಾಲನಗರದ ಸಮೀಪವಿರುವ ಚಿಕ್ಕ ಅಳುವಾರದಲ್ಲಿ ಮಂಗಳೂರು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಕೇಂದ್ರ ಆರಂಭವಾಗಿದೆ. ಪೊನ್ನಂಪೇಟೆಯಲ್ಲಿ ಅರಣ್ಯ ಮಹಾವಿದ್ಯಾಲಯವಿದೆ. ಕೂಡಿಗೆಯಲ್ಲಿ ಸೈನಿಕ

ಶಾಲೆ ತೆರೆಯಲಾಗಿದೆ. ಇಂದು ಉನ್ನತ ಶಿಕ್ಷಣ ಪಡೆಯಲು ದೇಶ ವಿದೇಶಗಳ ವಿದ್ಯಾರ್ಥಿಗಳು ಜಿಲ್ಲೆಗೆ ಆಗಮಿಸುತ್ತಿದ್ದಾರೆ. ಕೊಡಗಿನ ಶ್ರೀಮಂತ ಕುಟುಂಬದ ವಿದ್ಯಾರ್ಥಿಗಳು ವ್ಯಾಸಂಗ ಮಾಡಲು ಹೊರಗೆ ಹೋದರೆ, ಹೊರಗಿನ ಶ್ರೀಮಂತ ಕುಟುಂಬದ ಮಕ್ಕಳು ಉತ್ತಮ ವಿದ್ಯಾಭ್ಯಾಸ ಅರಸಿ ಕೊಡಗಿಗೆ ಬರುತ್ತಿದ್ದಾರೆ.

**ಸಮೂಹ ಮಾಧ್ಯಮ:** ಜಗತ್ತಿನಲ್ಲಿ ಅತ್ಯಂತ ವೇಗವಾಗಿ ಮತ್ತು ಪ್ರಭಾವಶಾಲಿಯಾಗಿ ಬೆಳೆಯುತ್ತಿರುವ ವಲಯವೆಂದರೆ ಪತ್ರಿಕಾರಂಗ. ಒಂದು ಕಾಲದಲ್ಲಿ ಕೇವಲ ಮುದ್ರಣವನ್ನವಲಂಬಿಸಿದ್ದ ಮಾಧ್ಯಮ ಕ್ಷೇತ್ರ ಇಂದು ದೃಶ್ಯ ಮಾಧ್ಯಮದೊಂದಿಗೆ ಕಾಣಿಸಿಕೊಳ್ಳುತ್ತಿದೆ. ಮನೋರಂಜನೆ ನೀಡುವ ವಾಹಿನಿಗಳಿಗಿಂತ ಸುದ್ದಿವಾಹಿನಿಗಳೇ ಅಧಿಕವಾಗುತ್ತಿವೆ. ಬಹಳ ಬೇಗ ಜನಸಾಮಾನ್ಯರನ್ನು ತಲುಪುವ ಮಾಧ್ಯಮ ಪ್ರಕಾರವಾಗಿ ರೂಪುಗೊಂಡಿರುವ ಸುದ್ದಿ ವಾಹಿನಿಗಳು ಇಂದಿನ ಯುವಕರನ್ನು ಕೈಬೀಸಿ ಕರೆಯುತ್ತಿವೆ. ಇದನ್ನೇ ಅಸ್ತ್ರವನ್ನಾಗಿಸಿಕೊಂಡಿರುವ ಅನೇಕ ಪದವಿ ಕಾಲೇಜುಗಳು ಪತ್ರಿಕೋದ್ಯಮ ಕೋರ್ಸ್‌ಗಳನ್ನು ತೆರೆದು ಆಸಕ್ತ ವಿದ್ಯಾರ್ಥಿಗಳಿಗೆ ಅಧ್ಯಯನಕ್ಕೆ ಅವಕಾಶ ಮಾಡಿಕೊಡುವುದರೊಂದಿಗೆ ವಿದ್ಯಾರ್ಥಿಗಳ ಸಂಖ್ಯೆಯನ್ನು ವೃದ್ಧಿಸಿಕೊಳ್ಳುವಲ್ಲಿ ಸಫಲವಾಗಿವೆ. ಇದರಿಂದಾಗಿ ಆಸಕ್ತ ಯುವಕರು ಸುದ್ದಿವಾಹಿನಿಗಳಲ್ಲಿ ಕೆಲಸ ಮಾಡುವ ಮಹದಾಸೆಯನ್ನು ವ್ಯಕ್ತಪಡಿಸುತ್ತಿರುವುದು ನಮಗೆ ತಿಳಿಯುತ್ತಿದೆ. ಆದರೆ ಇಂದಿನ ಕೆಲವು ವಿದ್ಯಾರ್ಥಿಗಳಂತೂ ಪತ್ರಿಕೋದ್ಯಮ ಪದವಿಯನ್ನು ಅಧ್ಯಯನ ಮಾಡಿದರೆ ಮಾತ್ರ ನಮಗೆ ಉದ್ಯೋಗ ದೊರೆಯುತ್ತದೆ ಎಂಬ ಭ್ರಮೆಗೆ ಒಳಗಾಗಿರುವುದು ಮಾತ್ರ ದೊಡ್ಡ ವಿಪರ್ಯಾಸವೆನಿಸುತ್ತದೆ.

ಕೊಡಗು ಸಹ ಈ ಕ್ಷೇತ್ರದಲ್ಲಿ ಮುಂದುವರೆಯುತ್ತಿರುವುದು ಕಂಡು ಬರುತ್ತಿದೆ. ಮಡಿಕೇರಿಯ ಫೀಲ್ಡ್ ಮಾರ್ಷೆಲ್ ಕೆ. ಎಂ. ಕಾರ್ಯಪ್ಪ ಕಾಲೇಜು, ಗೋಣಿಕೊಪ್ಪಲಿನ ಕಾವೇರಿ ಕಾಲೇಜಿನಲ್ಲಿ ಪತ್ರಿಕೋದ್ಯಮ ಅಧ್ಯಯನ ಪದವಿ ಕೋರ್ಸ್‌ಗಳಿರುವುದರಿಂದ ಜಿಲ್ಲೆಯ ಹೆಚ್ಚಿನ ವಿದ್ಯಾರ್ಥಿಗಳು ಮಾಧ್ಯಮ ಕ್ಷೇತ್ರ ಪ್ರವೇಶ ಮಾಡುತ್ತಿದ್ದಾರೆ. ಇಲ್ಲಿನ ಅನೇಕ ಯುವಕ, ಯುವತಿಯರು ರಾಜ್ಯದ ಅನೇಕ ವಾಹಿನಿಗಳಲ್ಲಿ, ಪತ್ರಿಕೆಗಳಲ್ಲಿ ಹಿರಿಯ ಸುದ್ದಿಗಾರರಾಗಿ, ಸಂಪಾದಕರಾಗಿ ದುಡಿಯುತ್ತಿದ್ದಾರೆ.

ಸಮಕಾಲೀನವಾಗಿ ಗಮನಿಸಿದರೆ ಹಿಂದೆ ಇದ್ದಂತಹ 'ಲೋಕಪಾವನ', 'ಕೊಡಗು ಬೋಧಿನಿ', 'ಲೋಕ ರಹಸ್ಯ', 'ಪ್ರಭಾತ' ಮೊದಲಾದ ಪತ್ರಿಕೆಗಳು ನಿಂತು ಹೋಗಿದ್ದರೆ ಕೆಲವು ಪತ್ರಿಕೆಗಳು ಇನ್ನೂ ಪ್ರಸಾರವಾಗುತ್ತಿದ್ದು ಸಂಪಾದಕರು ಮಾತ್ರ ಬೇರೆಯವರಾಗಿದ್ದಾರೆ. ಈ ಪತ್ರಿಕೆಯ ಜತೆಗೆ ನಂಜಪ್ಪ ಅವರ ಸಂಪಾದಕತ್ವದಲ್ಲಿ 'ಕಾವೇರಿ ಟೈಮ್ಸ್', ನವೀನ್ ಸಂಪಾದಕತ್ವದಲ್ಲಿ 'ಪ್ರಜಾಸತ್ಯ' ಎಂಬ ದಿನಪತ್ರಿಕೆಗಳು ಕಳೆದ ಎರಡು ವರ್ಷದಿಂದ ಈಚೆಗೆ ಪ್ರಸಾರವಾಗುತ್ತಿವೆ. ಇವುಗಳೊಂದಿಗೆ ಕೊಡಗು ಸಮಾಚಾರ, ಕೊಡಗು ವಾರ್ತೆ, ಕೊಡಗು ಧ್ವನಿ, ಕಿತ್ತಳೆ ನಾಡು ಮೊದಲಾದ ಹೆಸರಿನಲ್ಲಿ ವಾರಪತ್ರಿಕೆಗಳು ಪ್ರಸಾರವಾಗುತ್ತಿವೆ.

ಇವುಗಳ ಜತೆಗೆ ರಾಜ್ಯ ಹಾಗೂ ರಾಷ್ಟ್ರಮಟ್ಟದ ಪತ್ರಿಕೆಗಳು ಕೊಡಗಿನಲ್ಲಿ ವ್ಯಾಪಕವಾಗಿ ಓದುಗರನ್ನು ತಲುಪಿವೆ ಎನ್ನಬಹುದು. ವಾರ್ತಾಭಾರತಿ, ವಿಶ್ವವಾಣಿ, ವಿಜಯವಾಣಿ, ಕನ್ನಡ ಪ್ರಭ, ಸಂಯುಕ್ತ ಕರ್ನಾಟಕ, ವಿಜಯ ಕರ್ನಾಟಕ, ಪ್ರಜಾವಾಣಿ ಮದಲಾದ ಪತ್ರಿಕೆಗಳಿವೆ. ಇಂಗ್ಲಿಷ್‌ನಲ್ಲಿ ಪ್ರಸಾರವಾಗುತ್ತಿರುವ ಡೆಕ್ಕನ್ ಹೆರಾಲ್ಡ್, ಟೈಮ್ಸ್ ಆಫ್ ಇಂಡಿಯಾ, ದಿ ಹಿಂದು, ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್ ಮೊದಲಾದ ಪತ್ರಿಕೆಗಳೂ ಜಿಲ್ಲೆಯಲ್ಲಿ ಪ್ರಚಲಿತದಲ್ಲಿವೆ. ರಾಜ್ಯಮಟ್ಟದ ವಾರಪತ್ರಿಕೆಗಳಾದ ಲಂಕೇಶ್, ಅಗ್ನಿ ಪತ್ರಿಕೆಗಳು ಹೆಚ್ಚು ಪ್ರಸಾರದಲ್ಲಿವೆ. ಕನ್ನಡ ಪತ್ರಿಕೆಗಳ ಜತೆಗೆ ಮನೋರಮ, ಮಾಧ್ಯಮ ಮೊದಲುಗೊಂಡಂತೆ ಹಲವು ಮಲೆಯಾಳ ಪತ್ರಿಕೆಗಳು ಓದುಗರ ಜಾಲವನ್ನು ವಿಸ್ತರಿಸಿವೆ.

ಎಲೆಕ್ಟ್ರಾನಿಕ್ ಮಾಧ್ಯಮಗಳು ಯುವಕರನ್ನು ಹೆಚ್ಚು ಆಕರ್ಷಿಸುತ್ತಿವೆ. ಇದಕ್ಕೆ ಪೂರಕವೆಂಬಂತೆ ಜಿಲ್ಲೆಯಲ್ಲಿ ಟಿವಿ೧, ೨೪X೭, ಚಿತ್ತಾರ, ಮೊದಲಾದ ಚಾನಲ್‌ಗಳು ಕೂಡ ಸ್ಥಳೀಯವಾಗಿ ಕಾರ್ಯನಿರ್ವಹಿಸುತ್ತಿದ್ದು ಅನೇಕ ಯುವಕ, ಯುವತಿಯರಿಗೆ ಅನುಕೂಲ ಮಾಡಿಕೊಟ್ಟಿವೆ. ಈ ವಾಹಿನಿಗಳು ಬಹುಪಾಲು ಜಿಲ್ಲೆಯ ಸುದ್ದಿಗಳಿಗೆ ಪ್ರಾಶಸ್ತ್ಯ ನೀಡುತ್ತಿದ್ದು, ಕೆಲವೊಮ್ಮೆ ರಾಜ್ಯ, ರಾಷ್ಟ್ರ ಮಟ್ಟದ ಸುದ್ದಿಗಳನ್ನು ಬಿತ್ತರಿಸುತ್ತಿವೆ. ಮಾಹಿತಿ ಮನೋರಂಜನೆಗೆ ಇಂದಿನ ಜನಸಾಮಾನ್ಯರೂ ಕೂಡ ದೃಶ್ಯ ಮಾಧ್ಯಮಗಳನ್ನು ಅವಲಂಬಿಸಿರುವುದು ಈ ಕ್ಷೇತ್ರ ವೇಗವಾಗಿ ಬೆಳೆಯಲು ಕಾರಣವಾಗಿದೆ.

## ೬.೩. ಸಾಮಾಜಿಕ ಮತ್ತು ಸಾಂಸ್ಕೃತಿಕ

**ಕೊಡವರು ಮತ್ತು ಅರೆಭಾಷೆ ಗೌಡರು:** ಕೊಡವ ಮತ್ತು ಅರೆಭಾಷೆ ಗೌಡ ಸಮುದಾಯವು ವೈಶಿಷ್ಟ್ಯ ಪೂರ್ಣವಾದ ತಮ್ಮದೇ ಆದ ಸಾಂಸ್ಕೃತಿಕ ಅನನ್ಯತೆಯನ್ನು ಹೊಂದಿದ್ದರೂ ಅನ್ಯ ಸಂಸ್ಕೃತಿಗಳ ಪ್ರಭಾವಗಳಿಗೆ ಒಳಗಾಗಿರುವುದು ಇಂದು ಸಾಮಾನ್ಯವಾಗಿ ಕಂಡುಬರುತ್ತಿದೆ. ಐನ್‌ಮನೆಗಳ ನಿರ್ಮಾಣ, ವಸತಿ ವ್ಯವಸ್ಥೆ, ಕೃಷಿ ಪದ್ಧತಿ, ಜೀವನ ವಿಧಾನ, ಮತ್ತು ಆಚರಣೆಗಳು ರೂಪಾಂತರಗೊಂಡಿದ್ದು ಕೆಲವು ಸಂಪೂರ್ಣವಾಗಿ ಮರೆಯಾಗುವ ಕಡೆಗೆ ಸಾಗುತ್ತಿವೆ. ಆಧುನೀಕರಣ, ಪಾಶ್ಚಾತ್ಯೀಕರಣ, ಜಾಗತೀಕರಣಗಳ ಪೈಪೋಟಿಯಿಂದ ಸಾಕಷ್ಟು ಪ್ರಮಾಣದಲ್ಲಿ ಬದಲಾವಣೆಗಳಾಗಿರುವುದನ್ನು ಮೇಲ್ನೋಟಕ್ಕೆ ಗುರುತಿಸಬಹುದು. ಕೂಲಂಕಷವಾಗಿ ಅಧ್ಯಯನ ಮಾಡಿದಾಗ ಅನೇಕ ಪದ್ಧತಿಗಳು ಹಿಂದಿನಂತಿದ್ದರೂ ಅನಿವಾರ್ಯ ಕಾರಣಗಳು ಮತ್ತು ಕಾಲದ ಒತ್ತಡದಿಂದಾಗಿ ಈ ಎರಡೂ ಸಮುದಾಯದ ಬಹಳಷ್ಟು ಜನರು ಪಟ್ಟಣಗಳಲ್ಲಿ ವಾಸಿಸುತ್ತಿರುವುದು ಕಂಡುಬರುತ್ತಿದೆ. ಧಾವಂತದ ಈ ಸಂದರ್ಭದಲ್ಲಿ ಸಮಯದ ಅಭಾವ ಎಲ್ಲರನ್ನೂ ಕಾಡುತ್ತಿದೆ. ಈ ಕಾರಣದಿಂದ ಇವರ ಮದುವೆ, ಹಬ್ಬ ಹರಿದಿನಗಳು, ಆಚರಣೆಗಳು, ಉಡುಗೆ–ತೊಡುಗೆ, ಊಟೋಪಚಾರ, ಪೂಜೆ ಪುನಸ್ಕಾರಗಳಲ್ಲಿ ಧಾರ್ಮಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಸಾಕಷ್ಟು ಬದಲಾವಣೆಗಳಾಗಿವೆ.

ಹಿಂದೆ ಐನ್‌ಮನೆಯಲ್ಲಿ ವಾಸಿಸುತ್ತಿದ್ದ ಅವಿಭಕ್ತ ಕುಟುಂಬ ಪದ್ಧತಿ ಸಂಪೂರ್ಣ ಮರೆಯಾಗಿದ್ದು, ಇಂದು ತಮಗೆ ಬೇಕಾದ ಹಾಗೇ ನವೀನ ಮಾದರಿಯಲ್ಲಿ ಐನ್‌ಮನೆ ವಿನ್ಯಾಸ ನಿರ್ಮಾಣ ಮಾಡಿಕೊಂಡು ಮೂಲ ಸಂಸ್ಕೃತಿಯನ್ನು ಮೂಲೆ ಗುಂಪುಮಾಡುವ ಸ್ಥಿತಿ ನಿರ್ಮಾಣವಾಗದಂತೆ ಹಿರಿಯ ತಲೆಮಾರಿನ ಸಂಪ್ರದಾಯಸ್ಥ ಕುಟುಂಬಗಳು ಶ್ರಮಿಸುತ್ತಿವೆ. ಕೆಲವು ಕುಟುಂಬಗಳು ಅದರಲ್ಲೂ ಕೊಡವ 'ಕಲ್ಯಾಟಂಡ' ಮನೆತನ ಹಳೆಯ ಮಾದರಿಯ ಐನ್ ಮನೆಯನ್ನು ಒಡೆದು ಅದೇ ಜಾಗದಲ್ಲಿ ಮೂಲಸ್ವರೂಪದ ಐನ್ ಮನೆಯನ್ನು ನಿರ್ಮಿಸಿಕೊಂಡಿದ್ದು ತಮ್ಮ ಸಂಸ್ಕೃತಿಯ ಪರಂಪರೆಯನ್ನು ಉಳಿಸಿಕೊಂಡು ಹೋಗುತ್ತಿದ್ದಾರೆ. ಆದರೂ ಪಾಶ್ಚಾತ್ಯ ಸಂಸ್ಕೃತಿಯ ಕಡೆಗೆ ಮನಸೋತಿರುವ ಯುವಜನಾಂಗ ತಮ್ಮ ಮೂಲ ಸಂಸ್ಕೃತಿಯ ಬಗೆಗಿನ ಒಲವು ಕಡಿಮೆ ಮಾಡಿಕೊಂಡಂತಿದೆ.

ಭಾಷೆಯೇ ಒಂದು ಜನಾಂಗದ ಅಳತೆಗೋಲು ಎಂದು ಹೇಳಲಾಗುತ್ತದೆ. ಭಾಷೆ ತನ್ನ ಬದುಕಿನ ಭಾವನೆಗಳ ಮತ್ತು ಸಂಸ್ಕೃತಿಯ ಪ್ರತಿನಿಧಿಯಾಗಿರುತ್ತದೆ. ಅಂತಹ ಭಾಷೆಗೂ ಇಂದು ಪೆಟ್ಟು ಬೀಳುತ್ತಿರುವುದು ಆಧುನಿಕ ಪಲ್ಲಟಗಳಿಂದಾಗಿ ಮನುಷ್ಯ ತನ್ನ ಮೂಲ ಅಸ್ತಿತ್ವವನ್ನು ಕಳೆದುಕೊಂಡು ಹೊಸ ಹೆಜ್ಜೆಗಳನ್ನು ಕಂಡುಕೊಳ್ಳುತ್ತಿದ್ದಾನೆ ಎಂಬುದಕ್ಕೆ ನಿದರ್ಶನವಾಗುತ್ತದೆ. ಹೌದು ಕೊಡಗಿನಲ್ಲಿ ಪ್ರಾದೇಶಿಕ ಭಾಷೆಯಾಗಿ ಕೊಡವರ ಸಹಿತ ಇತರೆ ಜಾತಿ ಜನಾಂಗದವರು ತಮ್ಮ ದಿನನಿತ್ಯದ ವ್ಯವಹಾರಗಳಿಗೆ ಬಳಸುತ್ತಿದ್ದ ಭಾಷೆ 'ಕೊಡವ'. ಇಂಗ್ಲಿಷ್ ಭಾಷೆಯ ವ್ಯಾಮೋಹದಿಂದಾಗಿ ಅನೇಕ ಕೊಡವ ಮನೆಗಳಲ್ಲಿಯೇ ಇಂಗ್ಲಿಷನ್ನು ವ್ಯಾವಹಾರಿಕವಾಗಿ ಬಳಸುತ್ತಿರುವ ಪರಿಪಾಟ ಹೆಚ್ಚಾಗುತ್ತಿರುವುದರಿಂದ ಅವರ ಮಾತೃಭಾಷೆಯಾದ ಕೊಡವ ಭಾಷೆಗೆ ಧಕ್ಕೆಯಾಗುತ್ತಿದೆ. ಕೊಡವರ ಭಾಷೆಯೆಂದೇ ಹೇಳಿಕೊಳ್ಳುತ್ತಿರುವ ಕೊಡವರೇ ತಮ್ಮ ಮಕ್ಕಳಿಗೆ ಇಂಗ್ಲಿಷ್ ಮಾಧ್ಯಮದ ಶಿಕ್ಷಣ ಕೊಡಿಸುವುದರೊಂದಿಗೆ ತಾವೂ ತಮ್ಮ ಮನೆಗಳಲ್ಲಿ ಇಂಗ್ಲಿಷ್ ಬಳಸುತ್ತಿರುವುದು ಸಾಂಸ್ಕೃತಿಕ ಪಲ್ಲಟದ ಮತ್ತೊಂದು ಹಂತವಾಗಿದೆ. ಹೀಗೇ ಮುಂದುವರೆದರೆ ಮುಂದಿನ ಪೀಳಿಗೆಯ ಮಕ್ಕಳು ಕೊಡವ ಭಾಷೆಯನ್ನೇ ಕಲಿಯದಿರುವ ಅಪಾಯ ಉಂಟಾಗುವುದರಲ್ಲಿ ಸಂದೇಹವಿಲ್ಲ. ಏಕೆಂದರೆ ಕನ್ನಡ ನಾಡಿನ ಇಂದಿನ ಮಕ್ಕಳಲ್ಲಿ ಕನ್ನಡವನ್ನೇ ಓದಲು ಬರೆಯಲು ಬಾರದಂತಹ ಸ್ಥಿತಿ ನಿರ್ಮಾಣವಾಗಿರುವುದು ನಮ್ಮ ಕಣ್ಣ ಮುಂದಿದೆ. ಈ ಸಮಸ್ಯೆ ಅರೆಭಾಷೆ ಗೌಡರಲ್ಲಿಯೂ ಕಾಣುತ್ತಿದೆ.

ಇಂದಿನ ಹೆಸರುಗಳಲ್ಲಿಯೂ ಬದಲಾವಣೆಗಳಾಗಿವೆ. ಸಾಂಪ್ರದಾಯಿಕವಾದ ಹೆಸರುಗಳನ್ನು ಇಟ್ಟುಕೊಳ್ಳುತ್ತಿದ್ದ ಇವರು ಇತ್ತೀಚೆಗೆ ಡೈಸಿ ಬೋಪಣ್ಣ, ರಶ್ಮಿಕಾ ಮಂದಣ್ಣ, ಹರ್ಷಿಕಾ ಪೂಣಚ್ಚ, ನಿಧೀಶ್ ಸೋಮಯ್ಯ, ಗೌರವ್ ಪೆಮ್ಮಯ್ಯ, ಮೊದಲಾದ ಅಧುನಿಕ ಹೆಸರುಗಳನ್ನು ಹೊಂದುತ್ತಿದ್ದಾರೆ.

**ಮಹಿಳೆಯರ ಸ್ಥಾನಮಾನ:** ಪುರುಷ ಪ್ರಧಾನ ಸಂಸ್ಕೃತಿಯ ನಮ್ಮ ಸಮಾಜ ವ್ಯವಸ್ಥೆಯಲ್ಲಿ ಸ್ತ್ರೀಯರನ್ನು ನಿರಂತರವಾಗಿ ಎರಡನೇ ದರ್ಜೆಯಲ್ಲಿ ಕಾಣುವ ದೃಷ್ಟಿಕೋನ ಹಿಂದಿನಿಂದಲೂ

ನಡೆದುಕೊಂಡು ಬಂದಿವೆ. ಈ ಕಾರಣದಿಂದ ಮಹಿಳೆಯರು ಒಂದು ರೀತಿಯ ಕೌಟುಂಬಿಕ ಬಂಧಿಗಳಾದರು. ಒಂದು ಕಾಲದಲ್ಲಿ ಸಂಗೀತ, ನೃತ್ಯಗಳು ಸಾಮಾನ್ಯ ಮಹಿಳೆಯರು ಸ್ವೀಕರಿಸಲಾಗದ ಕಲಾಪ್ರಕಾರಗಳಾಗಿದ್ದವು. ಒಂದು ವೇಳೆ ಇವುಗಳನ್ನು ಅಳವಡಿಸಿಕೊಂಡರೆ ಅಂತಹ ಮಹಿಳೆಯರನ್ನು ಕೀಳಾಗಿ ನೋಡುವ ಕಾಲವಿತ್ತು. ಆದರೆ ಇಂದು ಎಲ್ಲ ಕ್ಷೇತ್ರಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳುವ ಮೂಲಕ ಮಹಿಳೆ ಪುರುಷರಿಗೆ ಸಮಾನವಾಗಿ ನಿಲ್ಲಬಲ್ಲ ಸಾಮರ್ಥ್ಯವನ್ನು ಹೊಂದುತ್ತಿರುವುದು ಕಂಡುಬರುತ್ತಿದೆ. ಒಟ್ಟಿನಲ್ಲಿ ಈಗಿನ ಮಹಿಳೆಯರ ಸೃಜನಶೀಲತೆ ಮತ್ತು ಸಾಮಾಜಿಕತೆಗಳು ಜಾಗೃತಗೊಂಡು ಅವು ತೀವ್ರತರವಾಗಿ ಅನುಭವಿಸುತ್ತಿದ್ದ ಬಿಕ್ಕಟ್ಟುಗಳನ್ನು ದಾಟಿ ಬಂದಿರುವುದನ್ನು ಗಮನಿಸಬಹುದು. ಈ ರೀತಿಯ ಬದಲಾವಣೆಗಳನ್ನು ಕೊಡವ ಮತ್ತು ಅರೆಭಾಷೆ ಗೌಡ ಸಮುದಾಯದ ಮಹಿಳೆಯರಲ್ಲೂ ಕಾಣಬಹುದು. ಪರಂಪರಾಗತವಾಗಿದ್ದ ಕೌಟುಂಬಿಕ ಸಂಕೋಲೆಗಳಿಂದ ಮುಕ್ತರಾಗಿ ಶೇಕಡ ನೂರರಷ್ಟು ಶಿಕ್ಷಿತರಾಗುವುದರೊಂದಿಗೆ ಹಲವಾರು ಉನ್ನತ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಸಾಮಾಜಿಕ ಮತ್ತು ಶೈಕ್ಷಣಿಕ ಪ್ರಗತಿಯನ್ನು ಹೊಂದುವ ಮೂಲಕ ತಮ್ಮ ಅನನ್ಯತೆಯನ್ನು ವಿಸ್ತರಿಸಿಕೊಂಡಿದ್ದಾರೆ.

ಕೊಡಗಿನ ಗೌರಮ್ಮನವರ ಕಾಲದಲ್ಲೂ ಹೆಣ್ಣು ಮನೆಯಿಂದ ಹೊರಗೆ ಬರುವ ಸಾಧ್ಯತೆಗಳು ಕಡಿಮೆಯಾಗಿದ್ದವು. ಸಾಂಪ್ರದಾಯಿಕ ಬದುಕನ್ನು ದಾಟಿ ಸಾಮಾಜಿಕ, ಸಾಹಿತ್ಯಿಕ ಕ್ಷೇತ್ರಗಳಲ್ಲಿ ಗುರುತಿಸಿಕೊಳ್ಳುವ ಹಂಬಲವಿದ್ದರೂ ಅದಕ್ಕೆ ಪೂರಕವಾದ ಪ್ರೋತ್ಸಾಹ, ಗೌರವಾಧರಗಳಿರುತ್ತಿರಲಿಲ್ಲ. ಆ ಪರಿಸ್ಥಿತಿಯಲ್ಲಿಯೂ ಕೊಡಗಿನ ಗೌರಮ್ಮನವರು ಸಾಹಿತ್ಯ ರಚಿಸುವ ಮೂಲಕ ಶಾಶ್ವತರಾಗುಳಿದಿದ್ದಾರೆ. ಆದರೆ ಬದಲಾದ ಕಾಲಘಟ್ಟದಲ್ಲಿ ಕೊಡಗಿನ ಮಹಿಳೆಯರಲ್ಲಿ ಮಹತ್ವದ ಬದಲಾವಣೆಗಳನ್ನು ಗುರುತಿಸಬಹುದು.

ಭಾರತೀಯ ಆಡಳಿತ ಸೇವೆ, ಮಿಲಿಟರಿ ಸೇವೆ, ಸಿನೆಮಾ, ಕ್ರೀಡೆ, ರಾಜಕೀಯ ಕ್ಷೇತ್ರಗಳಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಚೋನೀರ ಬೆಳ್ಳಿಯಪ್ಪ ಮುತ್ತಮ್ಮ ಅವರು ಭಾರತೀಯ ವಿದೇಶಾಂಗ ಸೇವೆಯನ್ನು ಪ್ರವೇಶಿಸಿದ ಪ್ರಥಮ ಮಹಿಳೆ ಎಂಬ ಪ್ರಸಿದ್ಧಿಗೆ ಪಾತ್ರರಾಗಿದ್ದಾರೆ. ಈ ಮೂಲಕ ಕೊಡವರ ಹಿರಿಮೆಯನ್ನು ಇಮ್ಮಡಿಗೊಳಿಸಿದ್ದಾರೆ. ಪುರುಷರಿಗೆ ಮಾತ್ರ ಸೇನೆಯಲ್ಲಿ ಸೇವೆ ಸಲ್ಲಿಸಲು ಸಾಧ್ಯ ಎಂಬ ಮಾತನ್ನು ಅನೇಕ ಕೊಡವ ಮಹಿಳೆಯರು ಸುಳ್ಳಾಗಿಸಿದ್ದಾರೆ. ಕೆ. ಪಿ. ಪಲ್ಲವಿಯವರು ಫ್ಲೈಟ್ ಆಫೀಸರ್ ಆಗಿ, ಐನಂಡ ಕಾವೇರಮ್ಮ ಕಮಾಂಡರ್ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವುದನ್ನು ಗಮನಿಸಬಹುದು. ಕೊಡಗಿನಲ್ಲಿ ಹಾಕಿಗೆ ವಿಶೇಷ ಸ್ಥಾನಮಾನವಿರುವುದರಿಂದ ಮಹಿಳಾ ತಂಡಗಳೂ ಭಾಗವಹಿಸುತ್ತಿವೆ. ಅಶ್ವಿನಿ ನಾಚಪ್ಪ, ಅಶ್ವಿನಿ ಪೊನ್ನಪ್ಪ, ಎಂ. ಆರ್. ಪೂವಮ್ಮ, ಜ್ಯೋತ್ಸ್ನಾ ಚಿನ್ನಪ್ಪ ಮೊದಲಾದವರು ಕ್ರೀಡಾ ಕ್ಷೇತ್ರದಲ್ಲಿ ಹೆಸರು ಮಾಡಿರುವಂತಹ ಪ್ರಮುಖರು. ಪ್ರೇಮಾ ಕಾರ್ಯಪ್ಪ ರಾಜ್ಯಸಭಾ ಸದಸ್ಯೆಯಾಗಿ, ಬೆಂಗಳೂರಿನ ಮೇಯರ್ ಆಗಿ, ವೀಣಾ ಅಚ್ಚಯ್ಯ ಎಮ್.ಎಲ್.ಸಿ ಆಗಿ, ಕೆ. ಪಿ. ಚಂದ್ರಕಲಾ ಮಡಿಕೇರಿ ಜಿಲ್ಲಾ ಪಂಚಾಯತ್‌ನ ಅಧ್ಯಕ್ಷರಾಗಿ, ಕೆಲ್ಲೇಟಿರ ಚಿತ್ರ ನಾಣಯ್ಯ ಮಡಿಕೇರಿ ತಾಲೂಕು

ಪಂಚಾಯತ್‌ನ ಉಪಾಧ್ಯಕ್ಷರಾಗಿ, ಅರೆಭಾಷೆ ಗೌಡ ಸಮುದಾಯದ ಕಾವೇರಮ್ಮ ಸೋಮಣ್ಣ ಮಡಿಕೇರಿ ನಗರ ಸಭೆಯ ಹಾಲಿ ಅಧ್ಯಕ್ಷರಾಗಿ, ಮೋಂತಿ ಗಣೇಶ್ ತಾಲೂಕು ಪಂಚಾಯತ್‌ನ ಮಾಜಿ ಅಧ್ಯಕ್ಷರಾಗಿ, ಕವಿತಾ ಪ್ರಭಾಕರ್ ತಾಲೂಕು ಪಂಚಾಯತ್‌ನ ಸದಸ್ಯೆಯಾಗಿ ಸೇವೆ ಸಲ್ಲಿಸುವ ಮೂಲಕ ರಾಜಕಾರಣದಲ್ಲೂ ಗುರುತಿಸಿಕೊಂಡಿದ್ದಾರೆ. ಹರ್ಷಿಕಾ ಪೂಣಚ್ಚ, ರಶ್ಮಿಕಾ ಮಂದಣ್ಣ, ಪ್ರೇಮಾ ಮೊದಲಾದವರು ಸಿನೆಮಾ ಕ್ಷೇತ್ರದಲ್ಲಿ ನಾಯಕಿಯರಾಗಿ ಹೆಸರು ಮಾಡಿದ್ದಾರೆ. ಕಾವೇರಿ ಪೊನ್ನಪ್ಪ, ಗೀತಾ ಮಂದಣ್ಣ, ತೀತೀರ ರೇಖಾ ವಸಂತ, ಕೋರನ ಸರಸ್ವತಿ ಪ್ರಕಾಶ್ ಮೊದಲಾದವರು ಸಾಹಿತ್ಯ ರಂಗದಲ್ಲಿ ಗುರುತಿಸಿಕೊಂಡಿದ್ದಾರೆ. ಹೀಗೆ ವಿವಿಧ ರಂಗಗಳಲ್ಲಿ ಗುರುತಿಸಿಕೊಂಡಿರುವ ಈ ಮಹಿಳೆಯರು ಸಮಾಜಮುಖಿಯಾಗಿ ರೂಪುಗೊಳ್ಳುವ ಮೂಲಕ ತಮ್ಮ ಅನನ್ಯತೆಯನ್ನು ಉಳಿಸಿಕೊಂಡಿದ್ದಾರೆ.

**ಮದುವೆ:** ಕೊಡವರ ಮದುವೆಯ ವಿವಿಧ ಆಯಾಮಗಳನ್ನು ಮತ್ತು ಅವರು ಅಳವಡಿಸಿಕೊಂಡಿರುವ ವೈವಿಧ್ಯತೆಯನ್ನು ಮಹಾಪ್ರಬಂಧದ ನಾಲ್ಕನೇ ಅಧ್ಯಾಯದಲ್ಲಿ ಮತ್ತು ಅರೆಭಾಷೆ ಗೌಡರ ವಿವಾಹ ಪದ್ಧತಿಗಳನ್ನು ಐದನೇ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಹಿಂದೆ ವಿವಾಹ ಕಾರ್ಯಗಳು ಬಹಳ ಪೂರ್ವಸಿದ್ಧತೆ ಮತ್ತು ವಿಜೃಂಭಣೆಗಳಿಂದ ಮೂರು-ನಾಲ್ಕು ದಿನಗಳ ಕಾಲ ಗ್ರಾಮದವರು ಮತ್ತು ಸಂಬಂಧಿಕರೆಲ್ಲಾ ಒಂದುಗೂಡುವುದರೊಂದಿಗೆ ಸಾಂಪ್ರದಾಯಿಕವಾಗಿ, ಶಾಸ್ತ್ರೋಕ್ತವಾಗಿ ನಡೆಯುತ್ತಿದ್ದವು. ವಿವಾಹಗಳು ಇಂದೂ ಮೊದಲಿಗಿಂತ ಅದ್ದೂರಿಯಾಗಿ ನಡೆಯುತ್ತಿದ್ದು ಅದೇ ಸಂಪ್ರದಾಯಗಳನ್ನು ಅನುಸರಿಸುತ್ತಿದ್ದರೂ, ಮದುವೆ ಕಾರ್ಯಗಳಲ್ಲಿ ಗ್ರಾಮದವರು ಭಾಗಿಯಾಗುವ ವಿಚಾರಗಳಲ್ಲಿ ಕೊರತೆ ಕಾಣುತ್ತಿದೆ. ಇದಕ್ಕೆ ವಿಭಕ್ತ ಕುಟುಂಬಗಳು ಮತ್ತು ಹೊರದೇಶ, ಹೊರ ಊರುಗಳಲ್ಲಿ ಉದ್ಯೋಗದಲ್ಲಿರುವುದು, ಎಲ್ಲಕ್ಕಿಂತ ಹೆಚ್ಚಾಗಿ ಸಾಮಾಜಿಕ ಸಾಮರಸ್ಯ ಕಡಿಮೆಯಾಗಿರುವುದು ಮುಖ್ಯ ಕಾರಣವೆನಿಸುತ್ತದೆ.

ಕೊಡವರ ಮದುವೆ ಮೊದಲೆಲ್ಲಾ ಗಂಡು ಮತ್ತು ಹೆಣ್ಣಿನ ಮನೆಯಲ್ಲಿಯೇ ಪ್ರತ್ಯೇಕವಾಗಿ ಮಹೂರ್ತದ ಹಿಂದಿನ ದಿನ ನಡೆಯುತ್ತಿದ್ದವು. ಮುಹೂರ್ತದ ದಿನ ವರನ ಕಡೆಯವರು ಸಂಜೆಯ ಹೊತ್ತಿಗೆ ವಧುವಿನ ಮನೆಗೆ ಆಗಮಿಸಿ ಬಾಳೆ ಬಿರುದು ಮತ್ತಿತರ ಆತಿಥ್ಯಗಳನ್ನು ಸ್ವೀಕರಿಸಿದ ನಂತರ ದಂಪತಿ ಮುಹೂರ್ತದಲ್ಲಿ ವಧು-ವರರನ್ನು ಮುಕ್ಕಾಲಿಯ ಮೇಲೆ ಕುಳ್ಳಿರಿಸುತ್ತಿದ್ದರು. ಅಲ್ಲಿ ಹಿರಿಯರಾದಿಯಾಗಿ ದಂಪತಿಗಳನ್ನು ಅಕ್ಷತೆ ಹಾಕಿ, ಗಿಂಡಿಯ ಹಾಲನ್ನು ಕುಡಿಸಿ ಆಶೀರ್ವದಿಸುತ್ತಿದ್ದರು. ಈ ರೀತಿಯ ವಿವಾಹ ವಿಧಾನಗಳು ಭಾರತೀಸುತರ ಹುಲಿಯ ಹಾಲಿನ ಮೇವು[೪] ಮತ್ತು ಬೆಳ್ಳಿ ಮೂಡಿತು[೫] ಕಾದಂಬರಿಗಳಲ್ಲಿ ದೊರೆಯುತ್ತವೆ.

ಹಿಂದೆ ಮೂರ್ನಾಲ್ಕು ದಿನಗಳ ಕಾಲ ಸಂಭ್ರಮದಿಂದ ನಡೆಯುತ್ತಿದ್ದ ವಿವಾಹಗಳೆಲ್ಲ ಒಂದಷ್ಟು ಬದಲಾವಣೆಗಳೊಂದಿಗೆ ಒಂದೇ ದಿನದಲ್ಲಿ ಮುಗಿದು ಹೋಗುತ್ತಿವೆ. ಈಗ ಅವರವರ ಮನೆಯಲ್ಲಿ ವರ ಮತ್ತು ವಧುವಿಗೆ ನಡೆಯುತ್ತಿದ್ದ ಪ್ರತ್ಯೇಕ ವಿವಾಹಗಳು ಮರೆಯಾಗಿ ಕಲ್ಯಾಣ ಮಂಟಪಗಳಲ್ಲಿ ಒಂದೇ ದಿನ ದಂಪತಿ ಮುಹೂರ್ತ ನಡೆಯುವ ಮೂಲಕ ವಿವಾಹಗಳು

ನೆರವೇರುತ್ತಿವೆ. ಆದರೆ ಮನೆಯಲ್ಲಿ ನಡೆಸುತ್ತಿದ್ದ ಕೆಲವು ಸಂಪ್ರದಾಯಗಳನ್ನು ಅನುಸರಿಸುತ್ತಿದ್ದಾರೆ. ಉದಾ: ತೂಗುದೀಪ, ಹಾಲಿನ ಗಿಂಡಿ, ಮುಕ್ಕಾಲಿಗಳು, ಪತ್ತಾಕ ಧಾರಣೆ. ಬಾಳೆ ಬಿರುದು ಮೊದಲಾದವುಗಳನ್ನು ಹಾಗೇ ಉಳಿಸಿಕೊಂಡು ಬರುತ್ತಿದ್ದಾರೆ.

ಕೊಡವರ ವಿವಾಹದ ವಿವಿಧ ಬಗೆಗಳಾದ ಒಕ್ಕಪರಿಜೆ, ಮಕ್ಕಪರಿಜೆ, ಕೆಮಿಕುತ್ತಿಮಂಗಲ ಮರೆಯಾಗುತ್ತಿವೆ. ಹುಲಿ ಕೊಂದ ವೀರನಿಗೆ ಶೌರ್ಯದ ಸಂಕೇತವಾಗಿ ಏರ್ಪಡಿಲಾಗುತ್ತಿದ್ದ ನರಿಮಂಗಲ ಇಂದು ಕಣ್ಮರೆಯಾಗಿದೆ. ಬೇಟೆಯ ನಿಷೇಧವಿರುವುದು ಇದು ನಿಂತು ಹೋಗಲು ಮುಖ್ಯ ಕಾರಣವಾಗಿದೆ.

ಕೊಡವರ ಮತ್ತು ಗೌಡರ ಹಬ್ಬಗಳು ಕೃಷಿಯಾಧಾರಿತವಾದವುಗಳು. ಇವುಗಳನ್ನು ಮೊದಲಿನಂತೆ ಮೂಲ ಸ್ವರೂಪದಲ್ಲಿಯೇ ಆಚರಿಸಿಕೊಂಡು ಬರುತ್ತಿದ್ದರೂ ಕೆಲವೊಂದು ಬದಲಾವಣೆಗಳನ್ನು ಗುರುತಿಸಬಹುದು. ಹಿಂದೆ ಎಲ್ಲೇ ಇದ್ದರೂ ಹಬ್ಬಗಳ ದಿನದಂದು ತಮ್ಮ ಮೂಲಮನೆಗೆ ಬರಲೇಬೇಕಿತ್ತು ಎಂಬ ಕಟ್ಟಳೆಗಳಿದ್ದವು. ಅವುಗಳು ಇಂದು ಮರೆಯಾಗಿವೆ. ಕೈಲ್‌ಪೊಳ್ದ್ ಹಬ್ಬದಲ್ಲಿ ಸಂಜೆ ಎಲ್ಲರೂ ಬೇಟೆಗೆ ಹೊರಡುವ ಪದ್ಧತಿಯಿತ್ತು. ಇಂದು ಈ ಸಂಸ್ಕೃತಿ ಸ್ಥಗಿತಗೊಂಡಿದೆ.

**ಮಿಲಿಟರಿ ಸೇವೆ:** ಕೊಡಗಿನಲ್ಲಿ ಕೊಡವ ಸಮುದಾಯದ ಕುಟುಂಬಗಳಲ್ಲಿ ಇಂದಿಗೂ ಸೇನೆಗೆ ಸೇರುವವರು ಇದ್ದಾರೆ. ಆದರೆ ಗಣನೀಯವಾಗಿ ಈ ಪ್ರಕ್ರಿಯೆಯಲ್ಲಿ ಇಳಿಕೆಯಾಗಿದೆ. ಕೊಡವರಲ್ಲಿ ಮತ್ತು ಅರೆಭಾಷೆ ಗೌಡರಲ್ಲಿ ಕೆಲವರು ಮಾತ್ರ ತಮ್ಮ ಮಕ್ಕಳನ್ನು ಎನ್.ಡಿ.ಎ. ಪರೀಕ್ಷೆಗಳನ್ನು ಬರೆಸಿ ಉನ್ನತ ಹುದ್ದೆಗಳನ್ನು ಪಡೆದುಕೊಳ್ಳುವಂತೆ ಮಾಡುತ್ತಿದ್ದಾರೆ. ಇನ್ನುಳಿದ ಜನಸಮುದಾಯದಲ್ಲಿ ಅಂದರೆ ಕೆಂಬಟ್ಟಿ, ಎರವರು, ಜೇನುಕುರುಬರಲ್ಲಿ ಶಿಕ್ಷಣದ ಪ್ರಮಾಣ ಕಡಿಮೆಯಿರುವುದರಿಂದ ಕೆಲವೇ ಕೆಲವು ಮಂದಿ ಸೈನಿಕರಾಗಿ ಹೋಗಲು ಮನಸ್ಸು ಮಾಡುತ್ತಿದ್ದಾರೆ.

**ಕೆಂಬಟ್ಟಿಯರು:** ಕೊಡವರ ಮನೆಮಗ ಅಥವಾ ಮನೆಯಾಳಾಗಿಯೇ ಜೀವನ ನಡೆಸುತ್ತಿದ್ದ ಕೆಂಬಟ್ಟಿಯರು ತಮ್ಮ ಬದುಕಿನಲ್ಲಿ ಹಲವಾರು ಮಾರ್ಪಾಡುಗಳನ್ನು ಕಂಡುಕೊಳ್ಳುತ್ತಿದ್ದಾರೆ. ಊಟ, ಉಡುಗೆ, ಭಾಷೆ, ಜೀವನ ಕ್ರಮ ಎಲ್ಲದರಲ್ಲಿಯೂ ಹೊಸತನ ಕಾಣುವಂತಾಗಿದೆ. ಮುಖ್ಯವಾಗಿ ಇವರು ಇತ್ತೀಚೆಗೆ ತಮ್ಮ ಮನೆತನದ ಹೆಸರುಗಳನ್ನು ತಮ್ಮ ಹೆಸರುಗಳೊಂದಿಗೆ ಬಳಸುವುದನ್ನು ರೂಢಿಸಿಕೊಂಡಿದ್ದಾರೆ. ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಸಾಧ್ಯವಾದಷ್ಟೂ ಉತ್ತಮವಾದ ಸ್ಥಿತಿಯಲ್ಲಿದ್ದಾರೆ. ಕೆಂಬಟ್ಟಿಯರು ಕೆಲವರು ಪರಿಶಿಷ್ಟ ಜಾತಿಯ ಒಳಪಂಗಡವಾದ ಆದಿಕರ್ನಾಟಕ ಮೀಸಲಾತಿಯನ್ನು ಪಡೆದುಕೊಂಡು ಅವರಿಗೆ ಸಿಗಬಹುದಾದ ಎಲ್ಲಾ ಸೌಲಭ್ಯಗಳನ್ನು ಪಡೆದುಕೊಂಡಿದ್ದರೆ. ಕೆಲವರು ಮಾತ್ರ ತಮ್ಮ ಕುಲದ ಸಂಸ್ಕೃತಿಯನ್ನು ತ್ಯಜಿಸಿ ಬೇರೊಂದು ಜಾತಿಯೊಳಗೆ ಸೇರಬೇಕಾಗುತ್ತದೆಯೆಂಬ ಆತಂಕದಲ್ಲಿದ್ದಾರೆ.

೧೯೯೩ರಲ್ಲಿ ಪ್ರಕಟಗೊಂಡ 'ಕೆಂಬಟ್ಟಿ ಹೊಲೆಯರ ಸಂಸ್ಕೃತಿ' ಕೃತಿಯಲ್ಲಿ ಕೆಂಬಟ್ಟಿಯರಲ್ಲಿ ಆಗಿರಬಹುದಾದ ಸಾಮಾಜಿಕ ಪರಿವರ್ತನೆಗಳನ್ನು ಗುರುತಿಸಲಾಗಿದೆ. ಈ ಸಮುದಾಯದಲ್ಲಿ 'ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳಲ್ಲಿ ಮೊದಲ ದರ್ಜೆಯ ಇಬ್ಬರು ಅಧಿಕಾರಿಗಳಿದ್ದಾರೆ. ಅರಣ್ಯ ಇಲಾಖೆಯಲ್ಲಿ ಫಾರೆಸ್ಟರ್, ಗಾರ್ಡ್, ಹೆಲ್ಪರ್, ಟೈಪಿಸ್ಟ್, ಪೋಲಿಸ್, ಗುಮಾಸ್ತ, ಶಿಕ್ಷಕ, ಫ್ಯಾಕ್ಟರಿ ಕೆಲಸಗಾರ, ಜವಾನ, ನರ್ಸ್, ಲೈನ್‌ಮನ್ ಮುಂತಾದ ಹುದ್ದೆಗಳಲ್ಲಿರುವವರಿದ್ದಾರೆ. ಅಲ್ಲದೆ ಸೈನ್ಯದಲ್ಲಿ ೪೦ ಜನ ಸಿಪಾಯಿಗಳಾಗಿ ಕೆಲಸ ಮಾಡಿದ್ದಾರೆ, ಅನೇಕರು ನಿವೃತ್ತರಾಗಿದ್ದಾರೆ'[೬] ಎಂಬ ವಿವರ ತಿಳಿದುಬರುತ್ತದೆ. ಅಧ್ಯಯನದ ದೃಷ್ಟಿಯಿಂದ ಕ್ಷೇತ್ರಕಾರ್ಯ ಕೈಗೊಂಡಾಗ ಸೇನೆಯಲ್ಲಿ ಹದಿನೇಳು ವರ್ಷ ಸೇವೆ ಸಲ್ಲಿಸಿ ಸ್ವಯಂ ನಿವೃತ್ತಿ ಪಡೆದಿರುವ ಒಬ್ಬರನ್ನು ಮತ್ತು ಇವರೊಂದಿಗೆ ಗುಮಾಸ್ತ ಹುದೆಯಲ್ಲಿರುವ ಮತ್ತೊಬ್ಬರನ್ನೂ ಬೇಟಿ ಮಾಡಿ ಸಂದರ್ಶನ ಮಾಡುವುದರ ಮೂಲಕ ಕೆಂಬಟ್ಟಿಯರಲ್ಲಿ ಆಗಿರುವ ಸಾಮಾಜಿಕ, ಶೈಕ್ಷಣಿಕ, ಔದ್ಯೋಗಿಕ ಬದಲಾವಣೆಗಳನ್ನು ಕಂಡುಕೊಳ್ಳಲಾಗಿದೆ.

ಆದರೆ ಕೆಂಬಟ್ಟಿಯರಲ್ಲಿ ಎಲ್ಲರೂ ಸಾಮಾಜಿಕವಾದ ಪ್ರಗತಿಯನ್ನು ಹೊಂದಿದ್ದಾರೆ ಎಂದು ಹೇಳಲು ಸಾಧ್ಯವಾಗದೇ ಹೋದರೂ ಕೆಲವರು ರಾಜಕೀಯ ಮತ್ತು ಶೈಕ್ಷಣಿಕ ಪ್ರಭಾವದಿಂದ ತಮ್ಮ ಬದುಕನ್ನು ಬದಲಾವಣೆಯ ದಿಕ್ಕಿಗೆ ಕೊಂಡೊಯ್ಯುವ ಪ್ರಯತ್ನ ಮಾಡಿದ್ದಾರೆ ಎನ್ನಬಹುದು. ಕೆಲವರು ಇಂದೂ ಕೂಡ ಹಣಕಾಸಿನ ಸಮಸ್ಯೆಯಿಂದಾಗಿ ಓದನ್ನು ಅರ್ಧಕ್ಕೇ ನಿಲ್ಲಿಸಿ ಅಂಗಡಿಯಲ್ಲಿ, ಗ್ಯಾರೇಜುಗಳಲ್ಲಿ ಯಾವುದಾದರು ಸಣ್ಣ ಕೆಲಸಕ್ಕೆ ಸೇರಿಕೊಂಡು ದುಡಿಯುತ್ತಿದ್ದಾರೆ. ಮುಂದೊಂದು ದಿನ ಇಡೀ ಸಮುದಾಯ ಮುಖ್ಯವಾಹಿನಿಗೆ ಬರುವ ಸಾಧ್ಯತೆಗಳನ್ನು ಅಲ್ಲಗಳೆಯುವಂತಿಲ್ಲ.

ಕೆಲವು ಕೆಂಬಟ್ಟಿ ಸಮುದಾಯದವರು ಉತ್ತಮ ಮನೆಯನ್ನು ಕಟ್ಟಿಕೊಂಡಿದ್ದರೆ ಕೆಲವರು ಸಾಧಾರಣ ಮನೆಗಳನ್ನು ಮಾಡಿಕೊಂಡಿದ್ದಾರೆ. ಮದುವೆಗಳನ್ನು ಇವರೂ ಸಹ ಕಲ್ಯಾಣ ಮಂಟಪಗಳಲ್ಲಿಯೇ ತಮ್ಮ ಶಕ್ತ್ಯಾನುಸಾರ ಮಾಡುತ್ತಿದ್ದಾರೆ. ಆದರೆ ಹಳೆಯ ಸಂಪ್ರದಾಯಗಳನ್ನು ಅನುಸರಿಸುತ್ತಿದ್ದಾರೆ. ಇವರು ಕೊಡಗಿನಲ್ಲಿ ಬಿಟ್ಟರೆ ಇತರ ಯಾವ ಭಾಗದಲ್ಲಿಯೂ ಕಂಡುಬರುವುದಿಲ್ಲವಾದುದರಿಂದ ಇವರು ಕೊಡಗಿನ ವ್ಯಾಪ್ತಿಯಲ್ಲಿಯೇ ಮದುವೆಯಾಗುತ್ತಾರೆ.

ಎಲ್ಲಾ ಸಮುದಾಯದಲ್ಲೂ ಅನೇಕ ಪ್ರತಿಭಾವಂತರಿರುತ್ತಾರೆ. ಆದರೆ ಅಂತಹವರಿಗೆ ಉತ್ತಮ ಮಾರ್ಗದರ್ಶನ ಮತ್ತು ಪ್ರೋತ್ಸಾಹ ದೊರೆಯದೆ ಹಾಗೇ ಕಮರಿ ಹೋಗುವ ಸಾಧ್ಯತೆಗಳಿರುತ್ತವೆ. ಸರ್ಕಾರ ಸಾಮಾಜಿಕವಾಗಿ ಹಿಂದುಳಿದಿರುವವರಿಗೆ ತಮ್ಮ ಸ್ವಾವಲಂಬಿ ಬದುಕನ್ನು ಕಟ್ಟಿಕೊಳ್ಳುವಂತೆ ಅನೇಕ ಕ್ರಿಯಾಶೀಲ ಯೋಜನೆಗಳನ್ನು ಜಾರಿಗೆ ತಂದು ಎಷ್ಟೋ ಜನರ ಬದುಕಿಗೆ ಆಸರೆಯಾಗಿರುವುದು ತಿಳಿದಿರುವ ವಿಷಯ. ಆದರೆ ಈ ಯೋಜನೆಗಳನ್ನು ಸದುಪಯೋಗಪಡಿಸಿಕೊಳ್ಳಬೇಕಾದುದು ಫಲಾನುಭವಿಗಳು. ಸರ್ಕಾರಗಳು ನೀಡಿದ ಸೈಕಲ್ ಗಳಾಗಲಿ, ಅಕ್ಕಿಯನ್ನಾಗಲಿ ತಾವು ಬಳಸಿಕೊಳ್ಳದೆ ಅದನ್ನು ಮತ್ತೊಬ್ಬರಿಗೆ ಮಾರಾಟ ಮಾಡಿ

ಪ್ರತಿಯಾಗಿ ಹಣ ಪಡೆದುಕೊಳ್ಳುವಂತದ್ದನ್ನು ಗಮನಿಸಿದ್ದೇವೆ. ಕೆಲವೊಮ್ಮೆ ಇಂತಹ ಯೋಜನೆಗಳು ಫಲಾನುಭವಿಗಳನ್ನು ತಲುಪುವುದೇ ಇಲ್ಲ.

ನಗರೀಕರಣದ ಪ್ರಭಾವಕ್ಕೊಳಗಾಗಿರುವ ಈ ಜನರು ತಮ್ಮ ಹೆಸರುಗಳಲ್ಲಿಯೂ ಹೊಸತನವನ್ನು ರೂಢಿಸಿಕೊಂಡಿದ್ದಾರೆ. ಮೊದಲೆಲ್ಲಾ ಅಯ್ಯು, ಚೆಂಗು, ಮಾರ, ಕೊಟ್ಟ, ಮಂದ, ಸೋಮ, ಬೆಳ್ಳಿ, ಸುಬ್ಬ ಮೊದಲಾದ ಎರಡಕ್ಷರದ ಹೆಸರುಗಳಿರುತ್ತಿದ್ದವು. ಕ್ರಮೇಣ ಗೌರವದಿಂದ ಕರೆಸಿಕೊಳ್ಳುವ ಸಲುವಾಗಿ ಕರಿಯ, ಅಚ್ಚಪ್ಪ, ನಂಜಪ್ಪ, ಸೋಮಯ್ಯ, ಭೀಮಯ್ಯ ಎಂಬಂತಹ ಮೂರಕ್ಷರದ ಹೆಸರುಗಳು ಕಾಣಿಸಿಕೊಳ್ಳುತ್ತವೆ. ಇತ್ತೀಚೆಗೆ ರಾಜೇಶ್, ಹರೀಶ್, ದಿನೇಶ್, ಶರತ್, ರಮೇಶ್, ಉದಯಕುಮಾರ್, ಭರತ್, ವಿನೋದ್ ಮೊದಲಾದ ಆಧುನಿಕ ಹೆಸರುಗಳು ಕೇಳಿಬರುತ್ತಿವೆ. ಹೆಣ್ಣು ಮಕ್ಕಳ ವಿಚಾರದಲ್ಲಿಯೂ ಇದೇ ಅನುಸರಣೆಯನ್ನು ಗಮನಿಸಬಹುದು. ಇವುಗಳೆಲ್ಲಾ ಪರಿವರ್ತನೆಯ ಸಂಕೇತವೆಂದು ಗುರುತಿಸಬಹುದು. ಈ ಹೆಸರುಗಳೊಂದಿಗೆ ತಮ್ಮ ಮನೆತನದ ಹೆಸರುಗಳನ್ನು ಬಳಸಿಕೊಳ್ಳುತ್ತಿದ್ದಾರೆ.

ಅಮ್ಮ ಕೊಡವರಂತೆ ನಾವೂ ಕೆಂಬಟ್ಟಿ ಕೊಡವರು ಎಂದು ಹೇಳಿಕೊಳ್ಳುವ ಇವರು ಇಂದು ತಮ್ಮನ್ನು ಕೊಡವ ಸಮುದಾಯದ ಒಂದು ಪಂಗಡವಾಗಿ ಗುರುತಿಸುವಂತೆ ಹೋರಾಟವನ್ನು ಬಲಗೊಳಿಸುತ್ತಿದ್ದಾರೆ. ಕೊಡಗಿನ ಯಾವುದೇ ಆಚರಣೆಗೂ ಕೆಂಬಟ್ಟಿ, ಮೇದ ಮತ್ತು ಕಣಿಯರು ಇರಲೇಬೇಕು. ಇವರುಗಳ ತಯಾರಿಸಿದ ವಸ್ತುಗಳಿಂದಲೇ ಕೆಲವು ಹಬ್ಬಗಳು ನಡೆಯುವುದು ಎಂಬುದು ಇವರ ಇಂದಿನ ವಾದವಾಗಿದೆ. ನಾವು ಬೇರೆಲ್ಲಿಂದಲೋ ಬಂದಿದ್ದರೆ ಅಲ್ಲಿಯೂ ನಮ್ಮ ಕುಲ ಇರಲೇಬೇಕಾಗಿತ್ತು. ಆದರೆ ಎಲ್ಲಿಯೂ ಇಲ್ಲ. ಹಾಗಾಗಿ ನಾವೇ ಇಲ್ಲಿನ ಮೂಲನಿವಾಸಿಗಳು ಎಂಬುದು ಇವರ ತರ್ಕವಾಗಿದೆ.

**ಬುಡಕಟ್ಟು ಜನಾಂಗ**

ಅರಣ್ಯ ಸಂಸ್ಕೃತಿ ನಾಶವಾಗಲು ಸ್ಥಳೀಯರು ಮತ್ತು ಆಕ್ರಮಣಕಾರರು ಮೂಲ ಕಾರಣ ರಾಗುತ್ತಾರೆ. ದಟ್ಟ ಅರಣ್ಯ ಪ್ರದೇಶಗಳು ಉಳ್ಳವರ ಆಸೆಗಳಿಗೆ ಬಲಿಯಾಗಿ ಕಾಫಿ ಹಾಗೂ ಚಹಾ ತೋಟಗಳಾಗಿ ಪರಿವರ್ತನೆಯಾದವು. ಇಂತಹ ಸಂದರ್ಭದಲ್ಲಿ ಕಾಡನ್ನೇ ತಮ್ಮ ವಾಸದ ನೆಲೆಯಾಗಿಸಿಕೊಂಡ ನೂರಾರು ಬುಡಕಟ್ಟು ಕುಟುಂಬಗಳ ಸಾಂಸ್ಕೃತಿಕ ಬದುಕು ಒತ್ತಾಯ ಪೂರ್ವಕವಾಗಿ ಪತನಗೊಳ್ಳಲು ಕಾರಣವಾಯಿತು. ಕೊಡಗಿನ ವೀರಾಜಪೇಟೆ ತಾಲೂಕಿನ ದಿಡ್ಡಳ್ಳಿ ಎಂಬ ಪ್ರದೇಶದಲ್ಲಿ ಇತ್ತೀಚೆಗೆ ಅರಣ್ಯದಲ್ಲಿ ಗುಡಿಸಲು ಕಟ್ಟಿಕೊಂಡು ವಾಸಿಸುತ್ತಿದ್ದ ಆದಿವಾಸಿಗಳನ್ನು ಜಿಲ್ಲಾಡಳಿತ ಒಕ್ಕಲೆಬ್ಬಿಸುವ ಕೆಲಸ ಪ್ರಾರಂಭಿಸಿದಾಗ ಅದನ್ನು ಪ್ರತಿಭಟಿಸಲಾಯ್ತು. ಇವರುಗಳಲ್ಲಿ ಎರವರೇ ಅಧಿಕವಾಗಿರುವುದು ಗಮನಿಸಬೇಕಾದ ಅಂಶ. ಕಾಡನ್ನೇ ತಮ್ಮ ನೆಲೆಯಾಗಿಸಿಕೊಂಡವರಿಗೆ ಇದ್ದಕ್ಕಿದ್ದಂತೆ ಅವರನ್ನು ಅರಣ್ಯದಿಂದ ಸ್ಥಳಾಂತರಿಸಿದರೆ ಅವರ ಬದುಕನ್ನೇ ಕಿತ್ತೊಗೆದಂತಾಗುತ್ತದೆ. ಆದರೂ ಇವರಿಗೆ ಜಿಲ್ಲೆಯ ಬೇರೆ ಬೇರೆ ಪ್ರದೇಶಗಳಲ್ಲಿ ವಸತಿ

ವ್ಯವಸ್ಥೆಯನ್ನು ಮಾಡಿಕೊಡಲಾಗುತ್ತಿದೆ. ಮೂಲದಿಂದ ಅಲ್ಲಿಯೇ ನೆಲೆ ಕಟ್ಟಿಕೊಂಡಿರುವ ಆದಿವಾಸಿಗಳನ್ನು ಅಲ್ಲಿಯೇ ವಾಸಿಸಲು ಅನುವು ಮಾಡಿಕೊಡಲಾಗಿದೆ.

ಆಧುನಿಕತೆಯ ಪ್ರಭಾವದಿಂದ ಎಲ್ಲರಿಗೂ ಶಿಕ್ಷಣ ದೊರೆಯುವಂತಾಗಿದೆ. ಒಬ್ಬ ಮನುಷ್ಯನ ಬದುಕಿನಲ್ಲಿ ಶಿಕ್ಷಣ ಪ್ರಮುಖ ಪಾತ್ರವಹಿಸುತ್ತದೆ. ಅವನಲ್ಲಿ ಸಾಂಸ್ಕೃತಿಕ ಅರಿವು ರೂಪುಗೊಳ್ಳುವುದೂ ಇದರಿಂದಲೇ. ಆದುದರಿಂದ ವ್ಯಕ್ತಿಯೊಬ್ಬ ತನ್ನ ಜೀವನ ಕ್ರಮದಲ್ಲಿ, ಸಾಮಾಜಿಕ ಸಂಬಂಧಗಳಲ್ಲಿ ಬದಲಾವಣೆಯನ್ನು ಕಂಡುಕೊಳ್ಳುವ ಪ್ರಯತ್ನ ಮಾಡುತ್ತಾನೆ. ಆಧುನಿಕ ಶಿಕ್ಷಣ ವಿಧಾನ, ವೈಚಾರಿಕತೆ ಮತ್ತು ಸಾಮಾಜಿಕ ಸ್ಥಿತಿಗತಿಯನ್ನು ಉತ್ತಮ ಪಡಿಸಿಕೊಳ್ಳಲು ಸಹಕಾರಿಯಾಗುತ್ತದೆ. ಕೂಲಿ ಕೆಲಸಕ್ಕೆ ಜನರಿರುವುದಿಲ್ಲ ಎಂಬ ಕಾರಣಕ್ಕೆ ಅವರನ್ನು ಶಿಕ್ಷಣದಿಂದ ದೂರವೇ ಇಡಲಾಗಿತ್ತು.

ತಳ ಸಮುದಾಯದವರಿಗೆ ಶಿಕ್ಷಣ ದೊರೆತರೆ ಆಗಬಹುದಾದ ನಷ್ಟದ ಲೆಕ್ಕಾಚಾರ ಇಂದು ನಿನ್ನೆಯದಲ್ಲ. 'ಅವನು ಪಣಿಯರ ಮತ್ತು ಕುರುಬರ ಮಕ್ಕಳಿಗೆ ಒಂದು ಶಾಲೆಯನ್ನು ತೆರೆಯುತ್ತಾನಂತೆ. ಅವರಿಗೆಲ್ಲ ಸರ್ಕಾರದಿಂದ ಜಮೀನು ಕೊಡಿಸಿ ಬೇಸಾಯಕ್ಕೆ ಹಚ್ಚುತ್ತಾನಂತೆ. ಆಮೇಲೆ ನಮ್ಮ ನಿಮ್ಮ ತೋಟಗಳಿಗೆ ಗೇಯಲು ಜನವೆಲ್ಲಿ ಸಿಕ್ಕಿಯಾರು?[೭] ಎಂಬ ಆತಂಕವೂ ಇವರು ಶೈಕ್ಷಣಿಕವಾಗಿ ಹಿಂದುಳಿಯಲು ಕಾರಣವಾಯ್ತು. ಬಹಳ ಹಿಂದೆಯೇ ಎದುರಾಗುತ್ತದೆ ಎಂದು ಭಾವಿಸಿದ್ದ ಆತಂಕ ಪ್ರಸ್ತುತ ಸನ್ನಿವೇಶದಲ್ಲಿ ನಿಜವಾಗಿರುವುದು ಕಂಡುಬರುತ್ತಿದೆ. ಕೊಡಗಿನಲ್ಲಿ ಕೃಷಿ ಮತ್ತಿತರ ಚಟುವಟಿಕೆಗಳಿಗೆ ಕಾರ್ಮಿಕರ ಕೊರತೆ ಅಧಿಕವಾಗಿದೆ. ಹಾಗಾಗಿ ಇಲ್ಲಿನ ಭೂಮಾಲಿಕರು ಅನ್ಯ ರಾಜ್ಯದ ಕಾರ್ಮಿಕರನ್ನು ಅವಲಂಬಿಸಬೇಕಾಗಿ ಬಂದಿದೆ.

ಈ ರೀತಿಯ ಹಿಂದುಳಿಕೆ ಮತ್ತು ಇವರ ಮೇಲಾಗುತ್ತಿದ್ದ ಶೋಷಣೆಗಳಿಗೆ ಉತ್ತರ ಕೊಡಬಲ್ಲ ಮಾರ್ಗವೆಂದರೆ ಅದು ಶಿಕ್ಷಣವೊಂದೇ ಎಂಬುದನ್ನು ಅರಿತ ಪ್ರಗತಿಪರ ಚಿಂತಕರು, ಸಂಘ ಸಂಸ್ಥೆಗಳು, ಸರಕಾರ ಮುಂದಾಗಿ ಅವರ ಬಾಳಲ್ಲಿ ಬೆಳಕು ಮೂಡುವಂತೆ ಮಾಡಿರುವ ಹಲವಾರು ನಿದರ್ಶನಗಳಿವೆ. 'ಕಾಡು ಮೇಡುಗಳಲ್ಲಿ ವಾಸಿಸುವ ಈ ಜನರ ಮಕ್ಕಳಿಗೆ ಓದು ಬರಹಗಳನ್ನು ಕಲಿಸಿ ಮುಂದಿನ ಪೀಳಿಗೆಯವರನ್ನಾದರೂ ಸ್ವಾವಲಂಬಿಗಳನ್ನಾಗಿ ಮಾಡೋಣ ಎಂದು ನನ್ನ ಆಲೋಚನೆ. ಅವರಿಗೆ ಓದು ಬರಹಗಳನ್ನು ಕಲಿಸಿ ವಿದ್ಯಾವಂತರನ್ನಾಗಿ ಮಾಡುವುದಕ್ಕಿಂತ ಅವರಿಗೆ ಹೆಂಚಿನ ಮನೆಗಳನ್ನು ಕಟ್ಟಿಸಿಕೊಡುವುದರಲ್ಲಿ ಸರ್ಕಾರಕ್ಕೆ ಉತ್ಸಾಹ ಹೆಚ್ಚು. ಮೊದಲು ಅವರಿಗೆ ವಿದ್ಯೆಯನ್ನು ಒದಗಿಸಿ ವಿವೇಕಿಗಳನ್ನಾಗಿ ಮಾಡದಿದ್ದರೆ ಅವರು ಕಟ್ಟಿಸಿಕೊಟ್ಟ ಮನೆಯ ಹೆಂಚುಗಳನ್ನು ಕಿತ್ತುಕೊಂಡು ಹೋಗಿ ಮಾರುವರು. ಬಾವಿಯ ಕಲ್ಲುಗಳನ್ನು ತಂದು ತಮ್ಮ ಗುಡಿಸಲ ಮೆಟ್ಟಿಲುಗಳಿಗಾಗಿ ಬಳಸುವರು'[೮] ಎಂಬುದು ಬುಡಕಟ್ಟುವಾಸಿಗಳಿಗೆ ಬೇಕಾದ ಶಿಕ್ಷಣದ ಪ್ರಾಮುಖ್ಯತೆ ಮತ್ತು ಅದರಿಂದಾಗುವ ಪ್ರಯೋಜನವನ್ನು ಕುರಿತು ಶ್ರೀಧರನ್ ನಾಯರ್ ಎಂಬ ಪ್ರಗತಿಪರನ ಮಾತುಗಳು ಇಂದಿಗೂ ಪ್ರಸ್ತುತವೆನಿಸುತ್ತವೆ. 'ಈ ಮಕ್ಕಳಿಗೆ ಪಾಠ ಮಾಡುವವರು ಕೇವಲ ಸಂಬಳಕ್ಕಾಗಿ ದುಡಿಯದೆ ಅವರ ಸ್ವಾವಲಂಬಿ

ಬದುಕಿನ ಕನಸುಗಳನ್ನು ಕಟ್ಟಿಕೊಡಬಲ್ಲ ಮನೋಧರ್ಮದವರಾಗಬೇಕು" ಎಂಬ ಮಾತು ಈ ವರ್ಗದ ಜನರ ಬಗ್ಗೆ ಕಾಳಜಿ ಮತ್ತು ಇವರ ಔನ್ನತ್ಯಕ್ಕೆ ಸಾಕ್ಷಿಯಂತಿದೆ. ಶತಮಾನದ ಹಿಂದೆಯೇ ದಕ್ಷಿಣ ಕನ್ನಡ ಜಿಲ್ಲೆಯ ಅಸ್ಪೃಶ್ಯ ಜನಾಂಗದ ಉನ್ನತಿಗಾಗಿ ಪ್ರೋತ್ಸಾಹ ಧನದೊಂದಿಗೆ ಉಚಿತ ಶಿಕ್ಷಣ, ವೃತ್ತಿ ತರಬೇತಿ ನೀಡಿ, ಅವರನ್ನು ಸ್ವಾವಲಂಬಿಗಳನ್ನಾಗಿಸಲು ಶ್ರಮಿಸಿದ ಕುದ್ಮಲ್ ರಂಗರಾವ್ ಅವರು ಶೈಕ್ಷಣಿಕ ಮತ್ತು ಸಾಮಾಜಿಕ ಕ್ರಾಂತಿಗೆ ಜೀವಂತ ಸಾಕ್ಷಿಯಾಗಿದ್ದಾರೆ.

ಕೊಡಗಿನ ಅನೇಕ ಹಾಡಿಗಳಲ್ಲಿ ಪ್ರಾಥಮಿಕ ಶಾಲೆಗಳನ್ನು ತೆರೆಯಲಾಗಿದೆ. ವಿರಾಜಪೇಟೆ ತಾಲೂಕಿನ ತಿತಿಮತಿ ಎಂಬಲ್ಲಿ 'ಗಿರಿಜನರ ಆಶ್ರಮ ಶಾಲೆ' ತೆರೆಯಲಾಗಿದೆ. ಸರ್ವ ಶಿಕ್ಷಣ ಅಭಿಯಾನದ ಕಡ್ಡಾಯ ಶಿಕ್ಷಣ ಯೋಜನೆಯ ಕಾರಣದಿಂದಾಗಿ ಬುಡಕಟ್ಟು ಸಮುದಾಯದ ಬಹುಪಾಲು ಮಕ್ಕಳು ಶಿಕ್ಷಣ ಪಡೆಯುತ್ತಿದ್ದಾರೆ. ಈ ಕಾರಣದಿಂದಲೂ ಇಲ್ಲಿನ ಬುಡಕಟ್ಟು ಜನಾಂಗಗಳಲ್ಲಿ ಸಾಮಾಜಿಕ ಬದಲಾವಣೆ ಉಂಟಾಗಲು ಸಾಧ್ಯವಾಗಿದೆ. ಹುಣಸೂರಿನಲ್ಲಿರುವ 'ಸಮಗ್ರ ಗಿರಿಜನ ಅಭಿವೃದ್ಧಿ ಸಂಸ್ಥೆ' ಇವರ ಸರ್ವಾಂಗೀಣ ಬೆಳವಣಿಗೆಗೆ ದುಡಿಯುತ್ತಿದೆ.

**ಜೇನುಕುರುಬರು:** ಸರ್ಕಾರದ ವತಿಯಿಂದ ಅನೇಕ ಯೋಜನೆಗಳು ಇವರನ್ನು ತಲುಪುತ್ತಿವೆ. ಆದರೂ ಅವುಗಳ ಪ್ರಯೋಜನದಿಂದ ಉತ್ತಮ ಸ್ಥಿತಿಗೆ ಬರುವ ಪ್ರಯತ್ನದಲ್ಲಿ ಇಡೀ ಸಮುದಾಯವಿಲ್ಲ. ಕೆಲವು ಮಂದಿ ಇವುಗಳ ಸವಲತ್ತಿನಿಂದ ಸಾಮಾಜಿಕವಾಗಿ ಉತ್ತಮ ಹಂತವನ್ನು ತಲುಪಿರುವ ನಿದರ್ಶನಗಳಿವೆ. ಜೆ. ಕೆ. ರಾಮು ಎಂಬುವವರು ಪ್ರಸ್ತುತ 'ಬುಡಕಟ್ಟು ಕೃಷಿಕರ ವಿವಿದೋದ್ದೇಶ ಸಹಕಾರಿ ಸಂಘದ' ಅಧ್ಯಕ್ಷರಾಗಿ, ಮುತ್ತ ಎಂಬುವವರು ನಿರ್ದೇಶಕರಾಗಿ, ಪ್ರಕಾಶ್ ಎಂಬುವವರು ತಾಲೂಕು ಪಂಚಾಯತ್ ಸದಸ್ಯರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ಹಾಡಿಗಳಲ್ಲಿಯೇ ಇಂದಿಗೂ ವಾಸ ಮಾಡುತ್ತಿರುವ ಇವರಿಗೆ ಸರ್ಕಾರ ಅವರವರ ಹಾಡಿಗಳಲ್ಲಿಯೇ ಶಾಲೆಗಳನ್ನು ತೆರೆದು ಶಿಕ್ಷಣಕ್ಕೆ ಅವಕಾಶ ಮಾಡಿಕೊಟ್ಟಿದೆ. ಅದರ ಉಪಯೋಗವನ್ನು ಇಲ್ಲಿನ ಮಕ್ಕಳು ಪಡೆದುಕೊಳ್ಳುತ್ತಿದ್ದಾರೆ. ಆದರೂ ಉನ್ನತ ವಿದ್ಯಾಭ್ಯಾಸ ಇವರಲ್ಲಿ ಬಹಳ ಕಡಿಮೆಯೆಂದೇ ಹೇಳಬಹುದು. ಎರಡು-ಮೂರು ಜನರು ಮಾತ್ರ ಪದವಿಯನ್ನು ಗಳಿಸುರುವವರೂ ಇದ್ದಾರೆ. ಬಹಳ ಅಪರೂಪಕ್ಕೆ ಒಂದು ಹುಡುಗಿ ಮಾತ್ರ ಸ್ನಾತಕೋತ್ತರ ಪದವಿ ಮುಗಿಸಿ ಪ್ರಸ್ತುತ ಬಿ. ಎಡ್. ಪದವಿಯನ್ನು ಅಧ್ಯಯನ ಮಾಡುತ್ತಿರುವುದು ತಿಳಿದು ಬರುತ್ತದೆ.

ಸಹಕಾರಿ ಸಂಘಗಳ ಮೂಲಕ ಇವರ ಆರ್ಥಿಕ ಸ್ಥಿತಿಗತಿಯನ್ನು ಉತ್ತಮ ಪಡಿಸುವ ಕೆಲಸವನ್ನು ಮಾಡಲಾಗುತ್ತಿದೆ. ಕಾಡಿನಲ್ಲೇ ಸಿಗುವ ಜೇನು, ಮರದಲ್ಲಿರುವ ಪಾಚಿಯನ್ನು, (ಮರಪಾಚಿ) ಸೀಗೆಕಾಯಿ ಮೊದಲಾದವುಗಳನ್ನು ಕಿತ್ತುತಂದು ಕೊಡುವುದು ಇವರ ಇಂದಿನ ಕಾಯಕವಾಗಿದೆ. ಮರಪಾಚಿಯನ್ನು ವಿದೇಶಗಳಲ್ಲಿ ಸಾಂಬಾರು ಪದಾರ್ಥವಾಗಿ ಬಳಸಲಾಗುತ್ತಿದೆ. ಇದಕ್ಕೆ ಪ್ರತಿಯಾಗಿ ಹಣ ಪಡೆಯುತ್ತಾರೆ. ಅದರಲ್ಲೂ ಮರಪಾಚಿಗೆ ಕಿಲೋ ಒಂದಕ್ಕೆ ೨೫೦ರಿಂದ

೩೦೦ ರೂಗಳವರೆಗೆ ಹಣ ಸಿಗುತ್ತಿದೆ. ಇದರಿಂದ ಇವರ ಜೀವನ ನಿರ್ವಹಣೆಯಾಗುತ್ತಿದೆ. ಒಂದು ವರ್ಷದಲ್ಲಿ ಸುಮಾರು ಆರು ಸಾವಿರ ಕೆ. ಜಿ. ಯಷ್ಟು ಮರಪಾಚಿಯನ್ನು ಕಿತ್ತುತಂದು ಮಾರಾಟ ಮಾಡಿರುವುದು ದಾಖಲಾಗಿದೆ. ತಿತಿಮತಿಯಲ್ಲಿ ೧೯೭೭ರಿಂದಲೇ ವಿವಿದೋದ್ದೇಶ ಸಹಕಾರ ಸಂಘವಿದ್ದು ಇತ್ತೀಚೆಗೆ ಇದು ಹೆಚ್ಚಾಗಿ ಜನರನ್ನು ಸೆಳೆದು ಅವರ ಆರ್ಥಿಕ ಸಬಲೀಕರಣಕ್ಕೆ ಪೂರಕವಾಗಿದೆ. ಇಷ್ಟೆಲ್ಲಾ ಅವಕಾಶಗಳಿದ್ದರೂ ಬಂದ ಹಣವನ್ನು ಮದ್ಯಪಾನ ಮಾಡುವುದಕ್ಕೆ ಬಳಸುವುದು ಇವರಿಗೆ ಅಭ್ಯಾಸವಾಗಿದೆ.

ಸರ್ಕಾರಿ ಕೆಲಸಗಳಲ್ಲಿ ಹೆಚ್ಚಾಗಿ ಇವರು ಕಾಣಿಸಿಕೊಂಡಿಲ್ಲ. ಕಾರಣ ಶಿಕ್ಷಣವನ್ನು ಅರ್ಧದಲ್ಲೇ ಮೊಟಕುಗೊಳಿಸುವುದು ಇವರಿಗೆ ರೂಢಿಯಾಗಿಬಿಟ್ಟಿದೆ. ಪದವಿ ಅಧ್ಯಯನ ಮಾಡಿದವರೂ ಸರ್ಕಾರಿ ಹುದ್ದೆಗಳನ್ನು ಬಯಸದೆ ಕೂಲಿ ಕೆಲಸ ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ. ಒಂದು ವೇಳೆ ಯಾವುದಾದರೂ ಸರ್ಕಾರಿ ಕೆಲಸಗಳಲ್ಲಿದ್ದಾರೆಂದರೆ ಅದು ಹಾಡಿಗಳಲ್ಲಿರುವ ಅಂಗನವಾಡಿ ಕಾರ್ಯಕರ್ತೆಯರಾಗಿರುವುದು. ಇನ್ನು ಮೈಸೂರು ದಸರಾ ಜಂಬೂ ಸವಾರಿಗೆ ತೆರಳುವ ಮಾವುತರನ್ನು ಸರ್ಕಾರ ನೇಮಕ ಮಾಡಿ ಅವರಿಗೆ ತಿಂಗಳ ಸಂಬಳ ನೀಡುತ್ತಿದೆ. ಆದರೆ ಎಲ್ಲರನ್ನೂ ಖಾಯಂ ಮಾಡಿಕೊಂಡಿಲ್ಲ. ಇನ್ನೂ ಕೆಲವರು ಖಾಯಂ ಮಾಡಿಕೊಳ್ಳುವಂತೆ ಮನವಿ ಸಲ್ಲಿಸುತ್ತಲೇ ಇದ್ದಾರೆ.

ಜೇನುಕುರುಬರ ಇಂದಿನ ಮಹತ್ವದ ಬದಲಾವಣೆಯೆಂದರೆ ಪ್ರತಿ ಕುಟುಂಬವೂ ಸ್ವಂತ ಜಮೀನನ್ನು ಹೊಂದಿರುವುದು. ಸುಮಾರು ಒಂದರಿಂದ ಐದು ಎಕರೆಯಷ್ಟು ಅರಣ್ಯ ಭೂಮಿಯನ್ನು ಇವರ ಕೃಷಿಗಾಗಿ ಸರ್ಕಾರ ಮಂಜೂರು ಮಾಡಿದೆ. ಇದರಲ್ಲಿ ತಮ್ಮ ಆಹಾರಕ್ಕಾಗುವಷ್ಟು ಬತ್ತವನ್ನು ಬೆಳೆಯುತ್ತಿದ್ದಾರೆ. ಕೆಲವರು ಕಾಫಿ ತೋಟವನ್ನೂ ಮಾಡಿಕೊಂಡಿದ್ದಾರೆ.

ಸಾಮಾಜಿಕವಾಗಿ ಪರಿವರ್ತನೆಗೊಂಡಿರುವ ಜೇನುಕುರುಬರು ನಾಗರಿಕತೆಯೊಂದಿಗೆ ಬೆರೆತಿದ್ದಾರೆ. ದಸರಾ ಪ್ರಯುಕ್ತ ಮೈಸೂರು ನಗರಕ್ಕೆ ಆನೆಗಳ ಜೊತೆಯಲ್ಲಿಯೇ ಆಗಮಿಸುವ ಇವರು ನಗರದ ಆಕರ್ಷಣೆಗೊಳಗಾಗಿದ್ದಾರೆ ಎಂದು ಹೇಳಬಹುದು. ಸುಮಾರು ಒಂದೂವರೆ ತಿಂಗಳುಗಳ ಕಾಲ ತಮ್ಮ ಕುಟುಂಬದೊಂದಿಗೆ ಮೈಸೂರು ನಗರಕ್ಕೆ ಆಗಮಿಸುವ ಇವರಿಗೆ ಉತ್ತಮವಾದ ವಸತಿ ಹಾಗೂ ಊಟದ ವ್ಯವಸ್ಥೆಯನ್ನು ಮಾಡಲಾಗುತ್ತದೆ. ಅಲ್ಲದೆ ಇವರೊಂದಿಗೆ ಬಂದ ಇವರ ಮಕ್ಕಳಿಗಾಗಿ ಅರಮನೆಯ ಆವರಣದಲ್ಲಿಯೇ ತಾತ್ಕಾಲಿಕ ಶಾಲೆಯನ್ನು ತೆರೆದು ಅನುಕೂಲ ಮಾಡಿಕೊಡಲಾಗುತ್ತದೆ. ಜಂಬೂಸವಾರಿ ನಡೆಸಲು ಇವರ ನೆರವು ತೀರಾ ಅಗತ್ಯವಾಗಿರುವುದರಿಂದ ಪ್ರತಿ ವರ್ಷ ಮೈಸೂರಿಗೆ ಆಗಮಿಸುತ್ತಾರೆ. ಅಲ್ಲದೆ ತಮ್ಮ ವಾಸಸ್ಥಳದ ಹತ್ತಿರದ ಪಟ್ಟಣಗಳಿಗೂ ಆಗಾಗ ಬೇಟಿ ನೀಡುತ್ತಾ ನಿಧಾನವಾಗಿ ಮುಖ್ಯ ವಾಹಿನಿಗೆ ಬರುವ ಪ್ರಯತ್ನ ಮಾಡುತ್ತಿದ್ದಾರೆ.

ಕರ್ನಾಟಕದ ಖಾಸಗಿ ದೃಶ್ಯ ಮಾಧ್ಯಮವೊಂದು ನಡೆಸಿದ 'ರಿಯಾಲಿಟಿ ಶೊ' ದಲ್ಲಿ ಕೊಡಗಿನಲ್ಲಿ ವಾಸಿಸುತ್ತಿರುವ ಜೇನುಕುರುಬ ಸಮುದಾಯದ ಸೋಮ, ಮುತ್ತ ಮೊದಲಾದ ಹುಡುಗರು ನಗರದವರೊಂದಿಗೆ ಸ್ಪರ್ಧಿಗಳಾಗಿ ಭಾಗವಹಿಸಿದ್ದನ್ನು ಇಲ್ಲಿ ನೆನೆಯಬಹುದು. ಇದಲ್ಲದೆ ಇತ್ತೀಚೆಗೆ ಸರ್ಕಾರಿ ಹಾಗೂ ಖಾಸಗಿ ಶಾಲಾಕಾಲೇಜುಗಳಲ್ಲಿ ಜೇನುಕುರುಬರು ತಮ್ಮ ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸುತ್ತಿರುವುದು ಸಾಮಾನ್ಯವಾಗಿದೆ. ಕಾಲಕಳೆದಂತೆ ಪ್ರತಿಯೊಂದು ಸಮುದಾಯವೂ ಪರಿವರ್ತನೆಯಾಗುವಂತೆ ಹಂತಹಂತವಾಗಿ ಇವರೂ ಸಹ ಬದಲಾಗುತ್ತಿರುವುದು ಆಧುನಿಕತೆ ಮತ್ತು ಜಾಗತೀಕರಣದ ಸೂಚನೆಯಂತಿದೆ.

ಜೇನುಕುರುಬರ ಮತ್ತೊಂದು ಬಹುದೊಡ್ಡ ಸ್ಥಿತ್ಯಂತರವೆಂದರೆ ಮತಾಂತರ ಗೊಳ್ಳುತ್ತಿರುವುದು. ಇತ್ತೀಚೆಗೆ ಇಲ್ಲಿನ ಬಹುಪಾಲು ಜನ ಕ್ರೈಸ್ತಧರ್ಮಕ್ಕೆ ಮತಾಂತರಗೊಳ್ಳುತ್ತಿದ್ದಾರೆ. ಅಕ್ಷರ ಜ್ಞಾನವೂ ಇಲ್ಲದ, ಮತಾಂತರದಿಂದ ಆಗುವ ಅನುಕೂಲ ಮತ್ತು ಅನಾನುಕೂಲಗಳ ಅರಿವೇ ಇಲ್ಲದ ಈ ಜನಸಮುದಾಯ ತಮ್ಮದಲ್ಲದ ಧರ್ಮದ ಆಕರ್ಷಣೆಗೊಳಗಾಗಿರುವುದು ದುರಂತವೆನಿಸುತ್ತದೆ. ನಮ್ಮ ರಾಜ್ಯದಲ್ಲಿ ಕ್ಷುಲ್ಲಕ ಕಾರಣಕ್ಕಾಗಿ ಹಲವಾರು ಪ್ರತಿಭಟನೆ, ಹೋರಾಟ, ನೈತಿಕ ಪೋಲಿಸ್‌ಗಿರಿ ನಡೆಯುತ್ತಿವೆ. ಆದರೆ ಅಕ್ಷರ ಜ್ಞಾನವೇ ಇಲ್ಲದ ಮುಗ್ಧ ಜೇನುಕುರುಬ ಸಮೂಹ ಮತಾಂತರಕ್ಕೆ ಒಳಗಾಗುತ್ತಿರುವುದನ್ನು ತಡೆಯುವವರೇ ಇಲ್ಲದಂತಾಗಿದೆ. ಪಕ್ಕದ ತಾಲೂಕಾದ ಹುಣಸೂರು ಪಟ್ಟಣಕ್ಕೆ ಹೋಗಿ ಚರ್ಚ್‌ನಲ್ಲಿ ಪ್ರಾರ್ಥನೆ ಸಲ್ಲಿಸಿ ಬರುವುದು ಇವರಿಗೆ ಪ್ರಿಯವಾದ ವಿಷಯವಾಗಿರುವುದು ತಿಳಿದುಬರುತ್ತದೆ.

ಇಂದು ಸಂಪರ್ಕ ಮಾಧ್ಯಮಗಳಿಂದಾಗಿ ದೂರದ ಪ್ರದೇಶಗಳೆಲ್ಲ ತುಂಬಾ ಹತ್ತಿರವೆನಿಸುತ್ತಿವೆ. ಇದು ಜೇನುಕುರುಬರ ಬದುಕಿನಲ್ಲಿಯೂ ಕಾಣಿಸಿಕೊಳ್ಳುತ್ತಿದೆ. ಎಸ್ಟೇಟ್, ಹಾಡಿಗಳಲ್ಲಿಯೇ ಬದುಕು ಸವೆಸುತ್ತಿದ್ದ ಇವರು ಹೊರಜಗತ್ತಿಗೆ ಕಾಲಿಡುವಂತಾಗಿದೆ. ತಮ್ಮಲ್ಲಿರುವ ಅದ್ಭುತ ಕಲಾ ಪ್ರತಿಭೆಯಿಂದಾಗಿ ಅನೇಕ ಸಮಾರಂಭಗಳಲ್ಲಿ ತಮ್ಮ ನೃತ್ಯ, ಹಾಡುಗಳನ್ನು ಪ್ರದರ್ಶಿಸುತ್ತಿದ್ದಾರೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಮೊದಲಾದ ಇಲಾಖೆಗಳು ಏರ್ಪಡಿಸುವ ಜನಪದ ಸಮಾರಂಭಗಳಲ್ಲಿ ಇವರ ಕಲಾಪ್ರದರ್ಶನಕ್ಕೆ ವೇದಿಕೆ ದೊರೆಯುತ್ತಿದೆ. ದೇಶದ ಅನೇಕ ರಾಜ್ಯಗಳಲ್ಲಿ ನಡೆಯುವ ಜನಪದ ಕಲೆಗಳಲ್ಲಿ ಗೀಜಗನ ನೃತ್ಯ ಪ್ರದರ್ಶನವಾಗಿದೆ. ಇದಲ್ಲದೆ ಜರ್ಮನಿಯಲ್ಲಿ ನಡೆದ ಜನಪದ ಉತ್ಸವದಲ್ಲೂ ಭಾಗಿಯಾಗಿದ್ದು ಜೇನು ಕುರಿತು ಹಾಡಿರುತ್ತಾರೆ.

**ಎರವರು:** ಕೆಂಬಟ್ಟಿಯರಂತೆ ಎರವರು ಸಾಮಾಜಿಕ ಪರಿವರ್ತನೆಯ ಹಾದಿಯಲ್ಲಿದ್ದು ಹೊಸ ಬದುಕನ್ನು ಕಟ್ಟಿಕೊಳ್ಳುವ ತವಕದಲ್ಲಿದ್ದಾರೆ. ಇದರ ಆರಂಭ ಅವರು ತಮ್ಮದೇ ಸ್ವಂತ ಜಮೀನನ್ನು ಹೊಂದಬೇಕೆಂಬ ಆಸೆಯ ಮೂಲಕ ಕಾಣುತ್ತದೆ.

"ಶಿಕ್ಷಣ ಪಡೆದುಕೊಂಡಿರುವ ಕೆಲವು ಎರವರು ಅರಣ್ಯ ಇಲಾಖೆ, ಕಾಫಿ ಮಂಡಳಿ ಮುಂತಾದ ಇಲಾಖೆಗಳಲ್ಲಿ ನೌಕರಿ ಮಾಡುತ್ತಿದ್ದಾರೆ. ಇವರ ಸಂಖ್ಯೆ ನೂರನ್ನೂ ಮುಟ್ಟಲಾರದು.

ಇವರಲ್ಲಿ ಬಹುಮಂದಿ ನಾಲ್ಕನೆಯ ದರ್ಜೆಯ ನೌಕರರು, ಒಂದಿಬ್ಬರು ಮಾತ್ರ ಮೂರನೇ ದರ್ಜೆಯ ನೌಕರರಾಗಿದ್ದಾರೆ. ಪ್ರಥಮ ದರ್ಜೆಯಲ್ಲಿ ಒಬ್ಬರೂ ಇಲ್ಲ".[೧೦] ಇದು ಸುಮಾರು ಇಪ್ಪತ್ತೈದು ವರ್ಷಗಳ ಹಿಂದೆ ಪ್ರಕಟಗೊಂಡ ಕೃತಿಯೊಳಗಿನ ಮಾಹಿತಿ. ಇಷ್ಟು ಹಿಂದೆಯೇ ಸರ್ಕಾರಿ ನೌಕರರಾಗಿ ಕೆಲಸ ಮಾಡಬೇಕೆಂಬ ಮನಸ್ಸು ಮಾಡಿರುವುದು ಎರವರ ಸಾಮಾಜಿಕ ಕ್ರಾಂತಿಗೆ ಪೂರಕವಾದುದು. ಎರವರು ಅರಣ್ಯ ಮತ್ತು ಕೃಷಿ ಕ್ಷೇತ್ರಗಳನ್ನು ಹೆಚ್ಚಾಗಿ ನಂಬಿಕೊಂಡಿರುವುದರಿಂದ ಉನ್ನತ ಶಿಕ್ಷಣ ಪಡೆಯುವುದರಲ್ಲಿ ಹಿಂದೆ ಬಿದ್ದಿದ್ದಾರೆ ಎನ್ನಲಾಗಿದೆ.

ಪ್ರಸ್ತುತ ಎರವರು ತಮ್ಮ ಮೂಲ ಸ್ಥಿತಿಯಿಂದ ಹೊರಬಂದು ಇಲ್ಲಿನ ಜೇನುಕುರುಬ ಸಮುದಾಯಕ್ಕಿಂತ ಉತ್ತಮವಾದ ವಾತಾವರಣವನ್ನು ನಿರ್ಮಿಸಿಕೊಂಡು ಬದುಕುತ್ತಿದ್ದಾರೆ. ಹಿಂದೆ ಗಂಡಸರು ಸೊಂಟದಿಂದ ಮೊಣಕಾಲುಗಳವರೆಗೆ ಲುಂಗಿಯಂತಹ ಬಟ್ಟೆಯನ್ನೂ, ಸೊಂಟದ ಮೇಲೆ ಅಂಗಿಯನ್ನೂ ಧರಿಸುತ್ತಿದ್ದರು. ಆದರೆ ಇಂದು ಇವರ ವೇಷಭೂಷಣಗಳಲ್ಲಿ ಬದಲಾವಣೆಯಾಗಿ ಶರ್ಟು, ಪ್ಯಾಂಟುಗಳನ್ನು ಧರಿಸಿದರೆ, ಹೆಣ್ಣು ಮಕ್ಕಳು ಚೂಡಿದಾರಗಳನ್ನು ತೊಡುತ್ತಿದ್ದಾರೆ. ನಗರಗಳಿಗೆ ದಿನನಿತ್ಯ ಹೋಗಿ ಬರುವವರಿದ್ದಾರೆ. ಎಲ್ಲರ ಕೈಯಲ್ಲೂ ಮೊಬೈಲ್‌ಗಳು ಬಂದಿವೆ. ಎಲ್ಲರಿಗೂ ಸರ್ಕಾರದಿಂದ ಹೆಂಚಿನ ಮನೆಗಳನ್ನು ಕಟ್ಟಿಕೊಡಲಾಗಿದೆ. ಜೊತೆಗೆ ಕೃಷಿ ಜಮೀನುಗಳನ್ನು ಮಂಜೂರು ಮಾಡಲಾಗಿದೆ. ಹಾಡಿಗಳಲ್ಲಿ ಪ್ರಾಥಮಿಕ ಶಾಲೆಗಳನ್ನು ತೆರೆಯಲಾಗಿದೆ. ಕೆಲವು ಎರವರು ತಮ್ಮ ಮಕ್ಕಳನ್ನು ಮಡಿಕೇರಿಯ ಪ್ರತಿಷ್ಠಿತ ಶಾಲೆಗಳಿಗೆ ಸೇರಿಸಿ ಇಂಗ್ಲಿಷ್ ಮಾಧ್ಯಮ ಶಿಕ್ಷಣ ಕೊಡಿಸುತ್ತಿದ್ದಾರೆ. ಈಗಾಗಲೇ ಶಿಕ್ಷಣ ಪಡೆದ ಅನೇಕ ಮಹಿಳೆಯರು ಅಂಗನವಾಡಿ ಕೇಂದ್ರಗಳ ಶಿಕ್ಷಕಿಯರಾಗಿ ನೇಮಕಗೊಂಡಿದ್ದರೆ ಕೆಲವರು ಸ್ಟಾಫ್ ನರ್ಸ್‌ಗಳಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಎರವ ಯುವಕರು ಸರ್ಕಾರಿ ಹುದ್ದೆಗಳಲ್ಲಿರುವುದು ಬಹಳ ಕಡಿಮೆಯೆಂದು ತಿಳಿದುಬರುತ್ತದೆ. ಯುವಕರಲ್ಲಿ ಕೂಲಿಕಾರ್ಮಿಕರೇ ಹೆಚ್ಚಾಗಿದ್ದಾರೆ. ಇವರ ಸಮುದಾಯದಲ್ಲಿ ಹಿಂದೆ ಹತ್ತನೇ ತರಗತಿಯನ್ನು ಓದಿ ಪೋಲಿಸ್ ಕೆಲಸಕ್ಕೆ ಸೇರಿದ್ದವರು ಬಡ್ತಿ ಹೊಂದಿ ಇತ್ತೀಚೆಗೆ ಎಸ್. ಐ. ಆಗಿ ನಿವೃತ್ತರಾಗಿದ್ದಾರೆ. ಪ್ರಸ್ತುತ ಮಡಿಕೇರಿಯಲ್ಲಿ ಪಶುವೈದ್ಯರಾಗಿ ಬೆಳ್ಳಿ ಎಂಬುವವರು ಸೇವೆಯಲ್ಲಿದ್ದಾರೆ.

ಮೊದಲು ತಾವೇ ಹುಲ್ಲಿನಿಂದ ಕಟ್ಟಿಕೊಳ್ಳುತ್ತಿದ್ದ ಗುಡಿಸಲುಗಳು ಅಪರೂಪವಾಗಿ ಸರ್ಕಾರದಿಂದ ಕಟ್ಟಿಕೊಡುತ್ತಿರುವ ಹೆಂಚಿನ ಮನೆಗಳು ಕಾಣಿಸುತ್ತಿವೆ. ಅಪರೂಪಕ್ಕೊಂದು ಹಳೆಯ ಗುಡಿಸಲುಗಳು ಇಂದಿಗೂ ಇದ್ದು ಇವುಗಳ ಮೇಲೆ ಹುಲ್ಲಿನ ಬದಲು ಟಾರ್ಪಾಲು ಮುಚ್ಚಲಾಗಿದೆ. ಮೂಲ ಹೆಸರುಗಳು ಇಂದು ಮರೆಯಾಗಿ ನೂತನ ಹೆಸರುಗಳು ಕಾಣಿಸುತ್ತಿವೆ. ಮನೆಯಲ್ಲಿ ಸಾಂಪ್ರದಾಯಿಕವಾಗಿ ಹಿಂದಿನ ಹೆಸರನ್ನು ಇಟ್ಟಿದ್ದರೂ ಶಾಲೆಗಳಿಗೆ ಸೇರಿಸುವಾಗ ಆಧುನಿಕ ಹೆಸರುಗಳಾದ ಕಾರುಣ್ಯ, ಕಾವ್ಯ, ದೀಕ್ಷಿತ್ ಪ್ರಜ್ವಲ್, ಸುದರ್ಶನ್ ಮೊದಲಾದ ಹೆಸರುಗಳು ಚಾಲ್ತಿಯಲ್ಲಿವೆ. ಈ ಹೆಸರುಗಳು ಒಮ್ಮೊಮ್ಮೆ ಅವರ ತಂದೆ ತಾಯಂದಿರಿಗೇ ಉಚ್ಚರಿಸಲು ಕಷ್ಟವಾಗುತ್ತಿರುವುದೂ ಉಂಟು.

ಹಾಡಿಗಳಲ್ಲೇ ನಡೆಯುತಿದ್ದ ಇವರ ವಿವಾಹಗಳು ಇಂದು ಅದ್ದೂರಿಯಾಗಿ ನಗರದ ಕಲ್ಯಾಣ ಮಂಟಪಗಳಲ್ಲಿ ನಡೆಯುತ್ತಿವೆ. ಮದುವೆ ಖರ್ಚನ್ನು ವಧು ಮತ್ತು ವರನ ಕಡೆಯವರು ಒಟ್ಟಾಗಿ ಭರಿಸುತ್ತಿದ್ದಾರೆ. ಇದರಿಂದ ಒಂದು ಕಡೆಯವರಿಗೆ ಆಗುತ್ತಿದ್ದ ಹೊರೆಯನ್ನು ಕಡಿಮೆ ಮಾಡಿಕೊಳ್ಳಲಾಗಿದೆ. ಮದುವೆಗಳಲ್ಲಿ ಮಾಂಸಾಹರವೇ ಇವರ ಪ್ರಮುಖ ಆಹಾರವಾಗಿದ್ದು ಮಾಂಸಕ್ಕಾಗಿ ಕೋಳಿಯನ್ನು ಮಾತ್ರ ಬಳಸುತ್ತಾರೆ. ಹಂದಿ ಮಾಂಸವನ್ನು ದೂರ ಮಾಡಿಕೊಂಡಿದ್ದಾರೆ.

ಎರವರು ಜನಸಂಖ್ಯಾ ನಿಯಂತ್ರಣ ವಿಧಾನವನ್ನು ಅನುಸರಿಸುತ್ತಿರುವುದು ಇವರ ಜೀವನ ಕ್ರಮ ಬದಲಾಗುತ್ತಿರುವುದಕ್ಕೆ ಸಾಕ್ಷಿಯಾದಂತಿದೆ. ಮೊದಲು ಗರ್ಭ ಧರಿಸದಂತಿರಲು ಶಸ್ತ್ರಚಿಕಿತ್ಸೆಯ ಪರಿಚಯವಿರಲಿಲ್ಲ. ಈಗ ಹಾಡಿಯಲ್ಲಿ ಹೆಣ್ಣೊಬ್ಬಳು ಗರ್ಭಿಣಿಯಾದರೆ ಆ ಭಾಗದ ಆರೋಗ್ಯ ಕಾರ್ಯಕರ್ತೆಗೆ ಗೊತ್ತಾಗಿ ಅವಳು ಈಕೆಯ ಹೆಸರನ್ನು ನೊಂದಾಯಿಸಿಕೊಳ್ಳುತ್ತಾಳೆ. ಅವಳಿಗೆ ಬೇಕಾದ ಪೌಷ್ಠಿಕ ಆಹಾರವನ್ನು ಒದಗಿಸಿ ಮಗುವಿನ ಆರೈಕೆ ಕುರಿತು ಮಾಹಿತಿ ನೀಡುತ್ತಾಳೆ. ಸರಿಯಾದ ಸಮಯಕ್ಕೆ ಆಕೆಯನ್ನು ಆಸ್ಪತ್ರೆಗೆ ಕೊಂಡೊಯ್ದು ಅತ್ಯಂತ ಸುರಕ್ಷಿತ ಹೆರಿಗೆಯಾಗಲು ಸಹಕರಿಸುತ್ತಾಳೆ. ಹಿಂದಿನ ಕಾಲದಂತೆ ಕೆಲಸಕ್ಕೆ ಹೋದ ಸ್ಥಳದಲ್ಲಿಯೇ ಮಕ್ಕಳಿಗೆ ಜನ್ಮ ನೀಡುವುದು ಇಂದಿನ ಎರವರ ಯಾವ ಹಾಡಿಗಳಲ್ಲಿಯೂ ಇಲ್ಲ. ಇಂದು ಆಸ್ಪತ್ರೆಗಳಲ್ಲಿಯೇ ಹೆರಿಗೆಯಾಗುತ್ತಿರುವುದರಿಂದ ಹೆರಿಗೆ ಸಮಯದಲ್ಲಾಗಬಹುದಾದ ಅನೇಕ ತೊಡಕುಗಳಿಂದ ಮುಕ್ತರಾಗಿದ್ದಾರೆ. ಹಾಗಾಗಿ ಗರ್ಭಿಣಿಯರ ಸಾವಿನ ಸಂಖ್ಯೆಯೂ ಕಡಿಮೆಯಾಗಿದೆ. ಆದುದರಿಂದ ಮರಣ ಹೊಂದಿದ ಗರ್ಭಿಣಿಯರ ಹೊಟ್ಟೆಯಿಂದ ಭ್ರೂಣ ಹೊರತೆಗೆದು ಹೂಳುವ ಪದ್ಧತಿ ಮರೆಯಾಗಿದೆ.

ಹಾಡಿಗಳ ಜನರು ನೀರಿಗೆ ಭಾವಿಯನ್ನೋ ಅಥವಾ ಹರಿಯುವ ತೋಡುಗಳನ್ನೋ ಆಶ್ರಯಿಸಿ ಜೀವನ ನಡೆಸುತ್ತಿದ್ದರು. ಆದರೆ ಇಂದು ಆ ನೀರಿನ ಮೂಲಗಳೇ ಬತ್ತಿಹೋಗಿ ಅರಣ್ಯವಾಸಿಗಳೂ ನೀರಿನ ಬವಣೆಯನ್ನು ಅನುಭವಿಸಬೇಕಾಗಿ ಬಂದಿದೆ. ಸರ್ಕಾರ ಇವರ ಸಮಸ್ಯೆಯನ್ನು ಅರಿತು ಹಾಡಿಗಳಲ್ಲಿ ಕೊಳವೆ ಬಾವಿಗಳನ್ನು ಕೊರೆಸಿ ಕೊಟ್ಟಿದೆ.

**ಪ್ರತ್ಯೇಕ ಕೊಡಗು ರಾಜ್ಯದ ಕೂಗು:** ಎರಡು ಶತಮಾನಗಳವರೆಗೆ ಕೊಡಗು ಹಾಲೇರಿ ಅರಸರ ನಿಯಂತ್ರಣದಲ್ಲಿದ್ದು ೧೮೩೪ರ ನಂತರ ಬ್ರಿಟೀಷರ ಆಡಳಿತಕ್ಕೊಳಪಟ್ಟಿತು. ಆನಂತರ ೧೯೪೭ರಲ್ಲಿ ಈ ಪ್ರದೇಶ ಬ್ರಿಟೀಷರ ಅಧಿಕಾರದಿಂದ ಮುಕ್ತವಾದರೂ ೧೯೫೬ರವರೆಗೂ ಕರ್ನಾಟಕ ರಾಜ್ಯದೊಳಗೆ ಸೇರದೆ ತನ್ನ ಸ್ವಂತಿಕೆಯನ್ನು ಉಳಿಸಿಕೊಂಡಿತ್ತು. ೧೯೫೨ರಿಂದ ೧೯೫೬ರವರೆಗೆ ಕೊಡಗು ಪ್ರಾಂತ್ಯದ ಆಡಳಿತವನ್ನು ನಿರ್ವಹಿಸಲು ಮುಖ್ಯಮಂತ್ರಿ ಹಾಗೂ ಸಚಿವ ಸಂಪುಟವನ್ನು ಚುನಾಯಿಸಿ ಪ್ರತ್ಯೇಕ ರಾಜ್ಯವಾಗಿ ಕಾರ್ಯನಿರ್ವಹಿಸಲು ಅವಕಾಶ ಮಾಡಿಕೊಡಲಾಯ್ತು. ಭಾಷಾವಾರು ಪ್ರಾಂತ್ಯಗಳ ರಚನೆಯ ಸಮಯದಲ್ಲಿ ಅಂದರೆ ೧೯೫೬ರಲ್ಲಿ ಕರ್ನಾಟಕ ಪ್ರಾಂತ್ಯದೊಳಗೆ ಕೊಡಗನ್ನು ವಿಲೀನಗೊಳಿಸಲಾಯ್ತು.

ಹೀಗೆ ಪ್ರತ್ಯೇಕ ರಾಜ್ಯವನ್ನು ಹೊಂದಿ ಅಧಿಕಾರವನ್ನು ಅನುಭವಿಸಿದ್ದ ಕೊಡವ ಸಮುದಾಯಕ್ಕೆ ಕೊಡಗನ್ನು ಮತ್ತೆ ಕರ್ನಾಟಕದಿಂದ ಬೇರ್ಪಡಿಸಿ ಸ್ವತಂತ್ರ ರಾಜ್ಯವಾಗಿಸಿಕೊಳ್ಳಬೇಕೆಂಬ ಆಲೋಚನೆ ಬರುತ್ತದೆ. ಇದರ ಫಲವಾಗಿ ಕೊಡಗಿನಲ್ಲಿ 'ಕೊಡಗು ರಾಜ್ಯ ಮುಕ್ತಿ ಮೋರ್ಚಾ'(ಕೆಆರ್ಎಂಎಂ) ಎಂಬ ಹೆಸರಿನ ಸಂಘಟನೆಯ ಮೂಲಕ ಪ್ರತ್ಯೇಕ ಕೊಡಗು ರಾಜ್ಯದ ಕೂಗು ಆರಂಭವಾಗುತ್ತದೆ. "೧೯೯೭ ಅಗಸ್ಟ್ ೩೦ರಂದು ರಾಷ್ಟ್ರಪತಿ ಮತ್ತು ಪ್ರಧಾನ ಮಂತ್ರಿಗಳಿಗೂ ಪ್ರತ್ಯೇಕವಾಗಿ ಮನವಿ ಸಲ್ಲಿಸಲಾಯ್ತು"[೧೧] ಮುಂದುವರೆದು ವಿಶ್ವಸಂಸ್ಥೆಗೂ ಮನವಿ ಸಲ್ಲಿಸಲಾಯ್ತು. ಆದರೆ ಯಾವ ಕಡೆಯಿಂದಲೂ ಪೂರಕವಾದ ಪ್ರತಿಕ್ರಿಯೆಗಳು ಬರಲಿಲ್ಲ.

೧೯೫೬ಕ್ಕಿಂತ ಮೊದಲು ಕೊಡಗು ಸುಖೀ ರಾಜ್ಯವಾಗಿತ್ತು ಮತ್ತು ಸರ್ಕಾರಕ್ಕೆ ಕೊಡಗಿನಿಂದ ಅಧಿಕ ತೆರಿಗೆ ಸಂದಾಯವಾಗುತ್ತಿತ್ತು ಎಂಬುದು 'ಕೆಆರ್ಎಂಎಂ' ಹೋರಾಟಗಾರರ ವಾದವಾಗಿದೆ. ಇಷ್ಟು ವರ್ಷಗಳು ನಿರಂತರವಾಗಿ ಹೋರಾಟ ನಡೆದರೂ ಇದಕ್ಕೆ ಪ್ರತಿಯಾಗಿ ಕೊಡಗು ಪ್ರತ್ಯೇಕ ರಾಜ್ಯವಾಗುವುದು ಇಂದಿನ ಸಂದರ್ಭದಲ್ಲಿ ಸಾಧ್ಯವಿಲ್ಲವೆಂಬುದನ್ನು ಮನಗಂಡ ಇಲ್ಲಿನವರು ಹೋರಾಟದ ಸ್ವರೂಪವನ್ನು ಬದಲು ಮಾಡಿಕೊಂಡಿದ್ದಾರೆ. ಪ್ರತ್ಯೇಕ ರಾಜ್ಯದ ಬೇಡಿಕೆಯನ್ನು ಕೈಬಿಟ್ಟು ಕೊಡಗನ್ನು ಕೇಂದ್ರಾಡಳಿತ ಪ್ರದೇಶವನ್ನಾಗಿ ಘೋಷಿಸಬೇಕು ಎಂಬ ಹೊಸ ಅಹವಾಲನ್ನು ಮುಂದಿಟ್ಟುಕೊಂಡು 'ಕೊಡವ ನ್ಯಾಷನಲ್ಸ್ ಕೌನ್ಸಿಲ್' ಸ್ಥಾಪಿಸಿ ಹೋರಾಟ ನಡೆಸುತ್ತಿದ್ದಾರೆ. ಪ್ರತಿ ವರ್ಷ ನವೆಂಬರ್ ೧ರಂದು ನವದೆಹಲಿಯ ಜಂತರ್‌ಮಂತರ್‌ನಲ್ಲಿ ಕೊಡಗನ್ನು ಕೇಂದ್ರಾಡಳಿತ ಪ್ರದೇಶವಾಗಿ ಘೋಷಿಸಬೇಕೆಂದು 'ನವದೆಹಲಿ ಚಲೋ' ಸತ್ಯಾಗ್ರಹವನ್ನು ನಡೆಸುತ್ತಿದ್ದಾರೆ. ಹಿಂದುಳಿದಿರುವ ಕೊಡಗನ್ನು ಆರ್ಥಿಕವಾಗಿ ಅಭಿವೃದ್ಧಿಪಡಿಸಬೇಕು. ಜಾರ್ಖಂಡ್, ಬೋಡೋಲ್ಯಾಂಡ್, ಗೂರ್ಖಾಲ್ಯಾಂಡ್‌ಗಳಂತೆ ಕೊಡಗಿಗೆ ಸ್ವಾಯತ್ತತೆ ನೀಡಬೇಕು. ಮುಖ್ಯವಾಗಿ "ಸಂವಿಧಾನದ ೩೪೦ ಮತ್ತು ೩೪೨ನೇ ವಿಧಿ ಪ್ರಕಾರ ಕ್ಷಾತ್ರಬುಡಕಟ್ಟು ಜನಾಂಗದ ಸ್ಥಾನಮಾನವನ್ನು ಕೊಡವರಿಗೆ ನೀಡಬೇಕು ಮತ್ತು ಕೊಡಗು ಅಭಿವೃದ್ಧಿ ಮಂಡಳಿಯನ್ನು ರಚಿಸುವ ಮೂಲಕ ಕೊಡಗಿನ ಸರ್ವಾಂಗೀಣ ಉನ್ನತಿಗೆ ಕಾಯಕ್ರಮಗಳನ್ನು ರೂಪಿಸಬೇಕು ಎಂದು ಕೇಂದ್ರ ಸರ್ಕಾರವನ್ನು ಒತ್ತಾಯಿಸುತ್ತಿದ್ದಾರೆ."[೧೨] ಕೊಡಗಿನ ಹಿಂದುಳಿದ, ದಲಿತರ, ಶೋಷಿತರ, ದುಡಿಯುವ ಸಮುದಾಯಗಳ ಅಭಿವೃದ್ಧಿಯನ್ನು ಮುಂದಿಟ್ಟುಕೊಳ್ಳದೆ ಕೇವಲ 'ಕೊಡವ' ಜನಾಂಗವನ್ನು ಕೇಂದ್ರವಾಗಿಟ್ಟುಕೊಂಡು ಭಾಷಿಕ ಪ್ರತ್ಯೇಕತೆಯನ್ನು ನಿರೀಕ್ಷಿಸುತ್ತಿರುವುದು ಇತ್ತೀಚಿನ ಹೊರಾಟಕ್ಕೆ ಹಿನ್ನಡೆಯೆನ್ನಬಹುದು. ಕೊಡಗು ಪ್ರತ್ಯೇಕ ರಾಜ್ಯದ ಕೂಗು ಕೇವಲ 'ಕೊಡವ'ರ ಕೂಗಾಗಿದೆಯೇ ವಿನ: 'ಕೊಡಗ'ರ ಕೂಗಲ್ಲದಿರುವುದನ್ನು ಗಮನಿಸಬೇಕು. ಕೊಡವರಲ್ಲಿ ಕೆಲವರು ಈ ಹೋರಾಟದ ಪರ ಮತ್ತು ವಿರೋಧವಾಗಿ ಪ್ರತಿಕ್ರಿಯಿಸುತ್ತಿರುವುದನ್ನೂ ಗಮನಿಸಲಾಗಿದೆ. ಯಾವುದೇ ಹೊರಾಟದ ಹಿಂದೆ ಒಂದು ಸ್ಪಷ್ಟತೆಯಿರಬೇಕಾದುದು ಅಗತ್ಯ. ಆದರೆ ಪ್ರತ್ಯೇಕ ಕೊಡಗು ರಾಜ್ಯದ ಕೂಗಿನಲ್ಲಿ ಇದು ಇಲ್ಲವೆಂಬುದು ಇಲ್ಲಿನ ಕೆಲವು ಸ್ಥಳೀಯರ ಅಭಿಪ್ರಾಯವಾಗಿದೆ.

ಇತ್ತೀಚೆಗೆ ಕೊಡಗಿನಲ್ಲಿ 'ಕೊಡವ'ರ ಸಂಖ್ಯೆ ಕಡಿಮೆಯಾಗುತ್ತಿದೆ. ಉನ್ನತ ವ್ಯಾಸಂಗ, ಉದ್ಯೋಗ, ವ್ಯಾಪಾರ ಮೊದಲಾದ ಕಾರಣಗಳಿಂದಾಗಿ ಕೆಲವರು ತಮ್ಮ ಜಿಲ್ಲೆಯಿಂದ ದೂರವಾಗುತ್ತಿದ್ದಾರೆ. ಲೋಕಸಭೆಯಲ್ಲಿ ಕೊಡಗಿನ ಅಭಿವೃದ್ಧಿ ಕುರಿತು ಮಾತನಾಡಲು ಯಾರೂ ಕೊಡವ ಜನಾಂಗದ ಸಂಸದರಿಲ್ಲವೆಂಬುದು ಮತ್ತೊಂದು ಕೊರತೆಯಾಗಿದೆ. ಹೀಗೆ ಆದಲ್ಲಿ ಮುಂದೊಂದು ದಿನ ಇಲ್ಲಿ ಕೊಡವರ ಅಸ್ತಿತ್ವವೇ ಇಲ್ಲದಂತಾಗುವ ಆತಂಕ ಇಂದಿನ ಹೋರಾಟಗಾರರಲ್ಲಿರುವುದು ಕಂಡುಬರುತ್ತಿದೆ. ಆ ಕಾರಣಕ್ಕಾಗಿ ಕೊಡಗಿಗೆ ಕನಿಷ್ಠ ವಿಶೇಷ ಪ್ಯಾಕೇಜನ್ನಾದರೂ ಪಡೆಯಬೇಕು ಎಂಬಲ್ಲಿಯವರೆಗೆ ಈ ಹೋರಾಟ ಬಂದು ನಿಂತಿದೆ.

೧೯೫೬ರ ಹಿಂದಿನ ರಾಜಕೀಯ ಸನ್ನಿವೇಶಗಳೇ ಬೇರೆಯಾಗಿದ್ದರಿಂದ ಕೊಡಗನ್ನು ಪ್ರತ್ಯೇಕ ರಾಜ್ಯವಾಗಿ ನಿರ್ಮಾಣ ಮಾಡಲಾಗಿತ್ತು. ಆದರೆ ಇಂದಿನ ರಾಜಕೀಯ ಸನ್ನಿವೇಶಗಳು ವ್ಯಾಪಕವಾದ ಬದಲಾವಣೆಗೆ ಒಳಗಾಗಿವೆ. ಹೀಗಿರುವಾಗ ಕೊಡಗನ್ನೇನಾದರೂ ರಾಜ್ಯವನ್ನಾಗಿ ಅಥವಾ ಕೇಂದ್ರಾಡಳಿತ ಪ್ರದೇಶವಾಗಿ ಘೋಷಿಸಿದರೆ ಈ ವಿಚಾರವನ್ನೇ ಅಸ್ತ್ರವಾಗಿಟ್ಟುಕೊಂಡು ದೇಶಾದ್ಯಂತ ಪ್ರತ್ಯೇಕ ರಾಜ್ಯದ ಕೂಗು ಆರಂಭವಾಗುತ್ತದೆ. ಇದರಿಂದ ಸಮಸ್ಯೆಗಳು ಮತ್ತಷ್ಟೂ ಹೆಚ್ಚಾಗುತ್ತವೆ.

ಕೊಡಗು ಕರ್ನಾಟಕದ ಒಂದು ಭಾಗವಾಗಿ ಪ್ರಾಕೃತಿಕ ಸೌಂದರ್ಯ, ವಿಶಿಷ್ಟ ಸಂಸ್ಕೃತಿ, ಜನಾಂಗ ಮೊದಲಾದ ವಿಚಾರಗಳಿಂದ ತನ್ನದೇ ಆದ ಐಡೆಂಟಿಟಿಯನ್ನು ಹೊಂದಿರುವ ಭೂಪ್ರದೇಶ. ಇದು ಸಾಂಸ್ಕೃತಿಕವಾಗಿ, ಪ್ರಾಕೃತಿವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಹಿಂದುಳಿಯವುದು ಯಾರಿಗೂ ಒಪ್ಪಿತವಾಗದ ವಿಷಯ. ಆದರೆ ಎಲ್ಲಾ ಸಮಸ್ಯೆಗಳಿಗೂ ಪ್ರತ್ಯೇಕತೆಯೇ ಪರಿಹಾರವಾಗುವುದಿಲ್ಲ. ಕೊಡಗು ಹೋರಾಟಗಾರರ ಸಮಸ್ಯೆಗಳನ್ನು ಸರ್ಕಾರ ಆಲಿಸಿ ಕೊಡಗಿನ ಸರ್ವಾಂಗೀಣ ಅಭಿವೃದ್ಧಿಗೆ ಪೂರಕವಾದ ಅಗತ್ಯ ಕ್ರಮಗಳನ್ನು ರೂಪಿಸಿ ಅಖಂಡ ಕರ್ನಾಟಕದ ಹಿರಿಮೆಗೆ ಎಲ್ಲಿಯೂ ಒಡಕು ಬಾರದಂತೆ ಎಚ್ಚರ ವಹಿಸುವುದು ಇಂದಿನ ತುರ್ತು ಕಾರ್ಯವಾಗಬೇಕಿದೆ.

## ೬.೪. ಕೃಷಿ ಕ್ಷೇತ್ರ

ಕೈಗಾರಿಕಾ ಕ್ರಾಂತಿಯ ನಂತರದ ದಿನಗಳನ್ನು ಕೃಷಿಯ ಆಧುನಿಕ ಕಾಲಘಟ್ಟವೆಂದು ಗುರುತಿಸಿ ಹಲವಾರು ಕೃಷಿ ವಿಧಾನಗಳಲ್ಲೂ ಮಹತ್ತರ ಬದಲಾವಣೆಗಳನ್ನು ಮಾಡಿಕೊಳ್ಳಲಾಗಿದೆ. ಸಾಂಪ್ರದಾಯಿಕವಾಗಿ ಮನುಷ್ಯ ಕೆಲವು ಸಾಕು ಪ್ರಾಣಿಗಳ ಸಹಾಯದಿಂದ ತನ್ನ ಜಮೀನುಗಳಲ್ಲಿ ದುಡಿದು ಬದುಕುತ್ತಿದ್ದ ಕಾಲವೊಂದಿತ್ತು ಎಂದು ಹೇಳುವ ಸ್ಥಿತಿ ಬಂದಿದೆ. ಏಕೆಂದರೆ ಕೃಷಿಕ್ಷೇತ್ರದಲ್ಲಿ ಅಪ್ಪರಮಟ್ಟಿಗೆ ಹೊಸ ಪ್ರಯೋಗಗಳು ನಡೆದಿವೆ. ಆಧುನಿಕ ತಂತ್ರಜ್ಞಾನದ ಫಲದಿಂದಾಗಿ ನಿರೀಕ್ಷೆಗೂ ಮೀರಿ ಯಂತ್ರಗಳು ಮತ್ತು ರಾಸಾಯನಿಕ ಗೊಬ್ಬರಗಳು, ಔಷಧಿಗಳ ಬಳಕೆಯಿಂದ ಕೃಷಿಕ್ಷೇತ್ರ ಹೊಸ ದಿಕ್ಕನ್ನು ಕಂಡುಕೊಂಡಿದೆ.

ಕೈಗಾರಿಕಾ ಕ್ರಾಂತಿಯ ಕಾಲವನ್ನು ದಾಟಿ ಬಹಳ ಮುಂದೆ ಬಂದಿದ್ದೇವೆ. ಆದರೆ ಕೃಷಿ ಮಾತ್ರ ಹಿಂದೆ ಬಿದ್ದಿದೆ. ಕೃಷಿಕ್ಷೇತ್ರಕ್ಕೆ ಇಂದು ಯಂತ್ರಗಳ ವಿಸ್ತರಣೆಯಾಗಿದೆ. ಬೀಜ ಬಿತ್ತುವಿಕೆಯಿಂದ ಹಿಡಿದು ಕಟಾವು ಮಾಡಿ ಧಾನ್ಯಗಳನ್ನು ಮನೆಗೆ ತುಂಬಿಸಿಕೊಳ್ಳುವವರೆಗೂ ಯಂತ್ರಗಳೇ ಕಾರ್ಯ ನಿರ್ವಹಿಸುತ್ತಿವೆ. ಅದರೆ ಕೃಷಿಗೆ ಮನಸ್ಸು ಮಾಡುವವರು ಕಡಿಮೆಯಾಗುತ್ತಿದ್ದಾರೆ. ಈ ಮನಸ್ಥಿತಿಗೆ ಮುಖ್ಯ ಕಾರಣ ಬದಲಾದ ಹವಾಮಾನ, ಪರಿಸರ, ನಿರೀಕ್ಷಿತ ಮಳೆಯ ಕೊರತೆ, ಕೂಲಿ ಕಾರ್ಮಿಕರ ಕೊರತೆ, ಬೆಳೆಗಳಿಗೆ ಹಬ್ಬುತ್ತಿರುವ ಕ್ರಿಮಿಕೀಟಗಳ ಉಪದ್ರವ, ಕಳಪೆ ಬಿತ್ತನೆಬೀಜಗಳು, ಕಳಪೆ ರಾಸಾಯನಿಕ ಗೊಬ್ಬರ ಮತ್ತು ಔಷಧಿಗಳು. ಸಾವಯವ ಗೊಬ್ಬರದಿಂದ ದೂರವುಳಿದು ಭೂಮಿಯ ಫಲವತ್ತತೆ ಕಡಿಮೆಯಾದ್ದರಿಂದ ಇಳುವರಿಯೂ ದೊರೆಯದಂತಹ ಸ್ಥಿತಿ ನಿರ್ಮಾಣವಾಗಿದೆ.

ಕೊಡಗಿನ ಕೃಷಿ ಮುಖ್ಯವಾಗಿ ಕಾರ್ಮಿಕರನ್ನು ಅವಲಂಬಿಸಿದೆ. ಕೃಷಿ ಕಾರ್ಮಿಕರು ಎತ್ತು ಅಥವಾ ಎಮ್ಮೆಗಳನ್ನು ಬಳಸಿ ನೇಗಿಲಿನಿಂದ ಉಳುಮೆ ಮಾಡಿ ಭತ್ತ ಬಿತ್ತನೆ ಮಾಡುತ್ತಿದ್ದರು. ಗದ್ದೆಗಳಿಗೆ ಬೇಕಾಗುವಷ್ಟು ಭತ್ತದ ಬೀಜ ಬಿತ್ತನೆ ಮಾಡಿ ಬಳಿಕ ಸಸಿ ಕಿತ್ತು ಕಾರ್ಮಿಕರಿಂದ ನಾಟಿ ಮಾಡಿಸುತ್ತಿದ್ದರು. ಭತ್ತ ಸಸಿ ಬೇರು ಬಿಟ್ಟ ನಂತರ ಗದ್ದೆಯಲ್ಲಿ ಕಾರ್ಮಿಕರಿಂದಲೇ ಕಳೆ ತೆಗೆಸುತ್ತಿದ್ದರು. ನಾಟಿಗೂ ಮೊದಲು ಗದ್ದೆಗಳಿಗೆ ಮರದ ಸೊಪ್ಪು, ರಸ್ತೆ ಬದಿಯಲ್ಲಿ ಬೆಳೆದ ಹಸಿರು ಕಸಕಡ್ಡಿಗಳನ್ನು ಕಿತ್ತು ಗದ್ದೆಗೆ ಹಾಕಿ ಕರಗಿಸುತ್ತಿದ್ದರು. ಇದರೊಂದಿಗೆ ದನದ ಕೊಟ್ಟಿಗೆ ಗೊಬ್ಬರವನ್ನು ಬಳಸುತ್ತಿದ್ದರು. ಇದರಿಂದ ಗದ್ದೆಯ ಮಣ್ಣು ಫಲವತ್ತತೆಗೊಂಡು ಭತ್ತ ಸಮೃದ್ಧವಾಗಿ ಬೆಳೆಯುತ್ತಿತ್ತು. ಹಿಂದೆ ಹೆಚ್ಚಾಗಿ ಕೇಸರಿ, ದೊಡ್ಡಿ ಮೊದಲಾದ ತಳಿಯ ಭತ್ತವನ್ನು ಬೆಳೆಯುತ್ತಿದ್ದರು.

ಕೊಡಗಿನ ಮೂರು ತಾಲ್ಲೂಕುಗಳಲ್ಲಿ ವಿರಾಜಪೇಟೆ ತಾಲ್ಲೂಕನ್ನು ಭತ್ತದ ಕಣಜ ಎಂದು ಕರೆಯಲಾಗುತ್ತಿತ್ತು. ಅಷ್ಟೊಂದು ಪ್ರಮಾಣದಲ್ಲಿ ಭತ್ತ ಬೆಳೆಯಲಾಗುತ್ತಿತ್ತು. ಕಾಫಿ ತೋಟದ ನಡುವಿನ ಹಳ್ಳದ ಕಡೆ ತಿರುಗಿನೋಡಿದರೆ ಹಸಿರು ಸಮೃದ್ಧಿಯ ಭತ್ತದ ಗದ್ದೆಗಳೇ ಕಾಣಿಸಿಕೊಳ್ಳುತ್ತಿದ್ದವು. ಭತ್ತದ ನಾಟಿಯನ್ನು ಸಾಮಾನ್ಯವಾಗಿ ಸ್ಥಳೀಯ ಕಾರ್ಮಿಕರಿಂದಲೇ ಮಾಡಿಸುತ್ತಿದ್ದರು. ಆದರೆ ಕೊಯ್ಲನ್ನು ಮಾತ್ರ ಅಕ್ಕಪಕ್ಕದ ತಾಲೂಕುಗಳಾದ ಪಿರಿಯಾಪಟ್ಟಣ, ಹುಣಸೂರು, ಎಚ್. ಡಿ. ಕೋಟೆಗಳಿಂದ ಕಾರ್ಮಿಕರನ್ನು ಕರೆಸಿ ಮಾಡಿಸುತ್ತಿದ್ದರು. ಹಾಗಾಗಿ ಭತ್ತದ ಕೆಲಸದ ಸಂದರ್ಭದಲ್ಲಿ ಎಲ್ಲಿ ನೋಡಿದರೂ ಕಾರ್ಮಿಕರೇ ತುಂಬಿರುತ್ತಿದ್ದರು. ಭತ್ತದ ಒಕ್ಕಣೆ ಕೆಲಸ ಮುಗಿದ ಮೇಲೆ ಕೃಷಿಕರು ತಮಗೆ ಬೇಕಾಗುವಷ್ಟು ಭತ್ತ ಮತ್ತು ಹುಲ್ಲನ್ನು ಇಟ್ಟುಕೊಂಡು ಉಳಿದುದನ್ನು ಮಾರಾಟ ಮಾಡುತ್ತಿದ್ದರು.

ಇತ್ತ ಕಾಫಿ ತೋಟದಲ್ಲಿಯೂ ಕೂಡ ಕೆಲಸ ಕಾರ್ಮಿಕರಿಂದಲೇ ನಡೆಯುತ್ತಿತ್ತು. ಕಾಫಿ ತೋಟ ಸ್ವಚ್ಛಗೊಳಿಸುವವರು, ಕಾಫಿ ಚಿಗುರು ತೆಗೆಯುವವರು ಸ್ಥಳೀಯ ಕಾರ್ಮಿಕರೇ ಆಗಿದ್ದರು.

ಏಕೆಂದರೆ ಸ್ಥಳೀಯರಿಗೆ ಬಿಟ್ಟರೆ ಬಯಲು ಸೀಮೆಯ ಕಾರ್ಮಿಕರಿಗೆ ಕಾಫಿ ತೋಟದ ಕೆಲಸ ಗೊತ್ತಿರಲಿಲ್ಲ. ಸ್ಥಳೀಯರಾದ ಎರವರು, ಜೇನುಕುರುಬರು ಇಲ್ಲಿನ ಪ್ರಮುಖ ಕಾರ್ಮಿಕರಾಗಿದ್ದರು. ಇವರಾರು ತೋಟದ ಮಾಲಿಕರಾಗಿರಲಿಲ್ಲ ಮತ್ತು ಈಗಲೂ ಇಲ್ಲ. ಕೂಲಿಯೇ ಇವರ ಬದುಕಿನ ಆಸರೆಯಾಗಿತ್ತು. ಆದರೆ ಕಾಫಿ ಹಣ್ಣನ್ನು ಕೊಯ್ಯಲು ಮಾತ್ರ ಹೊರಗಿನಿಂದ ಕಾರ್ಮಿಕರು ಬರುತ್ತಿದ್ದರು. ಸಾಮಾನ್ಯವಾಗಿ ಜನವರಿ, ಫೆಬ್ರವರಿ ಕಾಫಿ ಕೊಯ್ಲಿನ ಸಂದರ್ಭ. ಈ ಅವಧಿಯಲ್ಲಿ ಕೊಡಗಿನ ಯಾವುದೇ ಭಾಗದಲ್ಲಿ ನೋಡಿದರೂ ಬಯಲು ಸೀಮೆಯ ಕಾರ್ಮಿಕರೇ ಕಂಡು ಬರುತ್ತಿದ್ದರು.

ಕಾಫಿ ತೋಟಗಳಲ್ಲಿ ಕಿತ್ತಳೆಯೂ ಸಮೃದ್ಧಿಯಾಗಿರುತ್ತಿತ್ತು. ಹತ್ತಾರು ಎಕರೆ ಕಾಫಿ ತೋಟ ಹೊಂದಿರುವ ಮಾಲೀಕರು ಕಿತ್ತಳೆಯಲ್ಲಿಯೇ ಲಕ್ಷಾಂತರ ರೂಪಾಯಿ ಆದಾಯ ಗಳಿಸುತ್ತಿದ್ದರು. ಮತ್ತೊಂದು ಕಡೆ ಕಾಳು ಮೆಣಸು ಉತ್ತಮ ಆದಾಯ ತುರುವ ವಾಣಿಜ್ಯ ಬೆಳೆಯಾಗಿತ್ತು. ಕಾಫಿ ತೋಟದ ಆಂತರಿಕ ಬೆಳೆಯಾಗಿ ಇದನ್ನೆಲ್ಲ ಬೆಳೆಯುತ್ತಿದ್ದರು. ಜನವರಿ ತಿಂಗಳು ಬಂದರೆ ಎಲ್ಲರ ಮನೆ ಮುಂದೆ ಕಾಫಿ, ಕಾಳು ಮೆಣಸಿನ ರಾಶಿ ಕಂಡು ಬರುತ್ತಿತ್ತು.

ಇಂತಹ ಕೃಷಿ ಸಮೃದ್ಧಿಯನ್ನು ಹೊಂದಿದ್ದ ಕೊಡಗು ಇಂದು ಕಾಲಾಮಾನದ ವ್ಯತ್ಯಯಕ್ಕೆ ಸಿಲುಕಿ ಬದಲಾಗಿದೆ. ಹಿಂದಿನ ಭತ್ತದ ಕೃಷಿ ಈಗಿಲ್ಲ. ಸಮೃದ್ಧಿಯಾಗಿ ಭತ್ತ ಬೆಳೆಯುತ್ತಿದ್ದ ಗದ್ದೆಗಳು ಈಗ ಬಹುಪಾಲು ವಸತಿ ಬಡಾವಣೆಗಳಾಗಿ ಪರಿವರ್ತನೆಗೊಂಡಿವೆ. ಹಸಿರಾಗಿ ಕಂಗೊಳಿಸಬೇಕಿದ್ದ ಗದ್ದೆಗಳಲ್ಲಿ ಈಗ ಪರಿವರ್ತಿತ ಸೈಟ್‌ಗಳು ಮಾರಾಟಕ್ಕಿವೆ ಎಂಬ ಫಲಕಗಳು ನೇತಾಡುತ್ತಿವೆ.

ಉಳಿದ ಗದ್ದೆಗಳು ಬೆಳೆ ಕಾಣದೆ ಪಾಳು ಬಿದ್ದಿವೆ. ಇದಕ್ಕೆ ಕಾರಣ ಕಾರ್ಮಿಕರ ಕೊರತೆ ಹಾಗೂ ಹವಾಮಾನದ ವೈಪರೀತ್ಯ ಎಂದು ಹೇಳಲಾಗುತ್ತಿದೆ. ಕೊಡಗಿನ ಅನ್ನದಾತ ಕಾರ್ಮಿಕರೆನೆಸಿಕೊಂಡಿದ್ದ ಎರವರು ಮತ್ತು ಜೇನುಕುರುಬರ ಸಂಖ್ಯೆ ಗಣನೀಯವಾಗಿ ಕ್ಷೀಣಿಸಿದೆ. ಕುಡಿತದ ಚಟವನ್ನು ವಿಪರೀತವಾಗಿ ಬೆಳೆಸಿಕೊಂಡಿರುವ ಈ ಜನವರ್ಗ ಕುಡಿತದಿಂದ ತಮ್ಮ ಆರೋಗ್ಯವನ್ನೂ ಹಾಳುಮಾಡಿಕೊಂಡು ಅತ್ಯಂತ ಕಡಿಮೆ ವಯಸ್ಸಿಗೆ ಸಾವಿಗೆ ತುತ್ತಾಗುತ್ತಿದ್ದಾರೆ. ಮತ್ತೆ ಕೆಲವರು ಪರಸ್ಪರ ಬಡಿದಾಡಿಕೊಂಡು ಜೈಲು ಪಾಲಾಗುತ್ತಿದ್ದಾರೆ. ಉಳಿದ ಸ್ವಲ್ಪ ಜನ ಇತರ ಉದ್ಯೋಗ ಮಾಡುವತ್ತ ಗಮನ ಹರಿಸಿದ್ದಾರೆ. ಹೀಗಾಗಿ ಕೃಷಿ ಕೆಲಸ ಮಾಡುವವರ ಸಂಖ್ಯೆ ಗಣನೀಯವಾಗಿ ಕಡಿಮೆಯಾಗಿದೆ. ಈ ಕಾರಣಗಳಿಂದಲೂ ಕೊಡಗಿನ ಬಹುತೇಕ ಗದ್ದೆಗಳು ಕೃಷಿ ಕಾಣದಾಗಿವೆ ಎಂಬುದು ಸ್ಥಳೀಯ ಕೃಷಿಕರ ಅಭಿಪ್ರಾಯ.

ಕೃಷಿಯ ಹಿನ್ನಡೆಗೆ ಮತ್ತೊಂದು ಕಾರಣ ಹವಾಮಾನದ ವೈಪರೀತ್ಯ. ಗಿಡಮರಗಳ ನಿರಂತರ ಹನನದಿಂದ ಅರಣ್ಯ ಸಂಪತ್ತು ಬರಿದಾಗಿದೆ. ಕಾಫಿ ತೋಟಗಳಲ್ಲಿಯೂ ಮರಗಳ ಸಂಖ್ಯೆ ಕ್ಷೀಣಿಸಿದೆ. ಮಳೆ ತರುವ ಬೆಟ್ಟಗುಡ್ಡಗಳು ಕರಗಿ ಹೋಗಿವೆ. ಹೀಗಾಗಿ ಹಿಂದೆ ಮೂರು–ನಾಲ್ಕು ತಿಂಗಳ ಕಾಲ ನಿರಂತರ ಮತ್ತು ತೀವ್ರತರವಾಗಿ ಸುರಿಯುತ್ತಿದ್ದ ಮಳೆಯೂ

ಮಾಯವಾಗಿದೆ. ಕಾಲವಲ್ಲದ ಕಾಲದಲ್ಲಿ ಮಳೆ ಬಂದು ಕೊಡಗಿನ ಕೃಷಿ ಪದ್ಧತಿಯನ್ನು ಸಂಪೂರ್ಣವಾಗಿ ಬದಲಾಯಿಸಿದೆ. ಮಳೆ ಆಶ್ರಯದಲ್ಲಿ ಬೆಳೆಯುತ್ತಿದ್ದ ಗದ್ದೆಗಳು ಬರಡಾಗಿವೆ. ತುಂಬಿ ತುಳುಕುತ್ತಿದ್ದ ಹಳ್ಳಕೊಳ್ಳಗಳು ಬರಿದಾಗಿವೆ. ಹೀಗಾಗಿ ನೀರಿನ ಒರತೆಯಿಲ್ಲದೆ ಭತ್ತದ ಗದ್ದೆಗಳು ಪಾಳು ಬಿದ್ದಿವೆ. ಕೆಲವು ಗದ್ದೆಗಳು ಅಡಿಕೆ, ಬಾಳೆ, ಕಾಫಿ, ತಾಳೆ ಬೆಳೆಯುವ ತೋಟಗಳಾಗಿ ಮಾರ್ಪಾಟಾಗಿವೆ.

ಹಿಂದೆ ಎಮ್ಮೆ, ಎತ್ತುಗಳನ್ನು ಬಳಸಿ ಉಳುಮೆ ಮಾಡುತ್ತಿದ್ದ ವಿಧಾನ ಇಂದು ನಿಂತೇ ಹೋಗಿದೆ. ಎತ್ತು, ನೇಗಿಲು, ನೊಗ ಮರೆಯಾಗಿವೆ. ಎಮ್ಮೆಗಳು ಕಾಣಸಿಗುತ್ತಿಲ್ಲ. ಇವುಗಳ ಜಾಗದಲ್ಲಿ ಆಧುನಿಕ ಯಂತ್ರೋಪಕರಣಗಳಾದ ಟಿಲ್ಲರ್ ಮತ್ತು ಟ್ರ್ಯಾಕ್ಟರ್ ಬಂದಿವೆ. ಹಸಿರೆಲೆ ಗೊಬ್ಬರ ಮತ್ತು ಕೊಟ್ಟಿಗೆ ಗೊಬ್ಬರದ ಬದಲು ರಸಗೊಬ್ಬರ ಹಾಕಲಾಗುತ್ತಿದೆ. ನಾಟಿ ಮಾಡುತ್ತಿದ್ದ ಕಾರ್ಮಿಕರಿಗೆ ಬದಲಾಗಿ ನಾಟಿ ಯಂತ್ರಗಳು ಕಾಲಿಟ್ಟಿವೆ. ಕೊಯ್ಲಿನ ಯಂತ್ರಗಳು ಹಾಗೂ ಒಕ್ಕಣೆ ಮಾಡುವ ಯಂತ್ರಗಳು ಕಾಣಿಸಿಕೊಂಡಿವೆ. ಸಾಮಾನ್ಯ ಕೃಷಿಕರು ಕೂಡ ಈಗ ಯಂತ್ರಗಳನ್ನು ಬಳಸಿ ಕೃಷಿ ಮಾಡುವತ್ತ ಮುಖ ಮಾಡಿದ್ದಾರೆ. ಇಷ್ಟೆಲ್ಲ ಕಷ್ಟಪಟ್ಟು ಮಾಡಿದರೂ ರೈತನಿಗೆ ಭತ್ತ ಲಾಭ ತರುವ ಕೃಷಿಯಾಗಿ ಉಳಿದಿಲ್ಲ. ಭತ್ತಕ್ಕೆ ಸೂಕ್ತ ಬೆಲೆ ಲಭಿಸುತ್ತಿಲ್ಲವಾದ್ದರಿಂದ ಬೆಳೆಯುವ ವೆಚ್ಚ ಹೆಚ್ಚಾಗಿ ರೈತ ನಷ್ಟ ಅನುಭವಿಸುವಂತಾಗಿದೆ. ಮಾಡಿದ ವೆಚ್ಚವೂ ಬರದಿದ್ದ ಮೇಲೆ ಕೃಷಿ ಮಾಡಿ ಪ್ರಯೋಜನವಾದರೂ ಏನು ಎಂದು ಬೇಸತ್ತ ಬಹುಪಾಲು ರೈತರು ಕೃಷಿ ಮಾಡುವುದನ್ನೆ ಬಿಟ್ಟಿದ್ದಾರೆ. ಇವುಗಳ ಜತೆಗೆ ರಸಗೊಬ್ಬರದ ಬೆಲೆಯೂ ಹೆಚ್ಚಾಗಿದೆ. ಇದನ್ನು ಹಾಕದಿದ್ದರೆ ಬೆಳೆ ಬರುವುದಿಲ್ಲ. ಕೂಲಿಯೂ ಹೆಚ್ಚಿದೆ. ಆದರೆ ರೈತ ಬೆಳೆದ ಬೆಳೆಗೆ ಮಾತ್ರ ಬೆಲೆ ಇಲ್ಲದಂತಾಗಿದೆ. ಇಂತಹ ವೈಪರೀತ್ಯದಿಂದ ಕೃಷಿ ಕ್ಷೇತ್ರ ಇಂದು ಗಣನೀಯ ರೀತಿಯಲ್ಲಿ ಸ್ಥಿತ್ಯಂತರವಾಗಿದೆ.

ಸಾಂಪ್ರದಾಯಿಕ ಬೆಳೆಗಳ ಜೊತೆಗೆ ಕಾಫಿ, ಕಿತ್ತಳೆ, ಮೆಣಸು, ಏಲಕ್ಕಿಯಂತಹ ವಾಣಿಜ್ಯ ಬೆಳೆಗಳನ್ನು ಹೆಚ್ಚು ಉತ್ಪಾದಿಸುತ್ತಿದ್ದ ಕೊಡಗು ಕಾಫಿ ಮತ್ತು ಕಿತ್ತಳೆಗೆ ಹೆಸರುವಾಸಿಯಾಗಿತ್ತು. ಆದರೆ ಇಂದು ಕಾಫಿ ತೋಟಗಳಲ್ಲಿ ಕೆಲಸ ಮಾಡಲು ಸ್ಥಳೀಯ ಕಾರ್ಮಿಕರ ಕೊರತೆ ಎದ್ದು ಕಾಣುತ್ತಿದೆ. ಕೂಲಿಕಾರರ ಕೊರತೆಯೂ ಕೃಷಿ ಕ್ಷೀಣಿಸಲು ಕಾರಣವಾಗಿದೆ. ಹಿಂದೆ ಸಾಮಾಜಿಕವಾಗಿ ಹಿಂದುಳಿದಿದ್ದ ಎರವರು ಮತ್ತು ಕೆಂಬಟ್ಟಿಯರು ಇಲ್ಲಿನ ಕೃಷಿಗೆ ಬೆನ್ನೆಲುಬಾಗಿ ನಿಂತಿದ್ದರಿಂದ ಸಮೃದ್ಧವಾಗಿದ್ದ ಕೃಷಿ ಕ್ಷೇತ್ರ ಇಂದು ಬಡವಾಗಿದೆ. ಅಸ್ಸಾಂ, ಬಿಹಾರಗಳಿಂದ ಕೃಷಿ ಕೂಲಿಕಾರ್ಮಿಕರನ್ನು ಕರೆಸಿಕೊಳ್ಳಲಾಗುತ್ತಿದೆ. ಇದರಿಂದ ಕಾಫಿ ಕೊಯ್ಲಿಗೆ ಮತ್ತು ತೋಟದ ಕೆಸಲಕ್ಕೆ ಎದುರಾಗಿದ್ದ ಕಾರ್ಮಿಕರ ಕೊರತೆಯ ಆತಂಕ ದೂರವಾಗಿದೆ ಎಂದು ಭಾವಿಸಬಹುದಾದರೂ ಮತ್ತೊಂದು ಸಮಸ್ಯೆ ಎದುರಾಗಿದೆ. ಅಸ್ಸಾಂನವರೆಂದು ಹೇಳಿಕೊಂಡು ಬರುತ್ತಿರುವ ಕಾರ್ಮಿಕರಲ್ಲಿ ಕೆಲವರು ಬಾಂಗ್ಲಾದವರೂ ಇದ್ದಾರೆಂಬುದೇ ಆತಂಕಕ್ಕೆ ಕಾರಣವಾಗಿದೆ. ಕೊಡಗಿನ ಯಾವುದೇ ಭಾಗದ ಬಸ್ ನಿಲ್ದಾಣವಾಗಲಿ, ಅಂಗಡಿ ಮುಂಗಟ್ಟುಗಳಾಗಲಿ, ಸಂತೆಗಳಾಗಲಿ, ಸಾರ್ವಜನಿಕ ಸ್ಥಳಗಳಾಗಲಿ, ಎಲ್ಲಾ ಕಡೆಗಳಲ್ಲಿಯೂ ಅಸ್ಸಾಂನವರದೇ ಓಡಾಟ ಕಾಣಿಸುತ್ತಿದೆ. ಕಾಫಿ ತೋಟಗಳಲ್ಲಿ ಮಾತ್ರವಲ್ಲ ಗ್ಯಾರೇಜ್‌ಗಳಲ್ಲಿ,

ಹೊಟೇಲ್‌ಗಳಲ್ಲಿ ಮೊದಲಾದ ಕಡೆಗಳಲ್ಲೂ ಅಸ್ಸಾಂ ಯುವಕರೇ ಕಂಡು ಬರುತ್ತಿದ್ದಾರೆ. ಇವರು ಒಂದು ಕಡೆ ಶಾಶ್ವತವಾಗಿ ನೆಲೆ ನಿಲ್ಲುವುದಿಲ್ಲವಾದುದರಿಂದ ಇವರನ್ನು ನಂಬಿ ಕೃಷಿಗೆ ಮುಂದಾಗಲು ಇಲ್ಲಿನ ತೋಟದ ಮಾಲಕರು ತಯಾರಿಲ್ಲದಿರುವುದು ಕೃಷಿಯ ಮತ್ತೊಂದು ಸಮಸ್ಯೆಯಾಗಿ ಪರಿಣಮಿಸಿದೆ.

ತಮ್ಮ ತಮ್ಮ ಕಾಫಿ ತೋಟದಲ್ಲಿ ಏಕಾಂತವಾಗಿ ವಾಸಿಸುತ್ತಿದ್ದ ಜನತೆ ನಗರಕ್ಕೆ ವಲಸೆ ಬರುತ್ತಿದ್ದಾರೆ. ಕಾಫಿ ಎಸ್ಟೇಟ್‌ನ ಮಾಲೀಕರು ಮ್ಯಾನೇಜರ್‌ನ ನೇಮಕ ಮಾಡಿ ಎಸ್ಟೇಟ್‌ನ ಜವಾಬ್ದಾರಿಯನ್ನು ಅವನಿಗೆ ವಹಿಸಿ ತಾವು ನಗರಗಳಲ್ಲಿ ವಾಸ ಮಾಡಲು ಮುಂದಾಗುತ್ತಿದ್ದಾರೆ. ಕೊಡಗಿನ ಬಹುಪಾಲು ಯುವಕರು ವ್ಯಾಸಂಗ, ಉದ್ಯೋಗವನ್ನು ಅರಸಿ ಬೆಂಗಳೂರು, ಮೈಸೂರು. ಮಂಗಳೂರು ಮೊದಲಾದ ನಗರಗಳನ್ನು ಸೇರಿಕೊಂಡಿದ್ದಾರೆ. ಈ ಯುವಕರು ಹಬ್ಬ ಹರಿದಿನಗಳಲ್ಲೂ ಕೊಡಗಿಗೆ ಬರುವುದು ಕಡಿಮೆಯಾಗಿದೆ.

ವನ್ಯಮೃಗಗಳ ಉಪಟಳವೂ ಇಲ್ಲಿನ ಕೃಷಿಗೆ ದೊಡ್ಡ ತೊಡಕುಂಟಾಗಿರುವುದು ತಿಳಿದು ಬರುತ್ತದೆ. ಅರಣ್ಯದಲ್ಲಿ ವಾಸಿಸಬೇಕಾದ ಅನೇಕ ಪ್ರಾಣಿಗಳು ಇಂದು ಜನವಸತಿ ಪ್ರದೇಶಗಳಿಗೆ ದಾಳಿಯಿಡುತ್ತಿವೆ. ಮಾತ್ರವಲ್ಲ ಕೃಷಿ ಜಮೀನುಗಳನ್ನು ನಾಶಗೈಯುತ್ತಿವೆ. ಅಂತಹದ್ದರಲ್ಲಿ ದಟ್ಟ ಅರಣ್ಯವನ್ನು ಹೊದ್ದಂತಿರುವ ಕೊಡಗು ಕಾಫಿ, ಏಲಕ್ಕಿ, ಭತ್ತ ಮೊದಲಾದ ಬೆಳೆಗಳನ್ನು ಅರಣ್ಯದ ನಡುವೆಯೇ ಬೆಳೆಯಬೇಕಾಗಿದೆ. ಹೀಗಿರುವಾಗ ಆನೆ, ಹಂದಿ ಮತ್ತಿತರ ಪ್ರಾಣಿಗಳು ರೈತಾಪಿ ವರ್ಗದ ನಿದ್ದೆಗೆಡಿಸಿವೆ. ಹಿಂಡು ಹಿಂಡು ಆನೆಗಳು ವಾರಗಟ್ಟಲೇ ತೋಟಗಳಲ್ಲಿ ಬೀಡುಬಿಟ್ಟು ಹಾಳುಮಾಡಿರುವ ನಿದರ್ಶನಗಳಿವೆ.

ದಟ್ಟ ಅರಣ್ಯ ಪ್ರದೇಶವಾಗಿದ್ದ ಕೊಡಗು ಇಂದು ಬೇರೆ ಬೇರೆ ಕಾರಣಗಳಿಂದ ತೀವ್ರವಾಗಿ ನಶಿಸುತ್ತಿದೆ. ಪ್ರಾಣಿಗಳು ಹೀಗೆ ಏಕಾಏಕಿ ನಾಡಿಗೆ ದಾಳಿ ಮಾಡಲು ಅರಣ್ಯದಲ್ಲಿ ಪ್ರಾಣಿಗಳಿಗೆ ತಿನ್ನಲು ಯೋಗ್ಯವಾದ ಗಿಡಮರಗಳಿಲ್ಲದಿರುವುದೂ ಕಾರಣವಾಗುತ್ತದೆ. ಇದರೊಂದಿಗೆ ಕಾಡು ಪ್ರಾಣಿಗಳನ್ನು ನಾಡಿಗೆ ನುಗ್ಗದಂತೆ ನಿಯಂತ್ರಣ ವ್ಯವಸ್ಥೆಯನ್ನು ಕೈಗೊಳ್ಳದಿರುವುದು ಈ ಸಮಸ್ಯೆಗಳಿಗೆ ಕಾರಣವೆನಿಸುತ್ತದೆ. ಹೀಗೆ ನಿರಂತರವಾಗಿ ಮಾನವ ಮತ್ತು ಪ್ರಾಣಿಗಳ ನಡುವೆ ಸಂಘರ್ಷ ನಡೆಯುತ್ತಾ ಬರುತ್ತಿದೆ.

ಹೀಗೆ ಸಕಾಲಕ್ಕೆ ಮಳೆಯಾಗದೇ ಇರುವುದು, ಕಾರ್ಮಿಕರ ಕೊರತೆ, ಕೃಷಿಯ ಕಡೆಗಿನ ಯುವಕರ ನಿರಾಸಕ್ತಿ, ನಿರೀಕ್ಷಿತ ಫಸಲು ದೊರೆಯದೇ ಇರುವುದು ಮೊದಲಾದ ಸಮಸ್ಯೆಗಳಿಂದಾಗಿ ಕೊಡಗಿನ ಕೃಷಿಕರಿಗೆ ಸಂಕಷ್ಟ ಎದುರಾಗಿ ಕೃಷಿಯಿಂದ ದೂರವಾಗುವ ಆಲೋಚನೆ ಮಾಡಿರುವಂತಿದೆ.

## ಕೊನೆ ಟಿಪ್ಪಣಿಗಳು

೧. **ಮಾನವ ಮತ್ತು ಸಾಂಸ್ಕೃತಿಕ ಪಲ್ಲಟಗಳು** (ಪ್ರಸ್ತಾವನೆ), ೨೦೧೨, ಹನುಮಂತಪ್ಪ ತಾರಿಹಳ್ಳಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೪

೨. **ಕನ್ನಡತಿ-ಕೊಡವತಿ ಸಂವಾದ**(ಕವನ), ಲಲಿತಾ ನಾಯಕ್ ಬಿ. ಟಿ., ಪ್ರಜಾವಾಣಿ, ಮಡಿಕೇರಿ ಆವೃತ್ತಿ, ದಿನಾಂಕ ೦೮-೦೧-೨೦೧೪ (ಮಡಿಕೇರಿಯಲ್ಲಿ ನಡೆದ ೮೦ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಆಗಮಿಸಿದ್ದ ಬಿ. ಟಿ. ಲಲಿತಾ ನಾಯಕ್ ಅವರು ಇಲ್ಲಿಯ ಪ್ರಸ್ತುತ ವಾತಾವರಣವನ್ನು ಕುರಿತು ಬರೆದ ಕವಿತೆ)

೩. **ಕೊಡಗಿನ ಕಾಡಿಗೆ ಮುಳುವಾದ ಯೋಜನೆಗಳು**, ಪ್ರಜಾವಾಣಿ ವರದಿ, ೧೬-೦೨-೨೦೧೮, ಪುಟ-೪

೪. **ಅದೇ;**

೫. **ಹುಲಿಯ ಹಾಲಿನ ಮೇವು**, ೨೦೦೮, ಭಾರತೀಸುತ, ರವೀದ್ರ ಪುಸ್ತಕಾಲಯ, ಸಾಗರ, ಪುಟ-೧೨೬-೧೩೦

೬. **ಬೆಳ್ಳಿಮೂಡಿತು**, ೧೯೬೨, ಭಾರತೀಸುತ, ಮನ್ವಂತರ ಪ್ರಕಾಶನ, ಧಾರಾವಾಡ, ಪುಟ-೬೧-೬೨

೭. **ಕೆಂಬಟ್ಟೆ ಹೊಲೆಯರ ಸಂಸ್ಕೃತಿ**, ೧೯೯೩, ನಾಗರಾಜ್ ಎಂ. ಜಿ., ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪುಟ-೩೨೩

೮. **ಎಡಕಲ್ಲು ಗುಡ್ಡದ ಮೇಲೆ**, ೨೦೦೯, ಭಾರತೀಸುತ, ರವೀಂದ್ರ ಪುಸ್ತಕಾಲಯ, ಸಾಗರ, ಪುಟ-೧೦೮

೯. **ಅದೇ;** ಪುಟ-೧೧೫

೧೦. **ಅದೇ;** ಪುಟ-೧೧೬

೧೧. **ಎರವರ ಸಂಸ್ಕೃತಿ**, ೧೯೯೩, ಹರೀಶ್ ಪಿ. ಎನ್., ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪುಟ-೩೨೩

೧೨. **ಪ್ರತ್ಯೇಕ ಕೊಡಗು ರಾಜ್ಯ**, ೧೯೯೮, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೬

೧೩. **ಪ್ರಜಾವಾಣಿ ವರದಿ**, ೩೧-೧೦-೨೦೧೭, ಪುಟ-೫

# ಅಧ್ಯಾಯ – ಏಳು

# ಉಪಸಂಹಾರ

## ೭.೧. ಅಧ್ಯಯನದ ಫಲಿತಗಳು

- ಭಾಷಿಕ, ಚಾರಿತ್ರಿಕ, ಸಾಂಸ್ಕೃತಿಕ ಮತ್ತು ಸಾಹಿತ್ಯಿಕ ಹಿನ್ನೆಲೆಯಲ್ಲಿ ಈಗಾಗಲೇ ಬಂದಿರುವ ಸಂಶೋಧನ ಪ್ರಬಂಧಗಳಿಗಿಂತ ಭಿನ್ನವಾದ ನೆಲೆಯಲ್ಲಿ ಕೊಡಗಿನಲ್ಲಿ ವಾಸಿಸುತ್ತಿರುವ ಕೊಡವರು, ಅರೆಭಾಷೆ ಗೌಡರು, ಕೆಂಬಟ್ಟಿಯರು, ಜೇನುಕುರುಬರು ಹಾಗೂ ಎರವರನ್ನು ಪ್ರಧಾನವಾಗಿ ಪರಿಗಣಿಸಿ ಇವರ ಸಾಮಾಜಿಕ ಮತ್ತು ಸಾಂಸ್ಕೃತಿಕ ವೈವಿಧ್ಯತೆಗಳು ಹಾಗೂ ಪಲ್ಲಟಗಳನ್ನು ಶೋಧಿಸಲಾಗಿದೆ.
- ಕೊಡಗು ಬಹುಜನ ಮತ್ತು ಬಹುಸಂಸ್ಕೃತಿಗಳಿಂದ ಕೂಡಿದ ಭೂಪ್ರದೇಶವಾಗಿದ್ದು ಇಲ್ಲಿನ ಪರಿಸರ, ಭೌಗೋಳಿಕ ಹಿನ್ನೆಲೆ, ಭಾಷೆ, ಜನಜೀವನಕ್ರಮ, ಆಚರಣೆ ಮೊದಲಾದವುಗಳಿಂದಾಗಿ ತನ್ನ ವೈವಿಧ್ಯತೆಯನ್ನು ಪ್ರದರ್ಶಿಸಿದೆ. ಹುಟ್ಟಿನಿಂದ ಸಾವಿನವರೆಗೆ ಎಲ್ಲಾ ರೀತಿಯ ಆಚರಣೆಗಳು ಕೆಲವರಲ್ಲಿ ಒಂದೇ ತೆರನಾಗಿದ್ದು, ಕೆಲವರಲ್ಲಿ ಭಾಗಶಃ ವ್ಯತ್ಯಾಸಗಳೊಂದಿಗೆ ಪಾಲನೆಯಾಗುತ್ತಿರುವುದನ್ನು ಗಮನಿಸಲಾಗಿದೆ.
- ಆಧುನಿಕ ಸಾಹಿತ್ಯ ಸಂದರ್ಭದಲ್ಲಿ ಕೊಡಗಿನ ಲೇಖಕರು ಮತ್ತು ಇತರೆ ಭಾಗದ ಲೇಖಕರು ವಿಫುಲವಾದ ಮತ್ತು ಅತ್ಯಂತ ಮೌಲಿಕವಾದ ಕೃತಿಗಳನ್ನು ರಚಿಸಿರುವುದು ತಿಳಿದುಬರುತ್ತದೆ. ಆರಂಭದ ದಿನಗಳಲ್ಲಿ ಕೊಡಗನ್ನು ಕುರಿತು ಬರೆದ ಸಾಹಿತಿಗಳ ಸಂಖ್ಯೆಯೂ ಅಧಿಕ ಪ್ರಮಾಣದಲ್ಲಿರುವುದನ್ನು ಗುರುತಿಸಲಾಗಿದೆ.
- ಕೊಡವರ ಮೂಲ ಮತ್ತು ಕೊಡಗು ಹೆಸರು ಬಂದದ್ದರ ಕುರಿತು ಇದುವರೆಗೆ ಹಲವಾರು ಸಂಶೋಧನೆ, ಅಧ್ಯಯನಗಳು ನಡೆದಿವೆ. ಆದರೆ ಯಾರೊಬ್ಬರೂ ನಿರ್ದಿಷ್ಟವಾಗಿ ಇಂತಹ ಕಡೆಯಿಂದಲೇ ಬಂದಿದ್ದಾರೆ ಎಂದು ಹೇಳಲು ಸಾಧ್ಯವಾಗಿಲ್ಲದಿರುವುದು ದೊಡ್ಡ ಹಿನ್ನಡೆಯಾಗಿದೆ. ಅನೇಕ ಸಂಶೋಧಕರು, ಅಧ್ಯಯನಕಾರರು, ಬ್ರಿಟೀಷ್ ವಿದ್ವಾಂಸರು ಮೊದಲಾದವರ ಅಭಿಪ್ರಾಯಗಳನ್ನು ಕ್ರೂಢೀಕರಿಸಿ ಕೊಡವರು ಉತ್ತರ ಭಾರತದಿಂದ ಬಂದಿದ್ದಾರೆ ಎಂಬ ನಿಲುವಿಗೆ ಬರಲಾಗಿದೆ.
- ಕೊಡಗಿನ ಸಂಸ್ಕೃತಿ ಎಂದಾಕ್ಷಣ ಸಹಜವಾಗಿ ಬಹಳ ವರ್ಷಗಳ ಹಿಂದಿನ ಕೊಡಗು ನಮ್ಮ ಕಣ್ಮುಂದೆ ತೆರೆದುಕೊಳ್ಳುತ್ತದೆ. ಆ ಸಮಯದಲ್ಲಿ ಕೊಡಗು ಪ್ರಾಕೃತಿವಾಗಿ ಸಂಪದ್ಭರಿತವಾಗಿತ್ತು ಮತ್ತು ಜನಜೀವನದಲ್ಲಿ ಸಾಂಸ್ಕೃತಿಕ ಶ್ರೀಮಂತಿಕೆಯಿತ್ತು. ಇದನ್ನು ಗಮನದಲ್ಲಿಟ್ಟುಕೊಂಡು

ಕೊಡಗನ್ನು ತಿಳಿದುಕೊಳ್ಳುವದರ ಜತೆಗೆ ಸಮಕಾಲೀನತೆಯ ಸಂದರ್ಭದಲ್ಲಿ ನಿಂತು ಇಲ್ಲಿನ ಜನಜೀವನದ ಪ್ರಾಧಾನ್ಯತೆಯನ್ನು ಕಂಡುಕೊಳ್ಳಲಾಗಿದೆ.

- ಕೊಡಗು ಹವಾಮಾನದ ದೃಷ್ಟಿಯಿಂದ ಮೊದಲಿನಿಂದಲೂ ಪ್ರವಾಸೋದ್ಯಮಕ್ಕೆ ಸೂಕ್ತವಾದ ಪ್ರದೇಶವಾಗಿದೆ. ಆ ಕಾರಣಕ್ಕಾಗಿಯೇ ಬ್ರಿಟೀಷರು ಕೊಡಗನ್ನು ಪ್ರವೇಶಿಸಿದರು. ಇದನ್ನು ಗಮನಿಸಿದ ಇಲ್ಲಿನ ಅನೇಕ ಸಿರಿವಂತರು ಉತ್ತಮ ವಿನ್ಯಾಸದ ಹೋಂ ಸ್ಟೇಗಳ ನಿರ್ಮಾಣಕ್ಕೆ ಮುಂದಾಗಿ ಅದರಲ್ಲಿ ಲಾಭವನ್ನೂ ಕಂಡುಕೊಂಡಿದ್ದಾರೆ. ಪ್ರಸ್ತುತ ಕೊಡಗಿನಲ್ಲಿ ಹೋಮ್ ಸ್ಟೇಗಳ ಸಂಖ್ಯೆ ಗಣನೀಯವಾಗಿ ಹೆಚ್ಚಾಗಿದ್ದು ಇಲ್ಲಿನ ಪ್ರಾಕೃತಿಕ ಸಿರಿತನ ಕಳೆಗುಂದಿರುವುದನ್ನು ಕಂಡುಕೊಳ್ಳಲಾಗಿದೆ.
- ಜಾಗತೀಕರಣ ಎಲ್ಲಾ ಕ್ಷೇತ್ರಗಳಲ್ಲಿಯೂ ತನ್ನ ಅಸ್ತಿತ್ವವನ್ನು ಸ್ಥಾಪಿಸಿದೆ. ಅಂತಹದ್ದರಲ್ಲಿ ಕೊಡವರ ಮದುವೆಗಳಲ್ಲಿ ಇಂದಿಗೂ ಯಾವುದೇ ರೀತಿಯ ಮಹತ್ತರ ಬದಲಾವಣೆಗಳಾಗಿಲ್ಲದಿರುವುದು ಕೊಡವರ ಸಾಸ್ಕೃತಿಕ ಬದುಕಿನ ಗಟ್ಟಿತನವನ್ನು ಸೂಚಿಸುತ್ತದೆ. ಮೂಲ ಸಂಪ್ರದಾಯಗಳನ್ನೇ ಅಳವಡಿಸಿಕೊಂಡು ಬರುತ್ತಿದ್ದಾರೆ. ಮನೆಯಂಗಳದಲ್ಲಿ ನಡೆಯುತ್ತಿದ್ದ ಮದುವೆಗಳು ಆರ್ಥಿಕ ದೃಷ್ಟಿಯಿಂದ ನಗರಗಳಿಗೆ ವಿಸ್ತರಿಸಿಕೊಂಡಿದ್ದರೂ, ಸಂಪ್ರದಾಯಗಳಲ್ಲಿ ಬದಲಾವಣೆಗಳಿಲ್ಲದಿರುವುದು ಕಂಡುಬರುತ್ತದೆ. ಕುತ್ತುಂಬೊಳಿಚ, ಮುಕ್ಕಾಲಿ, ಮುಕ್ಕಾಲಿಯ ಮೇಲೆ ಹಾಕುವ ಕೆಂಪು ವಸ್ತ್ರ, ಗಿಂಡಿ ಹಾಲು, ಪತ್ತಾಕ ಧಾರಣೆ, ಹಿರಿಯರ ಆಶೀರ್ವಾದ ಮೊದಲಾದವುಗಳು ಹಾಗೇ ಉಳಿದಿರುವುದನ್ನು ಕಂಡುಕೊಳ್ಳಲಾಗಿದೆ. ಆದರೆ ಮದುವೆಗಳಲ್ಲಿ ಬಳಸುವ ಕೊಡೆಗಳ ಬಣ್ಣದಲ್ಲಿ ಬದಲಾವಣೆಯಾಗಿದ್ದರೂ ಕೊಡೆ ಹಿಡಿಯಲೇಬೇಕೆಂಬ ಮೂಲ ಸ್ವರೂಪ ಹಾಗೇ ಉಳಿದುಕೊಂಡಿರುವುದನ್ನು ಗಮನಿಸಲಾಗಿದೆ.
- ಕೊಡವರು ಮತ್ತು ಕೆಂಬಟ್ಟಿ ಜನಾಂಗದ ಎಲ್ಲಾ ಆಚರಣೆಗಳು, ಮದುವೆ ಪದ್ಧತಿ, ಹಬ್ಬಗಳ ಆಚರಣಾ ವಿಧಾನ, ವೇಷಭೂಷಣಗಳು ಮೊದಲಾದ ಅಂಶಗಳಲ್ಲಿ ಹೋಲಿಕೆಯಿರುವುದು ಕಂಡುಬರುತ್ತದೆ. ಆ ಕಾರಣದಿಂದ ಕೊಡವರು ಮತ್ತು ಕೆಂಬಟ್ಟಿಯರನ್ನು ಜಾತಿಯ ಹಿನ್ನೆಲೆಯಿಂದ ಬೇರೆ ಬೇರೆಯಾಗಿ ಗುರುತಿಸಿದರೂ, ಆಚರಣೆಗಳು, ಸಂಪ್ರದಾಯಗಳ ದೃಷ್ಟಿಯಿಂದ ಇವರನ್ನು ಒಂದೇ ಗುಂಪಿನಲ್ಲಿ ಕಂಡುಕೊಂಡು ಅಧ್ಯಯನ ನಡೆಸಲಾಗಿದೆ.
- ಕೊಡವರು, ಅರೆಭಾಷೆ ಗೌಡರು, ಕೆಂಬಟ್ಟಿಯರು, ಜೇನುಕುರುಬರು ಮತ್ತು ಎರವರು ದಕ್ಷಿಣ ಕೊಡಗಿನ ಭಾಗದಲ್ಲಿ ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಇವರು ಯಾವುದೇ ಒಂದು ಮಠವನ್ನು ಸ್ಥಾಪಿಸಿಕೊಳ್ಳದೆ, ಗುರುವನ್ನು ಮುಂದಿಟ್ಟುಕೊಳ್ಳದೇ ಸಮುದಾಯ ಕೇಂದ್ರಿತವಾದ ಬದುಕಿಗೆ ಪ್ರಾಧಾನ್ಯತೆಯನ್ನು ನೀಡಿರುವುದು ಕೊಡಗರ ಜೀವನ ವೈಶಿಷ್ಟ್ಯತೆಯೆಂದು ಗುರುತಿಸಲಾಗಿದೆ.
- ಕೆಂಬಟ್ಟಿ ಮತ್ತು ಎರವರಲ್ಲಿ ಗರ್ಭಾವಸ್ಥೆಯಲ್ಲಿರುವ ಹೆಂಗಸು ಮರಣ ಹೊಂದಿದರೆ ಆಕೆಯ ಹೊಟ್ಟೆಯಲ್ಲಿರುವ ಭ್ರೂಣವನ್ನು ತೆಗೆದು ಅಕ್ಕಪಕ್ಕ ಹೂಳುವುದು ಅನಾಗರಿಕವೆನಿಸುವ

ಪದ್ಧತಿಯೆನಿಸಿದರೂ ಅದರ ಹಿಂದೆ ಒಂದು ಉತ್ತಮ ಉದ್ದೇಶವಿದ್ದು, ಆದರೆ ಇದರ ನಿಜವಾದ ಉದ್ದೇಶ ಇವರಿಗೆ ತಿಳಿದಿಲ್ಲದಿರುವುದನ್ನು ಗುರುತಿಸಲಾಗಿದೆ.

- ಕೊಡಗರ ಬಹುಪಾಲು ದೇವತೆಗಳು ಕೇರಳದಿಂದ ವಲಸೆ ಬಂದವುಗಳಾದುದರಿಂದ ಇವರೆಲ್ಲರ ಆಚಾರ ವಿಚಾರಗಳಲ್ಲಿ ಕೇರಳದ ಆಚರಣಾ ಪದ್ಧತಿಗಳ ಪ್ರಭಾವವಿರುವುದು ಸ್ಪಷ್ಟವಾಗುತ್ತದೆ. ಆದರೆ ಗೌಡರು ಮಾತ್ರ ಈ ಪ್ರಭಾವಕ್ಕೊಳಗಾಗದೆ ದಕ್ಷಿಣ ಕನ್ನಡದ ಸುಳ್ಯ ಪರಿಸರದ ಆಚರಣೆಗಳು ಮತ್ತು ದೈವಾರಾಧನೆಯನ್ನು ಅನುಸರಿಸುತ್ತಿದ್ದಾರೆಂಬುದು ಇವರು ವಲಸೆ ಬಂದಿರುವುದು ದಕ್ಷಿಣ ಕನ್ನಡದಿಂದ ಎಂಬುದನ್ನು ಸ್ಪಷ್ಟಪಡಿಸಲಾಗಿದೆ.
- ಕೊಡಗಿನಲ್ಲಿ ಆಚರಿಸಲಾಗುತ್ತಿರುವ ಕೊಡವರ ಹಾಗೂ ಗೌಡರ ಹಬ್ಬಗಳಾದ ಕೈಲ್‌ಪೊಳ್ದ್, ಕಾವೇರಿ ಸಂಕ್ರಮಣ, ಹುತ್ತರಿ, ಬಿಸುಸಂಕ್ರಮಣ, ಕೆಡ್ಡಸ ಮೊದಲಾದ ಹಬ್ಬಗಳು ಕೃಷಿ ಪ್ರಧಾನ ಹಬ್ಬಗಳಾಗಿರುವುದು ಇವರು ಕೃಷಿ ಮೂಲದವರು ಎಂಬುದು ಸ್ಪಷ್ಟವಾದರೆ, ಕೆಂಬಟ್ಟಿಯರು, ಎರವರು, ಜೇನುಕರುಬರಲ್ಲಿ ಕೃಷಿ ಸಂಬಂಧಿ ಹಬ್ಬಗಳಿಲ್ಲದಿರುವುದು ಇವರಿಗೆ ಸ್ವಂತ ಭೂಮಿಯಿಲ್ಲದಿರುವುದರ ಹಿನ್ನೆಲೆಯನ್ನು ಹೇಳಲಾಗಿದೆ.
- ಕೊಡವರು, ಗೌಡರು ಮತ್ತು ಕೆಂಬಟ್ಟಿಯರು ಅಲ್ಪ ಸ್ವಲ್ಪ ವ್ಯತ್ಯಾಸಗಳೊಂದಿಗೆ ಎಲ್ಲಾ ಕಲೆ, ಆಚರಣೆ, ಸಂಪ್ರದಾಯ ಮೊದಲಾದವುಗಳಲ್ಲಿ ಸಮಾನ ಅಂಶಗಳನ್ನು ಹೊಂದಿದ್ದಾರೆ. ಅದರೆ ಎರವರು ಮತ್ತು ಜೇನುಕುರುಬರು ಇವರನ್ನು ಅನುಸರಿಸಿಲ್ಲದಿರುವುದಕ್ಕೆ ಇವರ ವಾಸಸ್ಥಳದ ಹಿನ್ನೆಲೆಯೂ ಮತ್ತು ನಗರದ ಪ್ರಭಾವದಿಂದ ದೂರವುಳಿದು ತಮ್ಮದೇ ಅಸ್ತಿತ್ವಗಳನ್ನು ಕಂಡುಕೊಂಡಿರುವುದನ್ನು ಕಂಡುಕೊಳ್ಳಲಾಗಿದೆ.
- ಆಧುನಿಕತೆಯ ಪ್ರಭಾವದಿಂದ ಇಲ್ಲಿನ ಎಲ್ಲಾ ಸಮುದಾಯಗಳೂ ತಮ್ಮ ಬದುಕಿನಲ್ಲಿ ಹೊಸತನವನ್ನು ಅಳವಡಿಸಿಕೊಂಡಿರುವುದನ್ನು ಗಮನಿಸಲಾಗಿದೆ. ಕೃಷಿ ಪದ್ಧತಿಯಲ್ಲಿ ಸಾಂಪ್ರದಾಯಿಕ ಕ್ರಮಗಳಾದ ಉಳುಮೆ, ಭಿತ್ತನೆ, ಕಟಾವು, ಒಕ್ಕಣೆ ಮೊದಲಾದವುಗಳಿಗಾಗಿ ಯಂತ್ರಗಳನ್ನು ಬಳಸುತ್ತಿದ್ದಾರೆ. ಸ್ಥಳೀಯ ಕೂಲಿ ಕಾರ್ಮಿಕರ ಸಂಖ್ಯೆ ಗಣನೀಯವಾಗಿ ಕಡಿಮೆಯಾಗಿರುವುದರಿಂದ ಸ್ಥಳೀಯವಾದ ಸಾಂಸ್ಕೃತಿಕ ಬದುಕು ಕ್ಷೀಣಿಸುತ್ತಿರುವುದನ್ನು ಗುರುತಿಸಲಾಗಿದೆ.

# ಅನುಬಂಧಗಳು

ಅ. ಆಕರ ಗ್ರಂಥಗಳು

ಆ. ಪರಾಮರ್ಶನ ಗ್ರಂಥಗಳು

ಇ. ಲೇಖನಗಳು

ಈ. ವಕ್ತೃಗಳು

ಉ. ಛಾಯಾಚಿತ್ರಗಳು

# ಅನುಬಂಧಗಳು

## ಅ. ಆಕರ ಗ್ರಂಥಗಳು

೧. ಅಶೋಕ ಆಳ್ವ ಕೆ., **ಕೊಡಗಿನ ಜಾನಪದ ಕುಣಿತಗಳ ಸಾಂಸ್ಕೃತಿಕ ಅಧ್ಯಯನ**, ೨೦೦೩, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು

೨. ಎದುರ್ಕಳ ಕೆ ಶಂಕರನಾರಾಯಣ ಭಟ್ಟ, **ಶ್ರೀ ಕಾವೇರಿ ವೈಭವ**, ೧೯೭೮, ಶ್ರೀ ರಾಮಕೃಷ್ಣ ಪ್ರಕಾಶನ, ಭಾಗಮಂಡಲ

೩. ಕನ್ನಡ ಅಭಿವೃದ್ಧಿ ಪ್ರಾದಿಕಾರ, **ಕನ್ನಡ ರತ್ನಕೋಶ**, ೧೯೯೪, ಬೆಂಗಳೂರು

೪. ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ, **ಕೊಡಗಿನ ಹರದಾಸ ಅಪ್ಪಚ್ಚ ಕವಿಯ ನಾಲ್ಕು ನಾಟಕಗಳು**, ೨೦೧೧, ಮಡಿಕೇರಿ

೫. ಕವಿತಾ ರೈ ಮತ್ತು ಆನಂದ ಕೋಡಿಂಬಾಳ, **ಕೊಡಗಿನ ಶತಮಾನದ ಕವಿತೆಗಳು**, ೨೦೧೧, ಕನ್ನಡ ಸಂಘ, ಕ್ರೈಸ್ಟ್ ಯೂನಿವರ್ಸಿಟಿ, ಬೆಂಗಳೂರು

೬. ಕಾಕೆಮಾನಿ, **ಕೊಡಗಿನ ಇತಿಹಾಸದ ಪುಟಗಳಿಂದ**, ೧೯೮೩, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೭. ಕಾಳೇಗೌಡ ನಾಗವಾರ (ಸಂ), **ಕೊಡಗಿನ ಗೌರಮ್ಮನವರ ಕಥೆಗಳು**, ೨೦೧೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೮. ಕಾವೇರಿ ಎನ್. ಪಿ., **ಕೊಡವರ ಸಂಸ್ಕಾರಗಳು: ಸಮಾಜೋ – ಸಾಂಸ್ಕೃತಿಕ ಅಧ್ಯಯನ**, ೨೦೧೪, ಪಿಎಚ್.ಡಿ. ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೯. ಕೂತಂಡ ಪಾರ್ವತಿ ಪೂವಯ್ಯ, **ವಿಧಿವಿಲಾಸ**, ೨೦೧೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೦. ಕೂತಂಡ ಪಾರ್ವತಿ ಪೂವಯ್ಯ, **ಕೊಡಗಿನ ಕತೆಗಳು**, ೨೦೧೪, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೧೧. ಕೃಷ್ಣಯ್ಯ ಡಿ. ಎನ್., **ಕೊಡಗಿನ ಇತಿಹಾಸ**, ೧೯೭೪ ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು,

೧೨. ಕೃಷ್ಣಯ್ಯ ಡಿ. ಎನ್., **ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ ಸಂಸ್ಕೃತಿಗಳು**, ೧೯೭೦, ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ, ಬೆಂಗಳೂರು

೧೩. ಕೃಷ್ಣಯ್ಯ ಡಿ. ಎನ್., **ಸುಂದರ ನಾಡು ಕೊಡಗು**, ೧೯೬೭, ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು

೧೪. ಕೃಷ್ಣರಾಯ ಅ. ನ., **ಅಖಂಡ ಕರ್ನಾಟಕ**, (ಲೇಖನ– ಕೊಡಗಿನ ಸಮಸ್ಯೆ) ೧೯೬೭, ಪ್ರಗತಿಶೀಲ ಲೇಖಕರ ಸಂಘ, ಬೆಂಗಳೂರು

೧೫. ಕೋರನ ಸರಸ್ವತಿ ಪ್ರಕಾಶ್, **ಕೊಡಗು ಗೌಡ ಸಮುದಾಯ–ಸಾಂಸ್ಕೃತಿಕ ಅನನ್ಯತೆಗಳು ಮತ್ತು ಚಲನಶೀಲತೆ**, ೨೦೧೦, ಶ್ರೀ ಗ್ರಂಥಮಾಲೆ, ಬೆಂಗಳೂರು
೧೬. ಗಣಪತಿ ಬಿ. ಡಿ., **ಕೊಡಗು ಮತ್ತು ಕೊಡವರು**, ೧೯೬೨, ಉಷಾ ಪ್ರೆಸ್, ಮೈಸೂರು
೧೭. ಗಣಪತಿ ಬಿ. ಡಿ., **ಕೊಡವರು**, ೧೯೬೨, ಉಷಾ ಪ್ರೆಸ್, ಮೈಸೂರು
೧೮. ಗಣಪತಿ ಬಿ. ಡಿ., **ಕೊಡವರು ಜೀವನ ಮತ್ತು ಪದ್ಧತಿಗಳು**, ೧೯೬೭, ಶಾರದಾ ಮುದ್ರಣಾಲಯ, ಮಂಗಳೂರು
೧೯. ತೀತೀರ ರೇಖಾ ವಸಂತ, **ಕೊಡವ ರಂಗಭೂಮಿ**, ೨೦೦೬, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು
೨೦. ತಂಬಂಡ ವಿಜಯ ಪೂಣಚ್ಚ, **ಪ್ರತ್ಯೇಕ ಕೊಡಗು ರಾಜ್ಯ**, ೧೯೯೮, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೧. ತಂಬಂಡ ವಿಜಯ ಪೂಣಚ್ಚ, **ಆಧುನಿಕ ಕೊಡಗು**, ೨೦೧೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
೨೨. ನಡಿಕೇರಿಯಂಡ ಚಿಣ್ಣಪ್ಪ, **ಪಟ್ಟೋಲೆ ಪಳಮೆ**, ೧೯೯೫, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು
೨೩. ನಲ್ಲೂರು ಪ್ರಸಾದ್ ಆರ್. ಕೆ., **ಕೊಡಗು ಜನಪದ ಸಂಸ್ಕೃತಿ**, ೨೦೧೧, ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಮಡಿಕೇರಿ
೨೪. ನಾಗರಾಜ್ ಎಂ. ಜಿ., **ಕೊಡಗು ಜಿಲ್ಲೆಯ ಸುಗ್ಗಿಕಟ್ಟೆಗಳು**, ೧೯೮೯, ಶ್ರೀ ಗೌರಿ–ಗಂಗಾ ಪ್ರಕಾಶನ, ಬೆಂಗಳೂರು
೨೫. ನಾಗರಾಜ್ ಎಂ. ಜಿ., **ಕೊಡಗಿನ ಸಾಂಸ್ಕೃತಿಕ ಜಾನಪದ ನೆಲೆಗಳು**, ೨೦೧೦, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
೨೬. ನಾಗರಾಜ್ ಎಂ. ಜಿ, **ಕೊಡಗಿನ ಕೈಮಡಗಳು**, ೨೦೦೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
೨೭. ನಾಗರಾಜ್ ಎಂ. ಜಿ., **ಕೆಂಬಟ್ಟ ಹೊಲೆಯರ ಸಂಸ್ಕೃತಿ**, ೧೯೯೩. ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
೨೮. ನಾಯಕ್ ವಿ. ಎನ್., **ಕೊಡಗಿನ ಭೌಗೋಳಿಕ ಸಮೀಕ್ಷೆ**, ೧೯೭೪, ದೀಪಕ್ ಪ್ರಕಾಶನ, ಗೋಣಿಕೊಪ್ಪ, ಕೊಡಗು ಜಿಲ್ಲೆ
೨೯. ನಾರಾಯಣರಾವ್ ಜಿ. ಟಿ., **ಕೊಡಗಿನ ಸುಮಗಳು**, ೧೯೯೩, ಅತ್ರಿ ಬುಕ್ ಸೆಂಟರ್, ಮಂಗಳೂರು
೩೦. ನಿರಂಜನ, **ಸ್ವಾಮಿ ಅಪರಂಪಾರ–೨**, ೧೯೬೫, ಗೀತಾ ಪಬ್ಲಿಕೇಷನ್, ಬೆಂಗಳೂರು
೩೧. ಪ್ರಭಾಕರ ಶಿಶಿಲ ಬಿ., **ಕೊಡಗು ಕಥನ**, ೨೦೧೧, ಕಲಾ ಪ್ರಕಾಶನ, ಬೆಂಗಳೂರು
೩೨. ಪ್ರಭಾಕರ ಶಿಶಿಲ ಬಿ. **ನದಿ ಎರಡರ ನಡುವೆ**, ೨೦೦೯, ವಸಂತ ಪ್ರಕಾಶನ ಬೆಂಗಳೂರು

೩೩. ಪ್ರಭಾಕರ ಶಿಶಿಲ ಬಿ., **ಕೊಡಗಿನ ಕಥೆಗಳು**, ೨೦೧೩, ಸಪ್ನ ಬುಕ್ ಹೌಸ್, ಬೆಂಗಳೂರು

೩೪. ಭಾರತೀಸುತ, **ಬೆಳ್ಳಿ ಮೂಡಿತು**, ೧೯೬೨, ಮನ್ವಂತರ ಪ್ರಕಾಶನ, ಧಾರಾವಾಡ

೩೫. ಭಾರತೀಸುತ, **ಹುಲಿಯ ಹಾಲಿನ ಮೇವು**, ೨೦೦೮, ರವೀಂದ್ರ ಪುಸ್ತಕಾಲಯ, ಸಾಗರ

೩೬. ಭಾರತೀಸುತ, **ಗಿರಿಕನ್ನಿಕೆ**, ೨೦೧೦, ರವೀಂದ್ರ ಪುಸ್ತಕಾಲಯ, ಸಾಗರ

೩೭. ಭಾರತೀಸುತ, **ಎಡಕಲ್ಲು ಗುಡ್ಡದ ಮೇಲೆ**, ೨೦೦೯, ರವೀಂದ್ರ ಪುಸ್ತಕಾಲಯ, ಸಾಗರ

೩೮. ಭಾರತೀಸುತ, **ಬಯಲುದಾರಿ**, ೨೦೧೧, ರವೀಂದ್ರ ಪುಸ್ತಕಾಲಯ, ಸಾಗರ

೩೯. ಭಾರತೀಸುತ, **ಹುಲಿ ಬೋನು**, ೨೦೦೯, ಧೃತಿ ಪ್ರಕಾಶನ, ಬೆಂಗಳೂರು

೪೦. ಭಾರತೀಸುತ, **ಅವಳ ದಾರಿ**, ೨೦೦೪, ಸೌಮ್ಯ ಪ್ರಕಾಶನ, ಬೆಂಗಳೂರು

೪೧. ಭೀಮಂಡ ಈ ಕುಶಾಲಪ್ಪ, **ಕೊಡಗು–ಚರಿತ್ರೆಯ ಮೇಲೆ ಹೊಸ ಬೆಳಕು**, ೨೦೧೬, ಪ್ರಿಂಟ್ ಅವೆನ್ಯೂ, ಮೈಸೂರು

೪೨. ಮುತ್ತಣ್ಣ ಐ. ಮಾ., **ಮುತ್ತಣ್ಣನ ಕವನಗಳು**, ೧೯೬೨, ಜಯಗೌರಿ ಪ್ರೆಸ್, ಬೆಂಗಳೂರು

೪೩. ಮುತ್ತಣ್ಣ ಕೆ. ಪಿ., **ಜಗತ್ತಿಗೊಂದೇ ಕೊಡಗು**, ೧೯೬೯, ಪ್ರೀಮಿಯರ್ ಪ್ರೆಸ್, ಬೆಂಗಳೂರು

೪೪. ಮಾಸ್ತಿ ವೆಂಕಟೇಶ ಅಯ್ಯಂಗಾರ್, **ಚಿಕವೀರರಾಜೇಂದ್ರ**, ೨೦೧೧, ಜೀವನ ಕಾರ್ಯಾಲಯ ಟ್ರಸ್ಟ್, ಬೆಂಗಳೂರು

೪೫. ರಮೇಶ್ ಟಿ. ಪಿ. (ಪ್ರಸಂ), **ಕೊಡಗು ಸಾಹಿತ್ಯ–ಸಂಸ್ಕೃತಿ ದರ್ಶನ**, ೨೦೧೦, ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಮಡಿಕೇರಿ

೪೬. ರಾಜಶೇಖರ ಎಂ. ಎಸ್. (ಸಂ), **ಕೊಡಗು ಜಿಲ್ಲಾ ಸಂಕಥನ**, ೨೦೦೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೪೭. ರಾಮಚಂದ್ರಾಚಾರ್ ಡಿ. ಬಿ., **ಕೊಡಗು**, ೧೯೯೮, ಸುನಂದ ಪ್ರಕಾಶನ, ವಿರಾಜಪೇಟೆ

೪೮. ರಾಮಾನುಜಂ ಪಿ. ಎಸ್., **ಕೊಡವರು**, ೨೦೧೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೪೯. ರೇಖಾ ಎಂ. ಪಿ., **ಆಧುನಿಕ ಕೊಡವ ಸಾಹಿತ್ಯ**, ೨೦೧೦, ಗಾಯತ್ರಿ ಪ್ರಿಂಟರ್ಸ್, ಮೈಸೂರು

೫೦. ಲಲಿತ ಕೆ. ಪಿ., **ವಿರಾಜಪೇಟೆಯ ಸ್ಥಳನಾಮಗಳ ಸಾಂಸ್ಕೃತಿಕ ಅಧ್ಯಯನ**, ೨೦೧೩, ಪಿಎಚ್. ಡಿ., ಪ್ರಬಂಧ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೫೧. ಲಲಿತ ಕೆ. ಪಿ., **ವಿವಕ್ಷಾ**, ೨೦೧೫, ಯಾಜಿ ಪ್ರಕಾಶನ, ಹೊಸಪೇಟೆ

೫೨. ಲಾವಣ್ಯ ಸಿ. ಪಿ., **ಕೊಡಗಿನ ಗೌಡಕನ್ನಡ ಭಾಷಿಕ ನೆಲೆಗಳು**, ೨೦೧೬, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೩. ವಿಜಯ ಪೂಣಚ್ಚ ತಂಬಂಡ, **ಪಳಮೆ**, ೨೦೦೪, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೪. ವಿಜಯ ಪೂಣಚ್ಚ ತಂಬಂಡ, **ಕೊಡಗು ವಿವರಣೆ**, ೨೦೦೫, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೫. ಶೈಲಜಾ ಎ. ಸಿ., **ಕೊಡವರು ಮತ್ತು ಕೊಡಗಿನ ಅರೆಭಾಷೆ ಗೌಡರ ಸಂಸ್ಕೃತಿ- ತೌಲನಿಕ ಅಧ್ಯಯನ**, ೨೦೧೪, ಪಿಎಚ್. ಡಿ. ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೫೬. ಶಶಿಪ್ರಿಯ ಕೊಳಗೇರಿ, **ಕೊಡವ ಭಾಷಾ ದರ್ಶನ**, ೨೦೦೦,ಕಾವ್ಯಾಲಯ, ಜಯನಗರ, ಮೈಸೂರು

೫೭. ಶಿವಶಂಕರ್ ಚಕ್ಕೆರೆ, **ಕೊಡಗಿನ ಜನಪದ ಕಲೆಗಳು**, ೨೦೦೮, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು

೫೮. ಶ್ರೀನಿವಾಸರಾವ್ ಎಸ್. ವಿ., **ಪ್ರೌಢ ಪ್ರತಾಪ ವೀರರಾಜೇಂದ್ರ**, ೧೯೯೦, ಸೌರಭ ಪ್ರಕಾಶನ, ಬೆಂಗಳೂರು

೫೯. ಹರೀಶ್ ಪಿ. ಎನ್., **ಎರವರ ಸಂಸ್ಕೃತಿ**, ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೬೦. ಹೆಬ್ಬಾಲೆ ಕೆ. ನಾಗೇಶ್, **ಕೊಡವರ ಮದುವೆ**, ೧೯೯೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ

೬೧. ಹೆಬ್ಬಾಲೆ ಕೆ. ನಾಗೇಶ್, **ಕಾವೇರಿ ಜಾನಪದ**, ೨೦೦೫, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಆ. ಪರಾಮರ್ಶನ ಗ್ರಂಥಗಳು


೧. ಅಮರೇಶ ನುಗುಡೋಣಿ, **ಸಂಶೋಧನೆಯ ವೈಧಾನಿಕತೆ**, ೨೦೦೮, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಅರವಿಂದ ಮಾಲಗತ್ತಿ (ಪ್ರಸಂ), **ಕನ್ನಡ ವಿಷಯ ವಿಶ್ವಕೋಶ–ಜಾನಪದ**, ೨೦೦೬, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು

೩. ಈರಪ್ಪ ಎಂ ಕಂಬಳಿ, **ಯಲಬುರ್ಗಿಯಿಂದ ಹಿಮಗಿರಿಗೆ**, ೨೦೧೪, ಬೆರಗು ಪ್ರಕಾಶನ, ಕೊಪ್ಪಳ

೪. ಕಲಬುರ್ಗಿ ಎಂ. ಎಂ., **ಸಂಶೋಧನ ಶಾಸ್ತ್ರ**, ೧೯೯೨, ಅಲ್ಲಮ ಮುದ್ರಣಾಲಯ, ಗದಗ

೫. ಕೃಷ್ಣರಾಯ ಅ. ನ., **ಅಖಂಡ ಕರ್ನಾಟಕ**, (ಲೇಖನ– ಕೊಡಗಿನ ಸಮಸ್ಯೆ) ೧೯೪೬, ಪ್ರಗತಿಶೀಲ ಲೇಖಕರ ಸಂಘ, ಬೆಂಗಳೂರು

೬. ಕೇಶವ ಭಟ್ಟ ಟಿ., **ವಾಗ್ಭೂಷಣ**, ೨೦೦೩, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೭. ಗಿರೀಶ್ ಕಾರ್ನಾಡ್, **ಯಯಾತಿ**, ೧೯೬೧, ಮನೋಹರ ಗ್ರಂಥಮಾಲಾ, ಧಾರವಾಡ

೮. ಗುಂಡಪ್ಪ ಡಿ. ವಿ., **ಸಂಸ್ಕೃತಿ**, ೧೯೬೫, ಕಾವ್ಯಾಲಯ ಪ್ರಕಾಶನ, ಮೈಸೂರು

೯. ಚನ್ನಬಸಪ್ಪ ಗೊ. ರು., **ಕರ್ನಾಟಕದ ಜನಪದ ಕಲೆಗಳು**, ೧೯೭೭, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೦. ಜವರೇಗೌಡ ದೇ., **ಜಾನಪದ ಅಧ್ಯಯನ**, ೧೯೭೬, ಡಿ. ವಿ. ಕೆ. ಮೂರ್ತಿ ಪ್ರಕಾಶನ, ಮೈಸೂರು

೧೧. ದಿವಾಕರ ಕೆ, **ತುಳುನಾಡಿನ ಆಚರಣೆಗಳು**, ೨೦೧೩, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೧೨. ನಾಗರಾಜಯ್ಯ ಹಂ. ಪ.,(ಸಂ) **ಮಡಿಕೇರಿ ಸಾಹಿತ್ಯ ಸಮ್ಮೇಳನ**, ೧೯೮೧, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೩. ನಾಗೇಶ ಕಾಲೂರು, **ಕೊಡವ ಭಾಷಿಕ ಜನಾಂಗಗಳ ಸಾಂಸ್ಕೃತಿಕ ಬದುಕು**, ೨೦೧೩, ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ, ಮಡಿಕೇರಿ

೧೪. ಪುಟ್ಟಯ್ಯ ಬಿ. ಎಂ., **ಸಂಶೋಧನೆ ತಾತ್ವಿಕ ಆಯಾಮಗಳು**, ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೫. ಪುರುಷೋತ್ತಮ ಬಿಳಿಮಲೆ, **ಕರಾವಳಿ ಜಾನಪದ**, ೧೯೯೦, ಶಾರಾದಾ ಪ್ರೆಸ್, ಮಂಗಳೂರು

೧೬. ಬೋಜಮ್ಮ ಕೆ. ಎನ್., **'ಪರಂಪರೆ ಮತ್ತು ಆಧುನಿಕತೆಯ ನಡುವೆ ಕೊಡವ ಮಹಿಳೆ–ಸಾಂಸ್ಕೃತಿಕ ಅಧ್ಯಯನ'**, (ಎಂ.ಫಿಲ್) ೨೦೦೭, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೭. ಬೋರಲಿಂಗಯ್ಯ ಹಿ. ಚಿ., **ಕರ್ನಾಟಕದ ಜನಪದ ಕಲೆಗಳ ಕೋಶ**, ೧೯೯೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೮. ಮುತ್ತಣ್ಣ ಐ. ಮಾ., **ಹತ್ತೊಂಬತ್ತನೇ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ**, ೧೯೬೯, ಉಷಾ ಪ್ರೆಸ್, ಮೈಸೂರು

೧೯. ರಮೇಶ್ ಬೇ. ಗೂ., **ಭಾರತೀಯ ಹಬ್ಬಗಳು ಮತ್ತು ಸಂಪ್ರದಾಯಗಳು**, ೧೯೯೮, ವಾಸನ್ ಬುಕ್ ಡಿಪೋ, ಬೆಂಗಳೂರು

೨೦. ರಹಮತ್ ತರೀಕೆರೆ, **ಸಾಂಸ್ಕೃತಿಕ ಅಧ್ಯಯನ**, ೨೦೦೪, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೨೧. ರಾಮಪ್ರಸಾದ್ ಎನ್. ಎಸ್., (ಪ್ರ. ಸಂ.) **ವಿಶ್ವ ಕನ್ನಡ, ಸಂಪುಟ-೩**, ೧೯೭೫, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೨೨. ಲಕ್ಕಪ್ಪಗೌಡ ಹೆಚ್. ಜೆ., **ಕರ್ನಾಟಕ ಬುಡಕಟ್ಟುಗಳು-ಸಂಪುಟ-೧**, ೧೯೯೮, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೨೩. ಸಚ್ಚಿದಾನಂದಯ್ಯ ಕೆ. (ಸಂ), ಬ್ರಹ್ಮಗಿರಿ (ಭಾರತೀಸುತರ ಸಂಸ್ಮರಣ ಗ್ರಂಥ), ೧೯೭೭, ಕಾವೇರಿ ಪ್ರಕಾಶನ, ಮಡಿಕೇರಿ

೨೪. ಸೂರ್ಯನಾಥ ಯು ಕಾಮತ್(ಸಂ), **ಕರ್ನಾಟಕ ರಾಜ್ಯ ಗೆಜೆಟಿಯರ್-ಕೊಡಗು ಜಿಲ್ಲೆ**, ೧೯೯೨, ಲಿಪಿ ಮುದ್ರಣ, ಬೆಂಗಳೂರು

೨೫. ಶೇಷಗಿರಿರಾವ್ ಎಲ್. ಎಸ್., **ಹೊಸಗನ್ನಡ ಸಾಹಿತ್ಯ ಚರಿತ್ರೆ**, ೧೯೯೯, ಅಂಕಿತ ಪುಸ್ತಕ, ಬೆಂಗಳೂರು

೨೬. ಹನುಮಂತಪ್ಪ ತಾರಿಹಳ್ಳಿ, **ಮಾನವ ಮತ್ತು ಸಾಂಸ್ಕೃತಿಕ ಪಲ್ಲಟಗಳು**, ೨೦೧೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಇ. ಲೇಖನಗಳು


೧. ಅನಿಲ್ ಎಚ್. ಟಿ., **ಬೈತಾರೆ ಬೈತಾರೆ**, ೨೩-೩-೨೦೦೪, ವಿಜಯ ಕರ್ನಾಟಕ, ಪುಟ-೩

೨. ಕ್ಲಾರೆ ಆರ್ನಿ, **ಕುಂಡೆ ಹಬ್ಬದ ಅಚ್ಚರಿಯ ಮುಖಗಳು**, ೨೫-೦೯-೨೦೧೬, ಪ್ರಜಾವಾಣಿಯ ಮುಕ್ತಛಂದ ಸಂಚಿಕೆಯಲ್ಲಿ ಪ್ರಕಟವಾದ ಲೇಖನ

೩. ಜಗನ್ನಾಥ್ ಎಸ್., **ಬ್ರಿಟೀಷರ ವಿರುದ್ಧ ಅಪರಂಪಾರ ಸ್ವಾಮಿ ಆಂದೋಲನ**, ೧೦-೦೮-೨೦೧೫, ವಿಜಯವಾಣಿ ದಿನಪತ್ರಿಕೆ

೪. ಜಗನ್ನಾಥ್ ಎಸ್., **ಕೊಡಗು ದಕ್ಷಿಣ ಕನ್ನಡದಲ್ಲಿ ಹೋರಾಟ**, ೧೧-೦೮-೨೦೧೫, ವಿಜಯವಾಣಿ ದಿನಪತ್ರಿಕೆ,

೫. ಡಿಸೋಜ ನಾ., **ಕೊಡಗು ಕೊಡಗೇ; ಸ್ವಿಟ್ಜರ್‌ಲೆಂಡ್ ಅಲ್ಲ**, ೦೮-೧೧-೨೦೧೪, ಪ್ರಜಾವಾಣಿ, ಮಡಿಕೇರಿ ಆವೃತ್ತಿ

೬. ಪ್ರಜಾವಾಣಿ ವರದಿ, **ಕುಂಡೆ ಹಬ್ಬದಲ್ಲಿ ಮದ್ಯ ನಿಷೇಧಕ್ಕೆ ಒತ್ತಾಯ**, ೧೧-೦೫-೨೦೧೬

೭. ಯಶೋದಾ ಮುತ್ತಣ್ಣ, **ಕೊಡಗು**, ತರಂಗ(ವಾರಪತ್ರಿಕೆ)ದಲ್ಲಿ ಪ್ರಕಟಗೊಂಡ ಲೇಖನ, ಸೆಪ್ಟೆಂಬರ್-೨೦೧೬

೮. ಲಲಿತಾ ನಾಯಕ್ ಬಿ. ಟಿ., **ಕನ್ನಡತಿ-ಕೊಡವತಿ ಸಂವಾದ**(ಕವನ), ೦೮-೧೧-೨೦೧೪, ಪ್ರಜಾವಾಣಿ, ಮಡಿಕೇರಿ ಆವೃತ್ತಿ,

೯. ಶಿವರುದ್ರಪ್ಪ ಜಿ. ಎಸ್., **ಕನ್ನಡ ಸಂಸ್ಕೃತಿ - ಒಂದು ಚಿಂತನೆ**, 'ಕಣಜ' ವೆಬ್‌ಸೈಟ್‌ನ ಲೇಖನ

೧೦. ಸಮಾಜಶಾಸ್ತ್ರ ಸಂಘ, **ಜಾತ್ರೆ ಮತ್ತಿತರ ಸಂಶೋಧನಾತ್ಮಕ ಪ್ರಬಂಧಗಳು**, ೧೯೯೦, ನೆಹರು ಸ್ಮಾರಕ ಕಾಲೇಜು, ಸುಳ್ಯ

೧೧. ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆ, ಧರ್ಮಸ್ಥಳ, **ಕೊಡಗಿನ ಸಾಂಪ್ರದಾಯಿಕ ಬೆಳೆಗಳು**, ನಿರಂತರ ಪ್ರಗತಿ (ಮಾಸ ಪತ್ರಿಕೆ), ಮಾರ್ಚ್-೨೦೧೬,

## ಈ. ವಕ್ತಾರರು

| ಹೆಸರು | ವಯಸ್ಸು | ಜಾತಿ | ಉದ್ಯೋಗ | ಸ್ಥಳ |
|---|---|---|---|---|
| ಅಶೋಕ್ ಎಸ್. ಜೆ. | ೪೬ | ಹರಿಜನ | ಉಪನ್ಯಾಸಕ | ಶನಿವಾರಸಂತೆ |
| ದಾಸಪ್ಪ | ೬೦ | ಜೇನುಕುರಬ | ಜಾನಪದ ಕಲಾವಿದ | ತಟ್ಟೇಕೆರೆ ಹಾಡಿ |
| ನಿಧೀಶ್ ಸೋಮಯ್ಯ | ೧೭ | ಕೊಡವ | ವಿದ್ಯಾರ್ಥಿ | ಪೊನ್ನಂಪೇಟೆ |
| ಪಾರೋಂಗಡ ಪದ್ಮಿನಿ ತಿಮ್ಮಯ್ಯ | ೫೫ | ಕೊಡವ | ಕೃಷಿಕರು | ಬಾಳೆಲೆ |
| ಪಂಕಜ ಪಿ. ಆರ್. | ೩೫ | ಜೇನುಕುರುಬ | ಜಿ. ಪಂ. ಸದಸ್ಯೆ | ತಿತಿಮತಿ |
| ಪುಟ್ಟಸ್ವಾಮಿ ಪಿ. ಕೆ. | ೫೦ | ಜೇನುಕುರುಬ | ಕೃಷಿಕರು | ಆನೆಚೌಕೂರು |
| ಪ್ರಕಾಶ್ | ೪೫ | ಎರವ | ತಾ. ಪಂ. ಸದಸ್ಯ | ಬಂಬೂಹಳ್ಳಿ |
| ಪ್ರಭಾಕರ ಟಿ. ಆರ್. | ೪೦ | ಹರಿಜನ | ಕೃಷಿಕರು | ಕುಶಾಲನಗರ |
| ಪ್ರಭು ಎಂ. ಬಿ. | ೫೦ | ಲಿಂಗಾಯತ | ನಿರ್ದೇಶಕ,<br>ಗಿರಿಜನ ಶಿಕ್ಷಣ ಸಂಸ್ಥೆ | ನಾಗರಹೊಳೆ |
| ಬಾಚರಣಿಯಂಡ ಅಪ್ಪಣ್ಣ | ೮೬ | ಕೊಡವ | ಸಾಹಿತಿ | ಕುಶಾಲನಗರ |
| ಬಿಲ್ಲರಿ ಕುಟ್ಟಡ ಪ್ರಭು | ೫೨ | ಕೆಂಬಟ್ಟಿ | ನಿವೃತ್ತ ಸೈನಿಕ | ಅರವತ್ತೊಕ್ಲು |
| ಬೋಜಪ್ಪ | ೩೩ | ಎರವ | ದುಡಿ ಕಲಾವಿದ | ಜಂಗಲ್ ಹಾಡಿ |
| ಬೋಜಮ್ಮ ಕೆ. ಎನ್. | ೪೮ | ಕೊಡವ | ಉಪನ್ಯಾಸಕಿ | ಮಡಿಕೇರಿ |
| ಬೈತಡ್ಕ ಜಾನಕಿ | ೬೦ | ಅರೆಭಾಷೆ ಗೌಡ | ಗೃಹಿಣಿ | ಮಡಿಕೇರಿ |
| ಮುತ್ತ ಪಿ. ಎಸ್. | ೪೫ | ಜೇನುಕುರುಬ | ಕೂಲಿ | ಪೊನ್ನಂಪೇಟೆ |
| ರವಿ | ೩೫ | ಅರೆಭಾಷೆ ಗೌಡ | ಗ್ರಾಮ ಪಂ. ಸದಸ್ಯ | ತೊರೆನೂರು |
| ರಾಜು ಜೆ. ಪಿ. | ೩೫ | ಜೇನುಕುರುಬ | ಗಿರಿಜನ ಮುಖಂಡ | ಕುಶಾಲನಗರ |
| ರಾಮು ಜೆ. ಕೆ. | ೬೦ | ಜೇನುಕರುಬ | ಕೃಷಿಕರ ಸಂಘದ<br>ಅಧ್ಯಕ್ಷ | ತಿತಿಮತಿ |
| ವಿನೋದ್ | ೩೦ | ಕೆಂಬಟ್ಟಿ | ಕೂಲಿ | ಅರವತ್ತೊಕ್ಲು |
| ವೆಂಕಟೇಶ್ | ೨೬ | ಹರಿಜನ | ಸಂಶೋಧನಾರ್ಥಿ | ಪೊನ್ನಂಪೇಟೆ |
| ಸೋಮ | ೭೦ | ಎರವ | ಜನಪದ ಕಲಾವಿದ | ಜಂಗಲ್ ಹಾಡಿ |
| ಸೋಮಣ್ಣ ಜೆ. | ೫೫ | ಹರಿಜನ | ಉಪನ್ಯಾಸಕ | ಗೋಣಿಕೊಪ್ಪಲು |

## ಉ. ಛಾಯಾಚಿತ್ರಗಳು



ತಲಕಾವೇರಿ ಕ್ಷೇತ್ರ



ಓಂಕಾರೇಶ್ವರ ದೇವಾಲಯ



ಮಡಿಕೇರಿ ಕೋಟೆ ಆವರಣ



ಕಾವೇರಿ ನಿಸರ್ಗಧಾಮ



ಅಬ್ಬೆ ಜಲಪಾತ



ಇರ್ಪು ಜಲಪಾತ



ಚೇಲಾವರ ಜಲಪಾತ



ಹಾರಂಗಿ ಜಲಾಶಯ



ತಡಿಯಾಂಡ್‌ಮೋಳ್ ಪರ್ವತ



ರಾಜಾಸೀಟ್‌ನಿಂದ ಕಾಣುವ ದೃಶ್ಯ



ಭತ್ತದ ಗದ್ದೆಗಳು



ಹೋಂ ಸ್ಟೇ



ಹುತ್ತರಿ ಕದಿರು ತೆಗೆಯುತ್ತಿರುವುದು



ಹುತ್ತರಿ ಕುಣಿತ



ಕದಿರನ್ನು ಕೈಮಡಕ್ಕೆ ಅರ್ಪಿಸುತ್ತಿರುವುದು



ಕೊಡವರು ದುಡಿ ನುಡಿಸುತ್ತಿರುವುದು



ಪರೆಕಳಿ ನೃತ್ಯ



ಕೊಂಬಾಟ್ ನೃತ್ಯ



ಸಾಂಪ್ರದಾಯಿಕ ಉಡುಗೆಯಲ್ಲಿ
ಕೊಡವ ಯುವಕ ಯುವತಿಯರು



ಸಾಂಪ್ರದಾಯಿಕ ಉಡುಗೆಯಲ್ಲಿ
ಕೊಡವ ದಂಪತಿಗಳು



ಕೊಡವ ಸ್ತ್ರೀಯರ ಆಭರಣಗಳು



ತೂಗುದೀಪ



ಗಿಂಡಿಯಿಂದ ಹಾಲು ಕುಡಿಸುತ್ತಿರುವುದು



ಪೀಚೆಕತ್ತಿ ಮತ್ತು ವಡಿಕತ್ತಿ



ಬಾಳೆ ಬಿರುದು



ಕೊಡವರ ವಿಶೇಷ ಖಾದ್ಯ



ಉಮ್ಮತ್ತಾಟ್ ನೃತ್ಯ



ಬೆಳ್ಳಿ ಬ್ಯಾಟ್‌ನಿಂದ ಹಾಕಿ ಪಂದ್ಯ ಉದ್ಘಾಟನೆ



ಕೆಸರುಗದ್ದೆ ಫುಟ್‌ಬಾಲ್



ಕೆಸರುಗದ್ದೆ ವಾಲೀಬಾಲ್



ಕೆಸರುಗದ್ದೆ ಹಗ್ಗಜಗ್ಗಾಟ



ಕೆಸರುಗದ್ದೆ ಥ್ರೋಬಾಲ್



ಐನ್‌ಮನೆ ಮುಂದೆ ಕೆಂಬಟ್ಟಿ ದಂಪತಿ



ಸಾಂಪ್ರದಾಯಿಕ ಉಡುಗೆಯಲ್ಲಿ ಕೆಂಬಟ್ಟಿಯರು



ಎತ್ತು ಪೋರಾಟ್‌ಗೆ ಬಳಸುವ ಎತ್ತು



ಪನ್ನಂಗಾಲ ತಮ್ಮೆಗೆ ಹರಕೆಯೊಪ್ಪಿಸುವುದು



ಕೊಡೆಬರುವ ಹಬ್ಬದ ಆಚರಣೆ



ಹಬ್ಬದಲ್ಲಿ ಕೊಡೆ ಅರ್ಪಿಸಿರುವುದು



ಕೆಂಬಟ್ಟಿಯರ ವಸತಿ ಪ್ರದೇಶ



ಜೇನುಕರುಬರ ಹಾಡಿ



ಗುಡಿಸಲು ಎದುರು ಜೇನುಕುರುಬರು



ಕುಂಡೆಹಬ್ಬದ ವೇಷದಾರಿಗಳು



ಗೀಜಗನ ನೃತ್ಯ



ಕುರುಬರ ಕೋಲಾಟ



ಶಿಥಿಲ ಮನೆಯೆದುರು ಎರವ ದಂಪತಿಗಳು



ಎರವರ ಕುಣಿತ



ಗೋಣಿಕೊಪ್ಪದ ಪೇಟೆಗೆ ಬಂದಿಳಿದಿರುವ
ಅಸ್ಸಾಂ ಕಾರ್ಮಿಕರು



ಅಂಗಡಿಯೊಂದರಲ್ಲಿ ಖರೀದಿಸುತ್ತಿರುವ
ಅಸ್ಸಾಮಿಗರು